# ಗೋರಿ-ಗೋಪುರ

(ಕಾದಂಬರಿ)

ಡಿ. ವಿ. ರಾಘವೇಂದ್ರ

ಡಿ.ವಿ.ಕೆ. ಮೂರ್ತಿ ❁ ಪ್ರಕಾಶಕರು ❁ ಮೈಸೂರು.

ಟೆಲ್ಲ. ಆ ರೀತಿಯ ಚರ್ಚೆ ಮಾಡಿ ತೀರ್ಪು ಕೊಡುವುದು ನ್ಯಾಯಾಧಿಪತಿಯ ಕರ್ತವ್ಯವೇ ಹೊರತು ಕಾದಂಬರಿಕಾರನ ಕೆಲಸವಲ್ಲ.

ಅಂತೆಯೆ ಕಾದಂಬರಿಯ ನಾಯಕನಾದ ನಿರಾಶ್ರಿತ ಯಾವಾಗಲೂ ಸಂದೇಹ ಪಡುವ ವ್ಯಕ್ತಿತ್ವವನ್ನು ಹೊಂದಿರುವವನು. ಹಿಂದೂ ಮುಸ್ಲಿಮ ಗಲಭೆಗೆ ಸಿಲುಕಿ ಪೆಟ್ಟು ತಿಂದ ಮೊದಲು ಮುಸ್ಲಿಮರ ಮೇಲೆ ಕೋಪ ಕಾರುವನು.

ಆಗ ತಾನು ಕಂಡ ಆಕಸ್ಮಿಕ ಘಟನೆಗಳನ್ನೇ ಆಧಾರವಾಗಿಟ್ಟು ಕೊಂಡು ಮುಸ್ಲಿಮರನ್ನು ಖಂಡಿಸುತ್ತಾನೆ. ಸ್ವಲ್ಪ ಕಾಲಾನಂತರ ಅವನ ಮನೋಭಾವ ಬದಲಾಯಿಸುತ್ತದೆ. ಮುಸ್ಲಿಮರ ಸುಗುಣಗಳನ್ನು ಕಾಣುವ ಪ್ರಮೇಯ ಬಂದಾಗ ಅವರನ್ನು ಹೊಗಳುತ್ತಾನೆ. ಆ ಸಂದರ್ಭದಲ್ಲಿ ಎಷ್ಟೋ ಬಾರಿ ಹಿಂದೂಗಳ ದುಡುಕುತನವನ್ನು ಕಂಡು ಬೇಸರ ಪಡುತ್ತಾನೆ.

ಮತ್ತೆ ನಿರಾಶ್ರಿತ ಸ್ತ್ರೀಯರಲ್ಲಿ ಹೆಣ್ಣಿನ ಮನೋಗತವನ್ನು ಅರ್ಥ ಮಾಡಿಕೊಳ್ಳಲು ಬಹು ಪ್ರಯಾಸಪಡುತ್ತಾನೆ. ಕೆಲವು ವೇಳೆ ಪ್ರತ್ಯಕ್ಷವಾಗಿ ಕಂಡ ಘಟನೆಗಳನ್ನು ಮನಸ್ಸಿನಲ್ಲೇ ಯೋಚಿಸುತ್ತಾ ತನ್ನಲ್ಲಿ ತಾನೇ ಚರ್ಚಿಸುತ್ತಾನೆ. ಒಮ್ಮೆ ಸರಿಯಾಗಿ ಕಂಡದ್ದು ಮತ್ತೊಮ್ಮೆ ಕೆಟ್ಟದಾಗಿ ಕಾಣುತ್ತದೆ. ಆ ಪರಿಸ್ಥಿತಿಯಲ್ಲೇ ಹೆಣ್ಣಿನ ಕೆಲವು ಅಮೋಘ ಗುಣಗಳನ್ನರಿತು ಮನಸಾರೆ ಹೊಗಳುತ್ತಾನೆ.

ಬೈರಪ್ಪನಂಥ ಹಳ್ಳಿಯವರನ್ನು ಭೇಟಿಮಾಡಿ ಅವರ ಸರಳ ರೀತಿಯನ್ನು ಮೆಚ್ಚುತ್ತಾನೆ. ಹಳ್ಳಿಯ ಕತೆಯನ್ನು ಕೇಳಿ ಮರುಕಪಡುತ್ತಾನೆ. ಹಳ್ಳಿ ಹಾಳಾದ ರೀತಿಯನ್ನು ಮತ್ತೊಮ್ಮೆ ನೆನೆಸಿಕೊಂಡು ಭಾರತ ಸಂಸ್ಕೃತಿಯೇ ಇಳಿಮುಖವಾಗುತ್ತಿರುವ ಚಿತ್ರವನ್ನು ರೂಪಿಸಿಕೊಳ್ಳುತ್ತಾನೆ.

ಅದಷ್ಟು ದೇಶ ಸಂಚಾರ ಮಾಡುವಾಸೆ ಅವನಲ್ಲಿ ಬೇರೂರುತ್ತದೆ. ಕಣ್ಣಿಗೆ ಬೀಳುವ ಸನ್ನಿವೇಶಗಳನ್ನು ಧೈರ್ಯವಾಗಿ ವಿಚಾರಿಸುತ್ತಾನೆ. ಪ್ರಪಂಚ ಹೇಗೋ ಸಾಗುತ್ತಿರುವಂತೆ ತಾನೂ ಜೀವಿಸಲು ನಿಶ್ಚಯಿಸು

ತ್ತಾನೆ. ಆದರೆ ಮರುಕ್ಷಣ ವೈರಾಗ್ಯ ಭಾವವನ್ನೂ ತಾಳುತ್ತಾನೆ. ಸೀತ ರಂಥ ಗೋಮುಖ ವ್ಯಾಘ್ರಗಳನ್ನು ಕಂಡಾಗ ನಿರ್ದಾಕ್ಷಿಣ್ಯವಾಗಿ ನಿಂದಿಸದೆ ಬಿಡುವುದಿಲ್ಲ.

ಇದ್ದಕಿದ್ದಂತೆ ಶಾಂತನಾಗುತ್ತಾನೆ. ಸ್ವಾಮಿಗಳ ಆಳವಾದ ಅನುಭವಕ್ಕೆ ಮೆಚ್ಚಿ ಗಂಭೀರದಿಂದ ಪ್ರಶ್ನೆಗಳನ್ನು ಕೇಳುತ್ತಾನೆ. ಅಲ್ಲಿಂದ ಹೊರಬಂದ ಮೇಲೆ ತಲೆಯಲ್ಲಿ ವಿರುದ್ಧಭಾವಗಳ ಹೊಡೆದಾಟ ಪ್ರಾರಂಭವಾಗಿ ಹುಚ್ಚನಂತಾಗುತ್ತಾನೆ.

ದೇವರ ಗುಡಿಯ ಮುಂದೆ ನಿಂತು ಯಾರದೋ ಜೊತೆ ಮಾತನಾಡುತ್ತಿರುವೆನೆಂದು ಭಾವಿಸಿ ತನ್ನ ಕತೆಯನ್ನೆಲ್ಲಾ ಹೇಳುತ್ತಾನೆ. ಸುಖವಾಗಿ ನಿದ್ದೆ[illegible]ದೆದ್ದು ನಿರಾತಂಕವಾಗಿ ಮಾತನಾಡುವವನಂತೆ ಕತೆಯನ್ನು [illegible]ಶದವಾಗಿ ಬಿಡಿಸಿಹೇಳುತ್ತಾನೆ. ಆದರೆ ಕತೆ ಮುಗಿಯುವ ಹೊತ್ತಿಗೆ ತನ್ನ ಮನಸ್ಸನ್ನು ತಾನೇ ಹಿಡಿಯಲು ಅಸಮರ್ಥನಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ.

ಈ ಕಾದಂಬರಿಯಲ್ಲಿ ಯಾವ ವಿಷಯವನ್ನೂ ಎತ್ತಿ ಹಿಡಿಯುವ ಪ್ರಯತ್ನವಿಲ್ಲ. ವಿಚಿತ್ರ ರೀತಿಯ ಘಟನೆಗಳು ಮಾನವನ ಮೇಲೆ ಯಾವ ರೀತಿಯ ಮಾನಸಿಕ ಪರಿಣಾಮ ಮಾಡಬಲ್ಲದೆಂಬುದನ್ನು ಸೂಕ್ಷ್ಮವಾಗಿ ಕಾಣಬಹುದು.

ಹಿಂದೂ ಮುಸ್ಲಿಮ ಗಲಭೆಯಿಂದ ಶುರುವಾದ ಕಥೆ ಎರಡು ಜನಾಂಗದಲ್ಲೂ ಸುಪ್ತವಾಗಿರುವ ಒಳ್ಳೆಯ ತನವನ್ನು ಕಾಟಲು ಬಯಸುತ್ತದೆ. ಜೊತೆಗೆ ತಮ್ಮ ತಮ್ಮಲ್ಲಿಯೆ ಭೇದಮಾಡುವ ಪ್ರಸಂಗವನ್ನು ಕಂಡು ಮರುಕ ಪಡುತ್ತದೆ. ಸುಗುಣವಾಗಲೀ, ದುರ್ಗುಣವಾಗಲೀ ಒಂದು ಜನಾಂಗಕ್ಕೇ ಮೀಸಲಾಗಿದೆಯೆಂಬ ಭಾವವನ್ನು ಒಪ್ಪಲು ಹಿಂಜರಿಯುತ್ತದೆ.

'ಗೋರಿ-ಗೋಪುರ' ವನ್ನು ಮೊದಲು ನಾನು ಸಣ್ಣ ಕತೆಯಾಗಿ ಬರೆದಿದ್ದೆ. ಆಗಿನಿಂದಲೂ ಅದನ್ನು ಕಾದಂಬರಿಯಾಗಿ ಮಾರ್ಪಡಿಸ

ಬೇಕೆಂಬ ಆಸೆಯಿತ್ತು. ಅದನ್ನು ಆಗುಮಾಡಿಸಿ ನನ್ನ ಮೊದಲ ಕಾದಂಬರಿಯನ್ನು ಪ್ರಕಟಿಸಿರುವ ಮತ್ತು ಇನ್ನೂ ಅನೇಕ ರೀತಿಯಲ್ಲಿ ನನಗೆ ನೆರವು ನೀಡುತ್ತಿರುವ ಹಂಸ ಸಾಹಿತ್ಯದ ಶ್ರೀ ಡಿ. ವಿ. ಕೆ. ಮೂರ್ತಿಯವರಿಗೆ ನಾನು ಚಿರಋಣಿ.

ಕತೆ ಬರೆಯುತಿದ್ದಾಗ ಅದನ್ನೋದಿ ಸಂತೋಷ ಸೂಚಿಸುವುದರ ಜೊತೆಗೆ ಉತ್ತಮ ಸಲಹೆಗಳನ್ನೂ ನೀಡಿದ ಹೆಸರಾಂತ ಕವಿಗಳಾದ ಶ್ರೀ ಎಂ. ಗೋಪಾಲಕೃಷ್ಣ ಅಡಿಗ ಅವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಕಂಡಾಗಲೆಲ್ಲ 'ಹೊಸದೇನು ಬರೆದಿದ್ದೀರಿ ?' ಎಂದು ಭುಜ ತಟ್ಟಿ ಪ್ರೋತ್ಸಾಹಿಸಿದ ಶ್ರೀ ಅಡಿಗ ಕೃಷ್ಣಮೂರ್ತಿಯವರಿಗೆ ಗೌರವಪೂರ್ವಕ ವಂದನೆಗಳನ್ನರ್ಪಿಸುತ್ತೇನೆ.

ಎಷ್ಟೋ ವಿಷಯಗಳನ್ನು ನನ್ನೊಡನೆ ಚರ್ಚಿಸಿ ಕಾದಂಬರಿಯ ಪುಷ್ಟಿಗೆ ಕಾರಣರಾದ ಗೆಳೆಯ ಎ. ಸಿ. ಶ್ರೀನಿವಾಸರಾಯರನ್ನು ಮರೆಯುವಂತಿಲ್ಲ.

ತಮ್ಮದೇ ಆದ ವಿಚಾರಧಾರೆಯಿಂದ ನನ್ನ ಮನಸ್ಸನ್ನು ಸಂತೋಷಪಡಿಸುತ್ತಿರುವ ಗೆಳೆಯರಾದ ವೈ. ನಾ. ಭಟ್, ಎ್. ವಿಶ್ವನಾಥ್, ಟಿ. ಸಿ. ಹಸಿಗೆ, ಜಿ. ವಿ. ನಾರಾಯಣಮೂರ್ತಿ ಮತ್ತು ಇತರ ಹತ್ತಿರದ ಗೆಳೆಯರಿಗೂ ನನ್ನ ಹೃತ್ಪೂರ್ವಕ ವಂದನೆಗಳು.

ಕಾದಂಬರಿಯನ್ನು ವಿಶ್ವಾಸದಿಂದ ಅಂದವಾಗಿ ಮುದ್ರಿಸಿರುವ ಪರಿಮಳ ಪ್ರೆಸ್ಸಿನ ಶ್ರೀ ಹೆಚ್ ಕೆ. ವೇದವ್ಯಾಸಾಚಾರ್ಯ ಮತ್ತು ಶ್ರೀ ಸಿ. ಎಲ್. ನಾರಾಯಣ್ ಅವರಿಗೆ ನಾನು ಆಭಾರಿಯಾಗಿದ್ದೇನೆ.

ಸಹೃದಯರ ಬಳಿ ಸೇರುತ್ತಿರುವ ಕಾದಂಬರಿಯ ವಿಷಯವಾಗಿ ಹೆಚ್ಚಿಗೆ ಹೇಳಲಾರೆ.

ಡಿ. ವಿ. ರಾಘವೇಂದ್ರ.

# ಗೋರಿ—ಗೋಪುರ

"ರಕ್ತ! ರಕ್ತ! ಜಗತ್ತೆಲ್ಲ ರಕ್ತಮಯವಾಗಿದೆಯಲ್ಲ!...." ಎಂದು ಅವನು ಅರಚಿದನು. ಆ ಕೂಗನ್ನು ಕೇಳಿಯೇ ಕೆಲಸಗಾರರೆಲ್ಲ ಓಡಿದರು. ಗೋಪುರಕ್ಕೆ ಕೆಂಪು ಬಣ್ಣ ಬಳಿಯುತ್ತಿದ್ದವರ ಕೈಯಿಂದ ಬಣ್ಣದ ಡಬ್ಬ ಜಾರಿತು ಗಟ್ಟಿಯಾಗಿ ನೆಲದ ಮೇಲೆ ಕೆಂಪು ಬಣ್ಣವು ಹರಡಿಕೊಂಡಿತು. ಇದನ್ನು ನೋಡಿ ಮತ್ತೆ, "ಜಗತ್ತೆಲ್ಲ ರಕ್ತಮಯವಾಗಿದೆಯಲ್ಲ!...." ಎಂದು ಅರಚಿದನು. ಗುಡಿಯ ಗೋಪುರವನ್ನು ಅಲಂಕರಿಸಲು ತಂದಿದ್ದ ಕೆಂಪು ಬಣ್ಣವು ಇವನಿಗೆ ರಕ್ತದಂತೆ ಕಾಣಿಸಿತು. ಬಣ್ಣ ಹರಡಿಕೊಂಡ ಆ ಸ್ವಲ್ಪ ಜಾಗವೇ ಇವನಿಗೆ ಜಗತ್ತಿನ ಭೂಮಿಯಂತೆ ಕಂಡಿತು. ಇದ್ದಕ್ಕಿದ್ದಂತೆ ಬಣ್ಣದ ನೆಲ ಇಂಡಿಯದ ಭೂಪಟದಂತೆ ಮಾರ್ಪಟ್ಟಿತು. ಅದರ ಮೇರೆಗಳನ್ನು ಕಣ್ಣಿಟ್ಟು ನೋಡಿ, "ಅಯ್ಯೋ, ನನ್ನ ಜಾಗವೇ ಕಾಣಿಸದಲ್ಲ! ಇರಲಿ, ಹಿಮಾಲಯದಿಂದ ಕನ್ಯಾಕುಮಾರಿಯವರೆಗೂ ರಕ್ತಮಯವಾಗಿರುವಾಗ ನನ್ನ ಜಾಗ, ಮನೆ, ಮಠ ಕಂಡರೇನು ಬಿಟ್ಟರೇನು? ಆದಗೂ ರಕ್ತದ ಕಾಲುವೆಯ ಕೆಳಗೆ ನನ್ನ ಮನೆ ಮುಳುಗಿರಬೇಕು; ನನ್ನವಳು—ಹೌದು; ಆ ಕೆಂಪುಬಣ್ಣದ ನನ್ನವಳು—ಈ ಕಾಲುವೆಗೆ ಸಿಲುಕಿ ಮತ್ತಷ್ಟು ಕೆಂಪಾಗಿರಬಹುದು; ಆದರೇನಂತೆ? ಮತ್ತಷ್ಟು ಸುಂದರಿಯಾಗಿ ಈಗ ಎದ್ದು ಬರಬಹುದು! ಅಗೋ, ಬಂದೇ ಬಂದಳು!! ಬಾ, ಓಡಿ ಬಾ!!! ಹೆದರಬೇಡ, ಹೆದರಬೇಡ..." ಎಂದು ಆ ನೆಲವನ್ನು ಕೈ ಉಗುರಿನಿಂದ ಒಂದೇ ಸಮನೆ ಗೀರಲು ಪ್ರಾರಂಭಿಸಿದನು. ತನ್ನ ನೆರಳು ಅದರ ಮೇಲೆ ಬಿದ್ದದ್ದನ್ನು ಕಂಡು, "ಎಲೋ, ನನ್ನವಳನ್ನು ಕದಿಯಲು ಬಂದೆಯೋ? ನನ್ನವಳ ಸೌಂದರ್ಯವನ್ನು ಕದಿಯಲು ನಿನಗೆಲ್ಲಿಯ ಹಕ್ಕು? ನಿನ್ನ ಈ ಕಪ್ಪುಬಣ್ಣದ ಆಕಾರವನ್ನು ಅವಳು ಎಂದಾದರೂ ಮೋಹಿಸುವಳೇ? ಇಲ್ಲ; ಎಂದಿಗೂ ಇಲ್ಲ......." ಎಂದು ತನ್ನಲ್ಲಿ ತಾನೆ ರೇಗಿಕೊಂಡನು. ಉಗುರಿನಿಂದ ಕೆರೆದ ಜಾಗ ಸ್ವಲ್ಪ ಬೆಳ್ಳಗೆ ಕಂಡಾಗ, "ಇದು ನನ್ನವಳ ಹಲ್ಲಿನ ಬಣ್ಣವಲ್ಲವೇ? ಹೌದು; ಪೂರ್ಣ

ಬಾಯಿ ತೆರೆದು ತನ್ನ ಹಲ್ಲಿನ ಸಾಲುಗಳಿಂದಲೇ ಜಗತ್ತನ್ನು ಆಕರ್ಷಿಸುವ ಇವಳು ನಿಜವಾಗಿಯೂ ಕಿಲಾಡಿಯಲ್ಲವೇ ? ಅದೆಲ್ಲ ನಿಮಗೇಕೆ ? ನನ್ನವಳ ಸಮಾಚಾರ ನನ್ನಲ್ಲಿ ಮಾತ್ರವಿರಲಿ. ನೀವೆಲ್ಲ ಹೊರಡಿ ......" ಎಂದು ತನ್ನನ್ನು ತಾನೆ ಹೊಗಳಿಕೊಂಡನು. "ಮದುವೆಯಾಗಿ ಆರು ತಿಂಗಳಿಲ್ಲ, ಅಷ್ಟರಲ್ಲೆ ಏಕೆ ಭಯಪಡುವೆ ? ಅವತ್ತು ಅವನು ನಿನ್ನನ್ನು ಎತ್ತಿಕೊಂಡು ಹೋಗಿದ್ದನಲ್ಲವೇ ? ಆದರೇನಂತೆ ? ಎಷ್ಟಾದರೂ ನೀನು ನನ್ನವಳೇ. ಭಯಪಡಬೇಡ. ಬಾ ; ಇರುವ ನಾಲ್ಕುದಿನ ನಮ್ಮಿಬ್ಬರಲ್ಲಿ ಯಾವ ಸಂಶಯವೂ ಬೇಡ....." ಎಂದು ತನ್ನನ್ನು ತಾನೆ ಸಂತೈಸಿಕೊಂಡನು.

ಗುಡಿಯೊಳಗಿನಿಂದ ಕೆಲವರು ಹೊರಕ್ಕೆ ಬರುತ್ತಿದ್ದರು ಅವರೆಲ್ಲರೂ ಹಣೆಯ ಮೇಲೆ ಕುಂಕುಮವಿಟ್ಟಿದ್ದರು. ದೇವರ ಪ್ರಸಾದವನ್ನು ಕೈಯಲ್ಲಿ ಹಿಡಿದು ಕೆಂಪು ಬಣ್ಣದ ಮಂತ್ರಾಕ್ಷತೆಯನ್ನು ತಲೆಯ ಮೇಲೆ ಹಾಕಿ ಕೊಳ್ಳುತ್ತಿದ್ದರು. ಮತ್ತೆ ಆ ಬಣ್ಣವನ್ನೇ ದಿಟ್ಟಿಸಿ ನೋಡುತ್ತ ಇವನು, "ಅಯ್ಯೋ, ರಕ್ತಪಾತವನ್ನು ಹರಿಸಿ ಆ ರಕ್ತದಲ್ಲಿಯೇ ಹಣೆಯನ್ನು ಅಲಂಕರಿಸುವರಲ್ಲ!...." ಎಂದು ಗಟ್ಟಿಯಾಗಿ ಅತ್ತನು. ಅಳುವಿನ ಮಧ್ಯದಲ್ಲಿ ಎಷ್ಟೋ ಮಾತುಗಳನ್ನು ನುಂಗುತ್ತಾ ಹೊರೆಗೆಳೆಯುತ್ತಿದ್ದನು. ಅಳುವಿನ ಶ್ರುತಿ ಅವನಿಗೆ ಏಕನಾದವಾಗಿತ್ತು. ಕೆಲವು ವೇಳೆ ಅಳುತ್ತಲೇ ನಗುತ್ತಿದ್ದನು ; ನಗುತ್ತಲೆ ಕೋಪಿಸಿಕೊಳ್ಳುತ್ತಿದ್ದನು ; ಕೋಪಗೊಂಡೇ ಸಮಾಧಾನವಾಗುತ್ತಿದ್ದನು. ಕಂಡದ್ದೆಲ್ಲವನ್ನೂ "ರಕ್ತ, ರಕ್ತ" ಎನ್ನುವ ಇವನಾರೆಂದು ಯಾರಿಗೂ ತಿಳಿಯಲಿಲ್ಲ. ಹೊಸದಾಗಿ ನಿರ್ಮಿಸಿದ ಗುಡಿಯ ಮುಂದೆ ನಿಂತು ಹೀಗೆ ಅಪಶಕುನಗಳನ್ನು ನುಡಿಯುವ ಇವನು ನಾಸ್ತಿಕ ನೆಂಬುವುದರಲ್ಲಿ ಸಂಶಯವಿಲ್ಲ. ಆದರೆ ಇವನು ವಾದಮಾಡಲು ಬಂದವ ನಂತೆ ಕಾಣುತ್ತಿರಲಿಲ್ಲ. ತನ್ನಲ್ಲಿ ತಾನೆ ಸಂಶಯಪಟ್ಟು ಕೂಗುತ್ತಿದ್ದನೇ ಹೊರತು, ಮತ್ತಿತರರನ್ನು ತನ್ನ ಬಳಿಗೆ ಬರಗೊಡುತ್ತಿರಲಿಲ್ಲ. ತಾನಾ ದರೂ ಗುಡಿಯೊಳಗೆ ಪ್ರವೇಶಿಸಿ ಇತರ ಆಸ್ತಿಕರ ಗುಂಪಿನಲ್ಲಿ ಬೆರೆಯುತ್ತಿರ ಲಿಲ್ಲ. ಗುಡಿಯೊಳಗಣ ಕೆತ್ತನೆಯ ಕೆಲಸಗಳು ಅಸಾಧಾರಣವಾಗಿದ್ದವು ಅದನ್ನು ನೋಡುವುದಕ್ಕೆ ಜನ ಅಸಂಖ್ಯಾತರಾಗಿ ಬರುತ್ತಿದ್ದರು. ಭಾವ

ಪರವಶರಾಗಿ ನೋಡಿದ್ದನ್ನೇ ನೋಡುತ್ತಿದ್ದರು. ಕೆತ್ತನೆಯ ವಿಚಿತ್ರ ಗಳನ್ನೂ, ಕಲೆಗಾರನ ಅಲೌಕಿಕ ಕುಶಲತೆಯನ್ನೂ ಅವರೆಲ್ಲ ಹೊಗಳು ತ್ತಿದ್ದರೆ, ಇವನು ಮಾತ್ರ, "ಅಯ್ಯೋ, ನಮ್ಮ ಸಂಸಾರಗಳನ್ನೆಲ್ಲ ಕೆತ್ತಿಕೆತ್ತಿ ಚೂರು ಮಾಡಿದರು. ಈಗ ಜೀವವಿಲ್ಲದ ಕಲ್ಲುಗಳನ್ನೂ ಸಹ ಬಿಡದೆ ಕೆತ್ತಿ, ಕೆತ್ತಿ ತನಗೆ ತಕ್ಕಂತೆ ಮೂಗು ಬಾಯಿಗಳನ್ನೆಳೆದು ಎಲ್ಲರಿಗೂ ಕಾಣುವಂತೆ ಮೇಲೆ ನಗ್ನವಾಗಿ ನಿಲ್ಲಿಸಿ ಸಂತೋಷಪಡುವರಲ್ಲ...." ಎನ್ನುತ್ತಿದ್ದನು.

ಅವನ ಮಾತುಕಥೆಗಳನ್ನು ಕೇಳಿದ ಕೆಲವರು ಅವನನ್ನು ಮುಸ್ಲಿಮ ದೇಶದಿಂದ ಬಂದ ನಿರಾಶ್ರಿತನೆಂದು ತಿಳಿದರು. ಆದ್ದರಿಂದ ಯಾರೂ ಅವನನ್ನು ಕೆಣಕಲು ಮುಂದುವರಿಯಲಿಲ್ಲ. ಆದರೆ ಎಲ್ಲರೂ ಅವನಿಗೆ ಕಾಣಿಸದಂತೆ ಹೊಂಚುಕೇಳುತ್ತಿದ್ದರು ಸಾಯಂಕಾಲದ ವೇಳೆಯಲ್ಲಿ ನಿರಾಶ್ರಿತನು ಗುಡಿಯ ಮುಂದೆ ನಿಂತು ಯಾವುದೋ ನೆನಪು ಮಾಡಿ ಕೊಳ್ಳುತ್ತಿದ್ದನು. ರಾತ್ರಿಯ ಹೊತ್ತು ಗುಡಿಯ ಮೇಲುಗಡೆ ಟ್ಯೂಬು ಲೈಟನ್ನು ಹತ್ತಿಸಿದ್ದರು. ಆ ಬೆಳಕು ಗೋಪುರದ ಸುತ್ತಲೂ ಕೆತ್ತಿದ್ದ ವಿಗ್ರಹಗಳ ಮೇಲೆ ಬೀಳುತ್ತಿತ್ತು. ಅದನ್ನು ಕಂಡು ನಿರಾಶ್ರಿತನು, "ಅಯ್ಯೋ, ಎಲ್ಲ ಬನ್ನಿ ; ಮೇಲೆ ನೋಡಿ ; ಮನುಷ್ಯನ ದೇಹದ ಸುತ್ತಲೂ ಬೆಂಕಿಯ ಜ್ವಾಲೆಯೆದ್ದಿದೆ. ಅಗೋ, ದೇಹ ಕಪ್ಪಾಗಿ ಉರಿಯುತ್ತಿದೆ. ಇಷ್ಟಾದರೂ ನಿಮಗೆ ದುಃಖವೇ ಬರುವುದಿಲ್ಲವಲ್ಲ ! ...." ಎಂದು ಕಪ್ಪನೆಯ ಕಲ್ಲಿನ ವಿಗ್ರಹಗಳನ್ನು ತೋರುತ್ತ ಕೂಗಾಡಿದನು. ಈ ಆರ್ತಧ್ವನಿ ಯನ್ನು ಕೇಳಿ ಗುಡಿಯೊಳಗಿದ್ದ ಜನರೆಲ್ಲ ಹೊರಕ್ಕೆ ಬಂದರು. ಆದರೆ ಯಾವ ಬೆಂಕಿಯ ಜ್ವಾಲೆಯೂ ಅಲ್ಲಿರಲಿಲ್ಲ ನಿರಾಶ್ರಿತನ ಕೂಗು ಮಾತ್ರ ನಿಲ್ಲಲಿಲ್ಲ. ಹೀಗೆ ಜನರನ್ನು ಕಾರಣವಿಲ್ಲದೆ ಹೆದರಿಸಿದ್ದರಿಂದ ನಿರಾಶ್ರಿತ ನನ್ನು ಜನರೆಲ್ಲರೂ ನಿಂದಿಸಿದರು ; ಜೈಲಿಗೆ ಹಾಕುತ್ತೇವೆಂದು ಹೆದರಿಸಿದರು.

"ಎಂಥಹ ಜೈಲಿಗೆ ಹಾಕುತ್ತೀರಿ ? ..." ಎಂದು ನಿರಾಶ್ರಿತನು ಕೇಳಿ ದನು. ಅದಕ್ಕೆ ಆ ಗುಂಪಿನ ಮುಖಂಡನೊಬ್ಬ ಉತ್ತರ ಹೇಳಲು ಮುಂದೆ ಬಂದನು. ಅವನು ದೊಡ್ಡ ವ್ಯಾಪಾರಿ. ಅನೇಕ ಕಾರ್ಖಾನೆಗಳ ಮೇಲ್ವಿ

ಚಾರಕನಾಗಿದ್ದನು. ಅಲ್ಲಿ ತಯಾರಿಸಿದ ವಸ್ತುಗಳನ್ನು ಮುಸ್ಲಿಮ ದೇಶಗಳಿಗೆ ರವಾನಿಸುತ್ತಿದ್ದನು. ಇದರ ಜೊತೆಗೆ ಕೆಲವು ಯುದ್ಧಸಾಮುಗ್ರಿಗಳನ್ನೂ ಮರೆಯಾಗಿ ಸಾಗಿಸುತ್ತಿದ್ದನು. ಮುಸ್ಲಿಮ ದೇಶದಲ್ಲಿ ಆಗಾಗ ನಡೆಯುತ್ತಿದ್ದ ಗಲಭೆಗಳನ್ನು ಗುಪ್ತವಾಗಿ ತಿಳಿಯುತ್ತಿದ್ದನು. ಹಿಂದೂ ಜನರನ್ನು ನಿಸ್ಸಹಾಯಕರನ್ನಾಗಿ ಮಾಡುವ ವಿಷಯಗಳಲ್ಲಂತೂ ಇವನು ಗುಪ್ತ ಉಪದೇಶಕನಾಗಿದ್ದನು. ಹಾಗಿದ್ದರೂ ತಾನು ಹಿಂದೂದೇಶದಲ್ಲೇ ನೆಲಸಿ ಕೀರ್ತಿ ಗಳಿಸಿದ್ದನು. ಆದರೆ ಅವನನ್ನು ಮುಖಂಡನನ್ನಾಗಿ ಆರಿಸಿದ ಜನಕ್ಕೆ ಅವನು ಗೋಮುಖವ್ಯಾಘ್ರ ಎಂಬ ವಿಷಯ ಎಳ್ಳಷ್ಟೂ ತಿಳಿಯದಿದ್ದುದು ಸೋಜಿಗದ ಸಂಗತಿಯೇ ಸರಿ. ಠೀವಿಯಿಂದ ಮೀಸೆ ತಿರುವುತ್ತಾ ನಿರಾಶ್ರಿತನನ್ನು ನೋಡಿ, "ಹೀಗೆಲ್ಲ ನೀನು ಅರಚಿದರೆ ನಿನ್ನನ್ನು ಖೂನಿಗಾರರು ವಾಸಿಸುವ ಕತ್ತಲಿನ ಜೈಲಿಗೆ ಸೇರಿಸುತ್ತೇನೆ. ತಿಳಿಯಿತೋ....." ಎಂದನು.

"ಆದರೆ ನನ್ನ ಹೆಂಡಿರು ಮಕ್ಕಳನ್ನು ಖೂನಿ ಮಾಡಿದ ಮುಸ್ಲಿಮರು ಇನ್ನೂ ಬೆಳಕಿನಲ್ಲೇ ಓಡಾಡುತ್ತಿರುವರಲ್ಲ!...." ಎನ್ನುತ್ತಾ ನಿರಾಶ್ರಿತನು ತಕ್ಷಣ ತನ್ನ ಸೊಂಟದಿಂದ ಹರಿತವಾದ ಒಂದು ಕತ್ತಿಯನ್ನು ಹೊರತೆಗೆದು ವ್ಯಾಪಾರಿಯ ತಲೆಯನ್ನು ಹಾರಿಸಿದನು. ಕಾರ್ಯ ಮಿಂಚಿನಂತೆ ನಡೆದು ಹೋಯಿತು. ಜನರೆಲ್ಲ ಗುಂಪು ಕಟ್ಟಿದರು. ನಿರಾಶ್ರಿತನನ್ನು ಬಲವಾಗಿ ಹಿಡಿದು ನಿಲ್ಲಿಸಿದರು. ಪವಿತ್ರವಾದ ಗುಡಿಯ ಮುಂದೆ ಇಂಥಹ ಖೂನಿಯಾದದ್ದಕ್ಕಾಗಿ ಜನ ಮತ್ತಷ್ಟು ಸಿಟ್ಟುಗೊಂಡರು. ಗುಂಪಿನ ಮಧ್ಯಕ್ಕೆ ಪೋಲೀಸರು ಧಾವಿಸಿ ಬಂದರು ಪೋಲೀಸಿನವರಿಗೆ ಖೂನಿ ಮಾಡಲ್ಪಟ್ಟವನನ್ನು ಪರಿಶೀಲಿಸುವುದಕ್ಕಿಂತಲೂ ಖೂನಿ ಮಾಡಿದವನ ಮೇಲೆ ಹೆಚ್ಚಿನ ಗಮನವಿತ್ತು. ಅದಕ್ಕಾಗಿಯೇ ತಕ್ಷಣ ನಿರಾಶ್ರಿತನ ಕೈಗಳಿಗೆ ಕಬ್ಬಿಣದ ಬಳೆಗಳನ್ನು ತೊಡಿಸಿದರು.

"ನನ್ನನ್ನೇಕೆ ಕರೆದುಕೊಂಡು ಹೋಗುತ್ತೀರಿ ? ಮನೆ, ಮಠ ಕಳೆದುಕೊಂಡವನಿಗೆ ಮತ್ತೊಮ್ಮೆ ನೆರಳು ತೋರಿಸುತ್ತೀರಾ ? ಕೇವಲ ಒಂದು ಖೂನಿಯಾದದ್ದಕ್ಕೆ ಜನವೆಲ್ಲ ಸೇರಿ ನನ್ನನ್ನ ನಿಮ್ಮ ಕೈಗೆ ಒಪ್ಪಿಸಿದರು.

ಆದರೆ ನಾನು ಪಾಕೀಸ್ಥಾನದಿಂದ ನಿಮ್ಮ ದೇಶಕ್ಕೆ ಬರುವಾಗ ಲೆಕ್ಕವಿಲ್ಲದಷ್ಟು ಖೂನಿಗಳಾದರೂ, ನಮ್ಮ ಬಂಧುಗಳನ್ನು ನಮ್ಮೆದುರಿನಲ್ಲೆ ಕಡಿದು ಹಾಕಿದರೂ ಕೂಡ ನಿಮ್ಮಂಥಹ...ನಿಮ್ಮಂತೆ ಭಯಂಕರ ಉಡುಪು ಧರಿಸಿದವರು—ಒಬ್ಬರೂ ನಮ್ಮನ್ನು ರಕ್ಷಿಸಲು ಬರಲಿಲ್ಲವಲ್ಲ! ಆದ್ದರಿಂದಲೇ ಅಲ್ಲವೇ ಅಲ್ಲಿ ಇನ್ನೂ ವಿಚಿತ್ರತರವಾದ ಕೊಲೆಯಾಟವಾಗುತ್ತಿರುವುದು! ಅವರನ್ನೆಲ್ಲ ಬಿಟ್ಟು ಎಲ್ಲರನ್ನೂ ಕಳಕೊಂಡ ನನಗೇಕೆ ಇಷ್ಟು ಮರ್ಯಾದೆ ಮಾಡುತ್ತಿದ್ದೀರಿ?...." ಎಂದು ನಿರಾಶ್ರಿತನು ತನ್ನದೇ ಆದ ವಿಚಿತ್ರದೃಷ್ಟಿಯಿಂದ ಪೋಲೀಸರನ್ನು ಕೇಳಿದನು. ಇದರಿಂದ ಪೋಲೀಸಿನವ ಕೆರಳಿ, "ನಿನ್ನ ಪುರಾಣವನ್ನೆಲ್ಲ ಇಲ್ಲೇಕೆ ಸುಮ್ಮನೆ ಒದರುವೆ? ಅದನ್ನೆಲ್ಲ ಕೇಳಲು ನಮಗೆ ಪುರುಸೊತ್ತಿಲ್ಲ. ಕೋರ್ಟಿನಲ್ಲಿ ಹೋಗಿ ಹೇಳು. ಅಲ್ಲಿ ತನಕ ಸ್ವಲ್ಪ ನಿನ್ನ ಬಾಯನ್ನು ಮೂರುನಾಲ್ಕು ದಿನ ತಡೆದುಕೊ....? ಎಂದನು. "ಅಯ್ಯೋ, ನಿಮ್ಮಲ್ಲಿ ಈ ವಿಷಯ ಹೇಳುವುದಕ್ಕೆ ಕಾಲಾವಕಾಶ ಬೇರೆ ಉಂಟೋ? ನೀರಿನ ಪ್ರವಾಹ ಜಾಸ್ತಿಯಾದರೆ ದೊಡ್ಡ ಅಣೆಕಟ್ಟು ಹಾಕುತ್ತೀರಿ. ಆದರೆ, ನಿಮ್ಮ ಹತ್ತಿರ—ಅಲ್ಲ; ನಿಮ್ಮ ದೇಶದ ಹತ್ತಿರ—ರಕ್ತ ಪ್ರವಾಹ ರಭಸವಾಗಿ ಸಾಗುತ್ತಿದ್ದರೆ ಅದಕ್ಕೆ ಅಣೆಕಟ್ಟು ಹಾಕಲು ಹೆದರುತ್ತೀರಲ್ಲ!...." ಎಂದು ನಿರಾಶ್ರಿತನು ಅತ್ತನು. ಅವನ ಅಳು ಪೋಲೀಸಿನವನ ಮನಸ್ಸನ್ನೂ ಸ್ವಲ್ಪ ಕರಗಿಸಿತು. ಆದರೆ ಪೋಲೀಸಿನವನು ತಕ್ಷಣ ತನ್ನ ಕಾರ್ಯಭಾರವನ್ನು ಜ್ಞಾಪಿಸಿಕೊಂಡು ದುಃಖಿತನಾದರೂ ಅದನ್ನು ತೋರ್ಪಡಿಸಿಕೊಳ್ಳಲಿಲ್ಲ. ಅವನನ್ನು ಕುರಿತು, "ನೀನು ಹೇಳಿದ ಗಲಭೆಯ ಸ್ಥಳಗಳು ನಮ್ಮ ಎಲ್ಲೆಗೆ ಸೇರಿಲ್ಲ. ಆದ್ದರಿಂದ ಅಲ್ಲಿಯ ವಿಷಯಗಳಿಗೆ ಕೈಹಾಕಲು ನಮಗೆ ಅಧಿಕಾರವಿಲ್ಲ...." ಎಂದನು. ಅದಕ್ಕೆ ನಿರಾಶ್ರಿತನು, "ಇದಕ್ಕೆ ಎಲ್ಲೆ ಬೇರೆ ಉಂಟೇ? ಎಲ್ಲರಿಗೂ ಸೇರಿದ ಪ್ರಶ್ನೆ ಇದು. ಅಲ್ಲಿಂದ ಬರುತ್ತಿರುವ ರಕ್ತದ ಪ್ರವಾಹ ನಾಳೆ ಇಲ್ಲಿಗೂ ಹರಿದೀತು. ಆ ಪ್ರವಾಹಕ್ಕೆ ಸಿಲುಕಿದರೂ ಮುಳುಗದೆ ನಿಮ್ಮ ದೇಶವನ್ನು ನಂಬಿ ಬಂದೆ. ಇಲ್ಲಿ ಬಂದರೆ ನನ್ನ ಕೈಗೆ ಕಬ್ಬಿಣದ ಬಳೆಗಳನ್ನು ತೊಡಿಸಿದಿರಿ. ಕಬ್ಬಿಣವನ್ನು ಕೇವಲ ಬಳೆ ಮಾಡುವುದಕ್ಕೆ ಉಪಯೋಗಿಸಬೇಡಿ, ಅದರ ಬದಲು ಹರಿತಾದ ಕತ್ತಿಯನ್ನಾದರೂ ತಯಾರಿಸಿ......" ಎಂದನು.

ನಿರಾಶ್ರಿತನನ್ನು ಮಾತನಾಡಿಸುವುದು ಪ್ರಯೋಜನವಿಲ್ಲವೆಂದು ತಿಳಿದು ಪೋಲೀಸಿನವರು ಅವನ ಹೇಳಿಕೆಗಳಿಗೆ ಉತ್ತರವೀಯದೆ ಸುಮ್ಮನಿದ್ದರು. ಪೋಲೀಸ್‌ಸ್ಟೇಷನ್ನು ಸಮೀಪಿಸಿತು. ನಿರಾಶ್ರಿತನನ್ನು ಅಲ್ಲೇ ಇಟ್ಟುಕೊಂಡು ಅವನ ಮೇಲೆ ಮೊಖದ್ದಮೆಯನ್ನು ಹಾಕಲು ಏರ್ಪಾಟು ಮಾಡಿದರು. ಅಷ್ಟುಹೊತ್ತಿಗೆ ಸರಿಯಾಗಿ ಗುಡಿಯ ಅಧಿಕಾರಿಗಳು ಬಂದು ಹೇಳಿಕೆ ಕೊಟ್ಟರು. ಗುಡಿಯ ಮುಂದೆ ಖೂನಿ ಮಾಡಿದ ಪಾಪಿಯನ್ನು ಜೀವಸಹಿತ ಬಿಡಬಾರದೆಂದು ತಿಳಿಸಿದರು. ಅಂತೂ ಮೊಖದ್ದಮೆಯ ವಿಚಾರಣೆಯನ್ನು ಮಾರನೆಯ ದಿನವೇ ನಡೆಯುವಂತೆ ಸಿದ್ಧಪಡಿಸಿದರು. ನಿರಾಶ್ರಿತನು ಇದಾವುದಕ್ಕೂ ಮನಸ್ಸು ಕೊಟ್ಟಂತೆ ಕಾಣಲಿಲ್ಲ. ಅವನ ತಲೆಯಲ್ಲಿ ಯೋಚನೆಗಳು ನೂರು ಮೈಲಿಗಳ ಓಟದಲ್ಲಿ ಅಲೆಯುತ್ತಿತ್ತು. ಕತ್ತಲೆಯ ಕೋಣೆಯು ಅವನನ್ನೇನೂ ಭಯಪಡಿಸಲಿಲ್ಲ ಮಧ್ಯರಾತ್ರಿಯ ವೇಳೆಯಲ್ಲಿ ತಕ್ಷಣ ಎದ್ದು ಕುಳಿತನು ನಿಶ್ಶಬ್ದ ವಾತಾವರಣದಲ್ಲಿ ಇವನು ಎದ್ದ ಸದ್ದೇ ಹಿರಿದಾಗಿ ಕೇಳಿಸಿತು. ಕನಸಿನಲ್ಲಿ ಕನವರಿಸುವವನಂತೆ ಜೋರಾಗಿ ಕೂಗಿದನು. ಆ ಕೂಗಾಟವನ್ನು ಕೇಳಿದೊಡನೆಯೆ ಗೊರಕೆ ಹೊಡೆಯುತ್ತಿದ್ದ ಕಾವಲುಗಾರರು ಎಚ್ಚರಗೊಂಡರು. ತಕ್ಷಣ ಕೋಣೆಯ ಬಾಗಿಲು ತೆರೆದು, "ಸುಮ್ಮನೆ ಬಿದ್ದುಕೊಳ್ಳುವುದಕ್ಕೆ ಆಗದೋ? ಇದನ್ನೇನು ನಿನ್ನ ಮನೆಯೆಂದು ತಿಳಿದೆಯೋ? ಗದ್ದಲ ಮಾಡುವುದಾದರೆ ತೆರೆದಿರುವ ಈ ಕಿಟಕಿಯನ್ನೂ ಮುಚ್ಚಿಬಿಡುತ್ತೇವೆ...." ಎಂದರು.

ಅದಕ್ಕೆ ನಿರಾಶ್ರಿತನು, "ಇಷ್ಟು ಸ್ವಲ್ಪ ಗದ್ದಲಕ್ಕೆ ಹೆದರುತ್ತೀರಲ್ಲಾ, ಹೆಂಗಸರಂತೆ. ಇನ್ನು ನಾ ಕೇಳಿದ ಗದ್ದಲವನ್ನು ಹೇಗೆ ಸಹಿಸೀರಿ. ಒಬ್ಬನ ಕೂಗಾಟಕ್ಕೇ ಅಂಜಿದ ನೀವು ಗುಂಪು-ಗುಂಪು ಕಾದಾಟವನ್ನು ಎಂದಾದರೂ ನೋಡಿದ್ದೀರಾ?..." ಎಂದು ಮುಂದೆ ನಿಂತಿದ್ದ ಕಾವಲುಗಾರನ ತಲೆಗೆ ಒಂದೇಸಮನೆ ಏಟುಗಳನ್ನು ಬಿಗಿದನು. ಕಾವಲುಗಾರನ ತಲೆ ಗಿರ್ರೆಂದಿತು "ಏನಿದು! ಏನಿದು!" ಎಂದು ಇತರ ಕಾವಲುಗಾರರು ಕೂಗಿದರು. ಈ ಕೂಗನ್ನು ಕೇಳಿದೊಡನೆ ಅಧಿಕಾರಿಗಳು ಬಂದರು. ಅವರೂ ಸಹ "ಏನಿದು?" ಎಂದು ವಿಸ್ಮಯಗೊಂಡರು. ಅವರೆದುರಿಗೆ

ನಿಶಾಚರನಂತೆ ನಿಂತಿದ್ದ ನಿರಾಶ್ರಿತನು, "ಇದೇ ಸ್ವಾಮಿ, ನಾನು ಪ್ರತಿ ದಿನ ಕಾಣುತ್ತಿದ್ದ ದೃಶ್ಯ...." ಎಂದನು. ಅರೆನಿದ್ರೆಯಲ್ಲಿದ್ದ ಅಧಿಕಾರಿಗಳಿಗೆ ಇವನ ಮಾತುಗಳ ಅರ್ಥ ತಿಳಿಯಲಿಲ್ಲ.

ಮಧ್ಯರಾತ್ರಿಯ ಶಾಂತ ವಾತಾವರಣವನ್ನು ಕಲಕುವಂತೆ ನಿರಾಶ್ರಿತನು ಗಟ್ಟಿಯಾಗಿ, "**ಹಿಂದುವಿನ ಹಿಂದೋಟ**
**ಮುಸ್ಲಿಮನ ಮುಂದೋಟ**
**ಬೀಳಿಯುವನ ಹಿಂದು-ಮುಂದಿನ ಸಹಿನೋಟ**
**ಕಾರುತಿದೆ ತಲೆ-ತಲೆಯ ತಿಕ್ಕಾಟ** ......." ಎಂದು ಸಿಂಹನಾದ ಮಾಡಿದನು. ಹಾಗೆಯೆ ಕೂಗಾಡುತ್ತ ಜೈಲಿನಿಂದ ಹೊರ ಕ್ಕೋಡಿದನು.

ಕಣ್ಣು ಉಜ್ಜಿಕೊಳ್ಳುತ್ತಿದ್ದ ಅಧಿಕಾರಿಗಳಿಗೆ ಈಗ ಎಚ್ಚರವಾಯಿತು. ಓಡುತ್ತಿದ್ದ ನಿರಾಶ್ರಿತನನ್ನು ತಕ್ಷಣ ಹಿಡಿದು ತರಲು ಕಾವಲುಗಾರರಿಗೆ ಅಪ್ಪಣೆ ಮಾಡಿದರು. ಮೊದಲೇ ಏಟು ತಿಂದ ಕಾವಲುಗಾರರು ನಿರಾಶ್ರಿತನನ್ನು ಹಿಂಬಾಲಿಸಲು ಹೆದರಿದರು. ಆದರೆ ಮೇಲಧಿಕಾರಿಗಳ ಕಟ್ಟಪ್ಪಣೆಯಾದ್ದರಿಂದ ನಿರಾಶ್ರಿತನನ್ನು ಹಿಡಿಯಲು ಮನಸ್ಸಿಲ್ಲದ ಮನಸ್ಸಿನಿಂದ ಹೊರಟರು. ನಾಲ್ಕುಜನ ಕಾವಲುಗಾರರು ಹೊರಟಿದ್ದರಿಂದ ನಿರಾಶ್ರಿತನು ಸಿಕ್ಕದೆ ಇರಲಾರನೆಂಬ ಭರವಸೆ ಅಧಿಕಾರಿಗಳಿಗಿತ್ತು.

ಇತ್ತ ಕಾವಲುಗಾರರು ಮಧ್ಯರಾತ್ರಿಯ ಕತ್ತಲಲ್ಲಿ ಒಬ್ಬಂಟಿಗರಾಗಿ ಹೋಗಲು ಹಿಂಜರಿದರು. ಆದ್ದರಿಂದ ನಾಲ್ಕು ಜನರೂ ಒಟ್ಟಿಗೆ ಕೂಡಿ ಹೊರಟರು. ಅದೂ ಅಲ್ಲದೆ ಆ ನಾಲ್ಕುಜನರು ಆ ರಾತ್ರಿಯೆ ಅಮಿತವಾಗಿ ಭಂಗಿಸೇವನೆ ಮಾಡಿದ್ದರಿಂದ ರಾತ್ರಿಯ ಕಪ್ಪು ಮತ್ತಷ್ಟು ಕಪ್ಪಾಗಿ ಪರಿಣಮಿಸಿತು. ನಿದಾನವಾಗಿ ಕಾಲೆಳೆದುಕೊಂಡು ಗುಡಿಯ ಹತ್ತಿರ ಬಂದರು. ಎಷ್ಟಾದರೂ ದೇವರ ಸನ್ನಿಧಿಯೆಂಬ ಧೈರ್ಯದಿಂದ ಅಲ್ಲೇ ಕುಳಿತರು. ಸ್ವಲ್ಪ ಹೊತ್ತಿನಲ್ಲೆ ನಿದ್ದೆಯು ಅವರನ್ನಾವರಿಸಿತು. ಅಷ್ಟರೊಳಗೆ ಯಾವುದೋ ಒಂದು ವ್ಯಕ್ತಿ ಅಲ್ಲಿ ಸುಳಿದಂತಾಯಿತು. ಕರಾಳ ಕತ್ತಲೆಯಾಗಿದ್ದರೂ ಆ ವ್ಯಕ್ತಿ ಗುಡಿಯೊಳಗೆ ಬರದೆ ಯಾವುದೋ ಧ್ಯಾನ ಮಾಡುತ್ತಿತ್ತು.

"ನಿನ್ನೆ ಆ ಹಿಂದೂವೇಷಧಾರಿಯಾದ ಮುಸ್ಲಿಮನನ್ನು ಇಲ್ಲೇ ಕೊಲೆಮಾಡಿದೆ. ಇದರಿಂದಲಾದರೂ ಜನ ಈ ಗುಡಿಯನ್ನು ಗೋರಿಯೆನ್ನುತ್ತಾರೆಂದು ತಿಳಿದಿದ್ದೆ. ಆದರೆ ಇಂದು ನೋಡಿದರೆ ಆ ಮುಸ್ಲಿಮನ ರಕ್ತದ ಕಲೆ ಇಲ್ಲಿ ಕಾಣಿಸುವುದೇ ಇಲ್ಲ. ಅಂತೂ ನಮ್ಮ ನೆರೆನಾಡಲ್ಲಿ ನಿತ್ಯ ಗೋರಿಗಳಾಗುತ್ತಿರುವಾಗ ಇಲ್ಲಿಯ ಜನ ಗುಡಿ ಕಟ್ಟುವರೇ ಹೊರತು ಗೋರಿಯ ಕುರುಹನ್ನೇ ತಿಳಿಯಲಾರರು. ಆದ್ದರಿಂದ ಇಲ್ಲಿಯವರಿಗೆ ಗೋರಿಯ ಪರಿಚಯ ಮಾಡಿಕೊಡಬೇಕಾದುದು ನನ್ನ ಕರ್ತವ್ಯ. ಅದಕ್ಕಾಗಿ ನನ್ನ ರಕ್ತವನ್ನೇ ಇಲ್ಲಿ ಅರ್ಪಿಸುತ್ತೇನೆ. ಎಲ್ಲರಿಗೂ ಕಾಣುವಂತೆ ಈ ಗುಡಿಯ ಗೋಪುರದ ಮೇಲೆಯ ರಕ್ತವನ್ನು ಲೇಪಿಸುತ್ತೇನೆ. ಆದರೆ ರಕ್ತನೈವೇದ್ಯವರ್ಪಿಸುವ ಮೊದಲು ನನ್ನ ಬಾಳಿನ ಮಂತ್ರವನ್ನು ಹೇಳಬೇಕು. ಲಕ್ಷಗಟ್ಟಲೆಯಾಗಿ ಜನ ಅಲ್ಲಲ್ಲಿ ರಕ್ತಕಾಣಿಕೆಯನ್ನು ಅರ್ಪಿಸಿದ್ದರೂ ಅವು ಈ ಗುಡಿಯ ತನಕ ಬರಲಿಲ್ಲ. ಹಾಗೆ ನೋಡಿದಲ್ಲಿ ನಾನೇ ಭಾಗ್ಯವಂತ. ನನ್ನ ಬಂಧು ಮಿತ್ರರ ರಕ್ತಕಾಣಿಕೆಗಳನ್ನು ಹೊತ್ತು ತಂದ ಏಕಮಾತ್ರ ಪೂಜಾರಿಯಾಗಿದ್ದೇನೆ " ಎಂದು ಆ ವ್ಯಕ್ತಿಯು ಗುಡಿಯ ಗೋಪುರವನ್ನು ನೋಡುತ್ತಾ ಹೇಳುತ್ತಿತ್ತು.

ಆ ಧ್ವನಿ ಕೇಳಿ ಕಾವಲುಗಾರರು ಅರೆನಿದ್ದೆಯನ್ನು ಬಿಟ್ಟಿದ್ದರು. ಆ ವ್ಯಕ್ತಿಯನ್ನು ನೋಡಲಾಗಿ ನಿರಾಶ್ರಿತನೆಂದು ಅರಿವಾಯಿತು. ತಕ್ಷಣ ಅವನನ್ನು ಹಿಡಿಯುವ ಧೈರ್ಯ ಕಾವಲುಗಾರರಿಗೆ ಬರಲಿಲ್ಲ. ಅದೂ ಅಲ್ಲದೆ ನಿರಾಶ್ರಿತನು ಮುಂದುವರಿಸುತ್ತಿದ್ದ ಮಾತುಗಳನ್ನು ಕೇಳುವಾಸೆಯಾಯಿತು. ಆದ್ದರಿಂದ ಕಾವಲುಗಾರರು ಮಧ್ಯರಾತ್ರಿಯ ಕಪ್ಪಿನ ಮರೆಯಲ್ಲಿ ನಿಂತು ನಿರಾಶ್ರಿತನನ್ನೇ ನೋಡುತ್ತಿದ್ದರು.

ನಿರಾಶ್ರಿತನು ಮುಂದುವರಿಸಿ, "ನನ್ನ ಕಥೆಯನ್ನು ಕೇಳಲು ಇಲ್ಲಿ ಯಾರೂ ಇಲ್ಲ. ಆದರೂ ಗುಡಿಯಲ್ಲಿ ಕುಳಿತಿರುವ ದೇವರಿದ್ದಾನೆ. ಇಲ್ಲಿಯ ಜನರೆಲ್ಲ ಸೇರಿ ದೇವರನ್ನು ಗುಡಿ ಗೋಪುರಗಳಿಂದ ಕಟ್ಟಿಹಾಕಿದ್ದಾರೆ. ಅಂದ ಮೇಲೆ ನಮ್ಮ ಬಂಧು ಮಿತ್ರರ ಮೇಲೆ ನಡೆಯುತ್ತಿರುವ ಅತ್ಯಾಚಾರಗಳು ಈ ದೇವನಿಗೆಲ್ಲಿ ಅರ್ಥವಾಗಬೇಕು ? ಆದರೂ ನನ್ನ

ಕಥೆಯನ್ನು ಈ ದೇವರ ಸನ್ನಿಧಿಯಲ್ಲೇ ಹೇಳುವೆನು. ಇದರಿಂದ ಲಾದರೂ ದೇವರಿಗೇ ಬುದ್ಧಿ ಬಂದು ಈ ಗುಡಿಯನ್ನು ಬಿಟ್ಟೋಡುವನೆಂದು ನಂಬಿಕೆ. ಆಗ ಜನ ದೇವರಿಲ್ಲದ ಗುಡಿಯನ್ನು ಪೂಜಿಸುವುದಿಲ್ಲ ದೇವರನ್ನು ಹುಡುಕಲು ತಮ್ಮ ನಾಡನ್ನೆಲ್ಲ ಸುತ್ತಾಡುವರು. ಆದರೆ ನನ್ನ ಕತೆಯನ್ನು ಕೇಳಿದ ದೇವರು ಪಕ್ಕದ ನಾಡಿನಲ್ಲಾಗುತ್ತಿರುವ ಗಲಭೆಗಳ ಮಧ್ಯದಲ್ಲಿ ನೆಲಸಿರುತ್ತಾನೆ. ದೇವನನ್ನರಸುವ ನೆಪದಿಂದಲಾದರೂ ಇಲ್ಲಿಯ ಜನ ಅಸಂಖ್ಯಾತವಾಗಿ ಪ್ರತಿದಿನವೂ ಆಗುತ್ತಿರುವ ಗೋರಿಗಳ ಕಡೆ ಗಮನ ಕೊಡುವರು. ನನ್ನೊಬ್ಬನಿಂದ ಅಷ್ಟು ಕೆಲಸವಾದರೆ ನಾನೇ ದನ್ಯ. ಅದಕ್ಕಿಂತಲೂ ಹೆಚ್ಚಿನ ಉಪಕಾರವನ್ನು ನನ್ನವರಿಗೆ ನಾನು ಎಸಗಲಾರೆ.

ಹಿಂದೆ ನನ್ನಿಂದ ಉಪಕಾರವನ್ನು ಪಡೆದವರು ಎಷ್ಟೋ ಮಂದಿ. ಯಾರಲ್ಲೂ ಅಪನಂಬಿಕೆ ಇಡದೆ ಸಹಾಯ ಮಾಡಿದೆ ಆದರೆ ನನ್ನ ನೆಚ್ಚಿನ ಗೆಳೆಯರೇ ನನಗೆ ಹೃದಯಭೇದಕವಾದ ಪೆಟ್ಟುಗಳನ್ನು ಕೊಟ್ಟರು. ಅದನ್ನು ತಲೆಗೆ ಹಚ್ಚಿಕೊಳ್ಳದೆ ಮತ್ತೆ ಮತ್ತೆ ಸಹಾಯ ಮಾಡಿದೆ. ಅದಕ್ಕೆಲ್ಲ ಕಾರಣ ನನ್ನ ಕೈತುಂಬ ಹಣವಿದ್ದುದು. ಆಗ ನನ್ನ ರೀತಿಯೆ ಬೇರೆಯಿತ್ತು. ಹಿಂದಿನ ಶ್ರೀಮಂತಿಕೆಯನ್ನು ಕಟ್ಟಿಕೊಂಡು ಈಗೇಕೆ! ಆದರೂ ದೇವರೆದರಿನಲ್ಲಿ ಮುಚ್ಚುಮರೆ ಬೇಡ.

ಹಿಂದೆ ನಾನೊಬ್ಬ ಶ್ರೀಮಂತನಾಗಿದ್ದರೂ ನನಗೆ ದೇವರಲ್ಲಿ ಅಪಾರ ಪ್ರೇಮ. ಅಂತೆಯೆ ಆಗ ನನ್ನ ಕೈಕೆಳಗೆ ಅನೇಕ ಜನ ಕೆಲಸಗಾರರು ಸೌಹಾರ್ದದಿಂದ ಕೆಲಸ ಮಾಡುತ್ತಿದ್ದರು. ಹಿಂದೂ ಮುಸ್ಲಿಮರೆಂಬ ಭೇದವಿಲ್ಲದೆ ನಾನು ಅವರಿಗೆ ಉಪಕಾರ ಮಾಡುತ್ತಿದ್ದೆ. ಆದರೆ ನನ್ನಿಂದ ಉಪಕಾರ ಹೊಂದಿದವರೇ ನನ್ನನ್ನು ದೇಶದಿಂದ ಹೊರದೂಡಿದರು.

ಒಂದು ದಿನ ನನ್ನ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದ ಮುಸ್ಲಿಮ ಸೇವಕರೆಲ್ಲ ಇದ್ದಕ್ಕಿದ್ದಂತೆಯೆ ಪರಾರಿಯಾದರು. ಆಗ ಪಕ್ಕದ ಹಳ್ಳಿಯಲ್ಲಿ ಹಿಂದೂ-ಮುಸ್ಲಿಮ ಗಲಭೆ ಆರಂಭವಾಗಿತ್ತು. ನನ್ನ ಬಳಿಯಲ್ಲಿ ಬಹಳ ವರ್ಷಗಳಿಂದಲೂ ಒಬ್ಬ ಹಿಂದೂ ಕಾರಕೂನನಿದ್ದ. ಎಲ್ಲ

ಸೇವಕರೂ ನನ್ನ ಕೈಬಿಟ್ಟಾಗ ನನ್ನ ರಕ್ಷಣೆಗೆ ಉಳಿದವನೆಂದರೆ ಇವನೊಬ್ಬನೇ. ಸರ್ಕಾರದವರು ಆಗ ನಮ್ಮೂರಲ್ಲಿ "ಮಾರ್ಷಲ್ ಲಾ"ವನ್ನು ಜಾರಿಗೆ ತಂದರು. ಮನೆ ಬಿಟ್ಟು ಹೊರಗೆ ಹೋಗುವ ಹಾಗಿರಲಿಲ್ಲ. ಆದರೆ ಹೇಗಾದರೂ ಮಾಡಿ ತಪ್ಪಿಸಿಕೊಳ್ಳದಿದ್ದರೆ ನಮ್ಮ ಮರಣವು ಖಂಡಿತವಾಗಿತ್ತು. ಆದ್ದರಿಂದ ನನ್ನ ಬಲಗೈಯಂತಿದ್ದ ಹಿಂದೂ ಕಾರಕೂನನನ್ನು ಕರೆದು ಕೇಳಿದೆ, "ಈಗ ಏನು ಮಾಡುವುದು ? ಸರ್ಕಾರದವರು ಹಾಕುತ್ತಿರುವ ಈ ಪ್ರತಿಬಂಧಕಗಳಿಂದ ಏನೋ ಒಂದು ಒಳಸಂಚು ನಡೆಯುತ್ತಿದೆ ಎಂಬುದು ತಿಳಿಯುವುದು."

ಅದಕ್ಕೆ ಅವನು, "ಈಗ ನಾವು ಹೊರಕ್ಕೆ ಹೋದರೆ ಮಾರ್ಷಲ್ ಲಾವನ್ನು ವಿರೋಧಿಸಿದಂತಾಗುವುದು. ಅದೂ ಅಲ್ಲದೆ ನಾವು ಹಿಂದೂಗಳಾಗಿದ್ದೇವೆ. ನಮ್ಮನ್ನು ಕಂಡೊಡನೆಯೆ ಸೈನಿಕರು ಗುಂಡಿಕ್ಕಿ ಕೊಲ್ಲುವರು. ಅಥವಾ ಸ್ವಲ್ಪ ಕಾಯೋಣವೆಂದರೆ ಮಾರ್ಷಲ್ ಲಾವನ್ನು ಯಾವಾಗ ಸಡಿಲಿಸುವರೋ ಗೊತ್ತಿಲ್ಲ ಮಧ್ಯರಾತ್ರಿಯಲ್ಲಿ ಸಡಿಲಿಸುವರೆಂಬ ನಿರೀಕ್ಷೆ ಇದೆ. ಹಾಗೆ ಮಾಡಿದಲ್ಲಿ ಪಕ್ಕದ ಹಳ್ಳಿಯಲ್ಲಿ ಲೂಟಿ ಮಾಡುತ್ತಿರುವ ಮುಸ್ಲಿಮ ತಂಡವು ಇಲ್ಲಿಗೂ ಬರುವುದು. ನಿದ್ರಿಸುತ್ತಿರುವ ನಮ್ಮನ್ನು ಇದ್ದಕ್ಕಿದ್ದಂತೆ ಪರಲೋಕಕ್ಕೆ ಕಳಿಸುವರು. ಆದ್ದರಿಂದ ಈಗ ತಪ್ಪಿಸಿಕೊಳ್ಳುವ ವಿಧಾನವಾವುದೂ ಹೊಳೆಯುತ್ತಿಲ್ಲ. ಆದರೆ ನನ್ನ ಮನಸ್ಸಿಗೆ ಮಧ್ಯರಾತ್ರಿಯ ತನಕವೂ ಕಾಯುವುದೇ ಉತ್ತಮವೆಂದು ಕಾಣುತ್ತದೆ. ಮುಸ್ಲಿಮರು ನಮ್ಮ ಮೇಲೆ ಧಾಳಿ ಮಾಡುವುದು ನಿಜವಾದರೂ ಗಲಭೆಯ ಮಧ್ಯದಲ್ಲಿ ದೈವಕೃಪೆಯಿದ್ದರೆ ನಮ್ಮ ಜೀವ ಉಳಿಯಬಹುದು ...." ಎಂದನು ತಕ್ಷಣ ನಾನು ಸಮ್ಮತಿಸಿದೆನು. ಬೆಳಗಿನಿಂದ ಹಿಡಿದು ಮಧ್ಯರಾತ್ರಿಯ ತನಕವೂ ದೇವರ ಧ್ಯಾನ ಮಾಡುತ್ತ ಮನೆಯಲ್ಲೇ ಕುಳಿತಿದ್ದೆವು ನನ್ನ ಹೆಂಡತಿ ನನ್ನ ಪಕ್ಕದಲ್ಲೇ ಮಲಗಿದ್ದಳು. ಯಾವ ಯೋಚನೆಯೂ ಇಲ್ಲದೆ ನಿರಾತಂಕವಾಗಿ ಮಲಗಿದ್ದವಳನ್ನು ನೋಡಿ ನನಗೊಮ್ಮೆ ನಗು ಬಂತು ಆದರೆ ಮರುಕ್ಷಣ ದುಃಖವೂ ನನ್ನನ್ನಾವರಿಸಿತು. ನನ್ನವಳ ಸುಂದರ ಮುಖಭಾವವನ್ನು ನೋಡುವುದು

ಇದೇ ಕಡೆಯ ದಿನವೋ ಏನೋ ಎಂದು ಒಮ್ಮೆ ಪರಿತಪಿಸಿದೆ. ಜೀವನದ ಪ್ರತಿಹೆಜ್ಜೆಯಲ್ಲೂ ಅವಳ ಪ್ರತಿಬಿಂಬವನ್ನು ಕಾಣುತ್ತಿದ್ದ ನನಗೆ ಅವಳನ್ನು ಬಿಟ್ಟಿರಲು ಒಂದು ಕ್ಷಣವೂ ಆಗುತ್ತಿರಲಿಲ್ಲ. ಅಂತೆಯೇ ಅವಳು ಕೂಡ ತನ್ನದೇ ಆದ ಮುಗ್ಧ ಮನೋಹರ ಪ್ರವೃತ್ತಿಯಿಂದ ನನ್ನ ಜೀವನದ ಬೆಳಕಾಗಿದ್ದಳು. ಆದರೂ ಕೂಡ ತಾರುಣ್ಯದ ಹೊಸ್ತಿಲಲ್ಲಿ ಆಗತಾನೆ ಕಾಲಿಟ್ಟ ನಾವಿಬ್ಬರು ಎಷ್ಟೋ ಆಶಾಗೋಪುರವನ್ನು ಕಟ್ಟಿದ್ದೆವು. ಅದರ ಸಾಧ್ಯಾಸಾಧ್ಯತೆಯ ವಿಷಯವಾಗಿ ಇಬ್ಬರೂ ಎಷ್ಟೋ ಬಾರಿ ವಾದಿಸಿದ್ದೆವು. ಗಂಟೆಗಟ್ಟಲೆ ಸರಸವಾಗಿ ಮಾತನಾಡುತ್ತಿದ್ದೆವು. ಒಮ್ಮೊಮ್ಮೆ ವಿರಸ ಗೊಂಡವರಂತೆ ನಟಿಸುತ್ತಿದ್ದೆವು. ಅಂತಹ ಸುಖದ ಗಳಿಗೆ ನಾಳೆಯ ದಿನ ಇನ್ನೆಲ್ಲಿ ಬರುವುದು ಎಂಬ ಸಂಶಯ ನನ್ನ ಹೃದಯದ ಮೂಲೆಯನ್ನು ಕೊರೆಯುತ್ತಾ ಬಂತು. ಪಕ್ಕದ ಹಳ್ಳಿಯಲ್ಲಿ ಗಲಭೆಯಾಗುತ್ತಿದ್ದರೂ ತಮ್ಮ ನಗರವು ಸುರಕ್ಷಿತವಾಗಿದೆಯೆಂಬ ಭಾವನೆ ಅವಳಲ್ಲಿತ್ತು. ಅಂತೆಯೆ ನಿಜಪರಿಸ್ಥಿತಿಯನ್ನು ನಾನೂ ಕೂಡ ಅವಳಿಗೆ ಹೇಳಿರಲಿಲ್ಲ.

ಮಧ್ಯರಾತ್ರಿಯ ವೇಳೆಯಲ್ಲಿ ನಗರವೆಲ್ಲ ನಿದ್ರಾಲೋಕದಲ್ಲಿತ್ತು. ಎಲ್ಲ ತರಹದ ಜನರೂ ತಮ್ಮ ತಮ್ಮ ಆಶೆ ಆಕಾಂಕ್ಷೆಗಳನ್ನು ಕನಸಿನಲ್ಲಿ ಕಾಣುತ್ತಿದ್ದರು. ಶ್ರಮಜೀವಿಗಳು, ಕೂಲಿಗಾರರು ಯಾವ ಯೋಚನೆಯೂ ಇಲ್ಲದೆ ತಮ್ಮ ಬೆಳಗಿನ ಆಯಾಸವನ್ನೆಲ್ಲ ನಿದ್ರೆಯಲ್ಲಿ ಹೋಗಲಾಡಿಸಿಕೊಳ್ಳುತ್ತಿದ್ದರು. ಯುವಕರು ಕನಸಿನ ಲೋಕದಲ್ಲಿ ತಮ್ಮ ವ್ಯಕ್ತಿತ್ವವು ಬೃಹದಾಕಾರವಾಗಿ ಬೆಳೆಯುತ್ತಿರುವುದನ್ನು ಕಾಣುತ್ತಿದ್ದರು. ವಯಸ್ಸಾದವರು ತಮ್ಮ ಹಿಂದಿನ ಕೃತ್ಯಗಳನ್ನು ಅರೆನಿದ್ದೆಯಲ್ಲಿ ಮಾತಾಡುತ್ತಲೇ ನೆನಪು ಮಾಡಿಕೊಳ್ಳುತ್ತಿದ್ದರು. ದೇವಾಲಯದಲ್ಲಿ ಯಾವ ಕಳ್ಳತನವೂ ಆಗದೆಂಬ ನಂಬಿಕೆಯಿಂದ ಕೆಲವು ಬೀದಿಯ ವ್ಯಾಪಾರಿಗಳು ತಮ್ಮ ಹಣದ ಚೀಲಗಳನ್ನು ಪಕ್ಕದಲ್ಲಿಟ್ಟುಕೊಂಡು ಮಲಗಿದ್ದರು. ಬೊಗಳುವ ನಾಯಿಯೂ ಕೂಡ ಸದ್ದಿಲ್ಲದೆ ಮಲಗಿತ್ತು. ಇಂತಹ ಸಮಯದಲ್ಲಿ ನಾನೊಬ್ಬ ಮಾತ್ರ ಕಣ್ಣು ಮುಚ್ಚದೆ ಕುಳಿತಿದ್ದೆ. ನನ್ನ ಬಳಿಯಲ್ಲಿದ್ದ ಹಿಂದೂ ಕಾರಕೂನನು ಮನೆಯ ಹೊರಗಡೆ ತಿರುಗಾಡುತಲಿದ್ದ.

ಇದ್ದಕ್ಕಿದ್ದ ಹಾಗೆ ಗಾಳಿ ಜೋರಾಗಿ ಬೀಸತೊಡಗಿತು. ಮರದ ರೆಂಬೆಗಳು ಒಂದಕ್ಕೊಂದು ಹೊಡೆದು ಪಟಪಟ ಶಬ್ದ ಮಾಡಿದವು. ಆ ಆವೇಳೆಯ ಹೊತ್ತಿನಲ್ಲಿ ಕಾಗೆ ಗೂಡುಬಿಟ್ಟು ಓಡಿತು. ತಕ್ಷಣ ಗೂಬೆಯೊಂದು ಮನೆಯ ಮೇಲೆ ಮುದುರಿಕೊಂಡು ತನ್ನ ಜಾಗವನ್ನು ಭದ್ರ ಮಾಡಿಕೊಂಡಿತು. ಗಾಳಿ ಮತ್ತಷ್ಟು ವೇಗವಾಗಿ ಬೀಸತೊಡಗಿತು. ಆ ಗಾಳಿಯೊಡನೆ ಊರ ಗಡಿಯಾರದ ಘಂಟೆಯ ಸದ್ದು ಕರ್ಕಶವಾಗಿ ಕೇಳಬರುತ್ತಿತ್ತು. ಘಂಟೆಯು ಹನ್ನೆರಡು ಬಾರಿ ಬಡಿಯಿತು. ಮಧ್ಯ ರಾತ್ರಿಯಾಗಿದೆಯೆಂದು ಆಗ ತಾನೆ ನನಗೆ ಅರಿವಾಯಿತು ಘಂಟೆಯ ಸದ್ದು ನಿಂತಕೂಡಲೇ ಮತ್ತೊಂದು ಅದಕ್ಕಿಂತಲೂ ಹಿರಿದಾದ ಧ್ವನಿ ಕೇಳಿಸಿತು. ಅದನ್ನು ಕಿವಿಗೊಟ್ಟು ಆಲಿಸಿದೆ. "ಮಾರ್ಷಲ್ ಲಾವನ್ನು ಸಡಿಲಿಸಿದ್ದೇವೆ. ಇನ್ನು ಜನತೆಯು ಯಾವ ಭೀತಿಯನ್ನೂ ಪಡಬೇಕಾಗಿಲ್ಲ" ಎಂದು ಆ ಧ್ವನಿಯು ಸಾರಿತು. ಅಷ್ಟರಲ್ಲಿ ಹೊರಗಡೆಯಿದ್ದ ಹಿಂದೂ ಕಾರಕೂನನು ಒಳಕ್ಕೆ ಓಡಿಬಂದನು. ವಿಗ್ರಹದಂತೆ ಕುಳಿತಿದ್ದ ನನ್ನನ್ನು ಹಿಡಿದೆಬ್ಬಿಸಿದನು.

"ಇನ್ನು ಕುಳಿತಿರಲು ಅವಕಾಶವಿಲ್ಲ. ತಪ್ಪಿಸಿಕೊಳ್ಳುವ ಉಪಾಯವನ್ನು ಹುಡುಕಬೇಕು. ತಾಯಿಯವರನ್ನು ಎಬ್ಬಿಸಿ. ಇನ್ನೇನು ಮುಸ್ಲಿಮ ತಂಡವು ಪಕ್ಕದ ಹಳ್ಳಿಯ ಲೂಟಿಯನ್ನು ಮುಗಿಸಿದೆ. ನಮ್ಮ ಊರ ಕಡೆಗೆ ಮೂರು ನಾಲ್ಕು ಗಂಟೆಗಳಲ್ಲಿ ಬರುವರು. ಸುಮ್ಮನೆ ಕುಳಿತಿದ್ದರೆ ನಮ್ಮನ್ನೆಲ್ಲ ಕಡಿದುಹಾಕುವುದರಲ್ಲಿ ಸಂಶಯವಿಲ್ಲ. ನನಗೊಂದು ಮಾರ್ಗ ಹೊಳೆದಿದೆ. ಈ ಮನೆಗೆ ಸ್ವಲ್ಪ ದೂರದಲ್ಲಿ ಹೊಸದಾಗಿ ಕಟ್ಟಿರುವ ಒಳಚರಂಡಿಗಳ ಮಾರ್ಗವಿದೆ. ಇದೇ ಮಾರ್ಗದಲ್ಲಿ ನಾವು ಮುಂದೆ ಸಾಗಿದರೆ ಈ ಚರಂಡಿಗಳು ಪಕ್ಕದ ಹಳ್ಳಿಯ ತನಕ ನಮ್ಮನ್ನು ಸಾಗಿಸುವುವು. ಆದ್ದರಿಂದ ಮುಸ್ಲಿಮರು ಇಲ್ಲಿಗೆ ಬರುವುದರೊಳಗಾಗಿ ನಾವು ಒಳಚರಂಡಿಯ ಪ್ರವೇಶವನ್ನಾದರೂ ಮುಟ್ಟಬೇಕು. ತಡ ಮಾಡಬೇಡಿ. ರಾತ್ರಿಯ ಈ ಕತ್ತಲಿನಲ್ಲಿ ನಿಮ್ಮ ಈ ಬಿಳಿಯ ವಸ್ತ್ರವು ಎದ್ದು ಕಾಣುವುದರಿಂದ ಕಪ್ಪನೆಯ ಉಡುಪುಗಳನ್ನು ಧರಿಸಿ. ಇನ್ನು ಮನೆಯ ಯೋಚನೆ

ಬೇಡ. ಉಳಿದಿರುವುದು ನಮ್ಮ ಜೀವದ ಯೋಚನೆ ಮಾತ್ರ" ಎಂದು ಆ ಹಿಂದೂ ಸೇವಕನು ನುಡಿದನು.

ನಾನು ತಕ್ಷಣ ನನ್ನ ಹೆಂಡತಿಯನ್ನು ಎಬ್ಬಿಸಿದೆ. ಅವಳ ಕನಸು ಗಳನ್ನು ಮುಂದೆ ಸಾಗದಂತ ಮಾಡಿದೆ. ಅರೆಸಿದ್ಧಿಯಲ್ಲಿ ಅವಳಿಗೆ ಎಚ್ಚರ ವಾಯಿತು. ನನ್ನ ಬೆದರಿದ ಮುಖ ಕಂಡ ಅವಳ ಮುಖ ಮತ್ತಷ್ಟು ಕೆಂಪಾಯಿತು. ಆ ಕ್ಷಣ ಅವಳು ನನಗೆ ಎಂದೂ ಇಲ್ಲದ ಸುಂದರವದನ ಳಾಗಿ ಕಂಡಳು. ನನ್ನ ಸೋತುಬಿದ್ದ ಭುಜದ ಮೇಲೆ ತನ್ನ ಲತೆಯಂತಹ ಕೈಗಳನ್ನು ಬಳಸಿ ಪ್ರಶ್ನೆಗಳ ಸುರಿಮಳೆಯನ್ನೇ ಕರೆದಳು. ಆಗ ನನ್ನ ಸ್ಥಿತಿ ಹೇಳತೀರದು. ಮುಂದೆ ಬಂದ ಮಾತು ಗಂಟಲಿನಿಂದ ಹೊರಕ್ಕೆ ಬರಲು ಹಿಂಜರಿಯಿತು. ತಕ್ಷಣ ನನ್ನವಳು ಹಾಸಿಗೆಯಿಂದೆದ್ದು ನಿಂತು, "ನಾನು ಈಗ ನಿಮ್ಮ ಹೆಂಡತಿಯಲ್ಲ; ಕಾರ್ಯಭಾರವನ್ನು ಹೊತ್ತಿರುವ ನಿಮ್ಮ ಸೇವಕಿ. ನಿಮಗೊದಗಿರುವ ಅಪಾಯವನ್ನು ಹೇಳಲೇಬೇಕು. ಹಿಂದೆ ಎಷ್ಟೋ ಬಾರಿ ನಾವು ಒಟ್ಟಿಗೆ ಕುಳಿತು ಎಷ್ಟೋ ಗಹನವಾದ ವಿಷಯಗಳನ್ನು ಚರ್ಚಿಸಿಲ್ಲವೇ? ಈ ಸಾರಿ ಮಾತ್ರ ಏಕೆ ಹೆದರುತ್ತಿರು ವಿರಿ? ಅಪಾಯ ಒದಗುವ ಸಂಭವವಿದ್ದರೆ ಪರಿಹಾರವನ್ನು ಯೋಚಿಸು ವುದು ಬೇಡವೇ? ಪರಿಹಾರವಿಲ್ಲದಿದ್ದರೆ ಕಷ್ಟದಲ್ಲಿ ಇಬ್ಬರೂ ಸಮಭಾಗಿಗ ಳಾಗೋಣ" ಎಂದು ಹಟ ಹಿಡಿದು ನಿಂತಾಗಲೇ ನಾನು ಬಾಯಿ ಬಿಡ ಬೇಕಾಯಿತು. ನಿಜಪರಿಸ್ಥಿತಿಯನ್ನು ಹೇಳಲೇಬೇಕಾಯಿತು. ಕಡೆಗೆ ಅವಳು, "ಪಕ್ಕದ ಹಳ್ಳಿಯನ್ನು ಈಗಲೇ ಮುಟ್ಟಬೇಕು. ನಮ್ಮ ಮನೆ ಮಠಗಳ ಯೋಚನೆ ಇನ್ನು ಬೇಡ" ಎಂದು ತೀರ್ಪಿತ್ತಳು. ಅವಳ ವಿವೇಕಪೂರಿತವಾದ ತೀರ್ಪಿಗೆ ನಾನು ಮೆಚ್ಚಿದೆ. ಅವಳಂತಹ ಬುದ್ಧಿ ಶಾಲಿನಿಯನ್ನು ಪಡೆದ ನಾನೇ ಧನ್ಯ ಎಂದುಕೊಂಡೆ. ಆದರೆ ಮರುಕ್ಷಣ ಗಂಟಲಲ್ಲಿ ಗಾಳ ಹಾಕಿದ ಹಾಗಾಯಿತು. ಬಂದ ಅದೃಷ್ಟ ಕೇವಲ ಕ್ಷಣಿಕವಾಗಿ ಹೋಯಿತಲ್ಲ ಎಂದು ಮರುಕಪಟ್ಟೆ. ಆದರೂ ಹೆಣ್ಣಿನ ಹೃದಯವೇ ಸನ್ನಿವೇಶವನ್ನು ಅರ್ಥ ಮಾಡಿಕೊಂಡು ಜಾಗೃತವಾಗಿರು ವಾಗ ನಾನು ಕರ್ತವ್ಯಮುಖನಾಗಲೇಬೇಕೆಂದು ತೀರ್ಮಾನಿಸಿದೆ.

ಸುರಂಗಮಾರ್ಗದ ಪ್ರವೇಶವನ್ನು ಸೇರಿದೆವು. ಮುಂದೆ ಹಿಂದೂ ಕಾರಕೂನನು ದಾರಿ ತೋರಿಸುತ್ತಿದ್ದ. ಅವನು ಹೇಳಿದಂತೆಲ್ಲ ನಾವು ಕತ್ತಲಿನಲ್ಲಿ ರಭಸದಿಂದ ಸಾಗಿದೆವು. ಯಾರ ಬಾಯಿಯಲ್ಲಿಯೂ ಮಾತು ಹೊರಡಲಿಲ್ಲ. ಆ ಪರಿಸ್ಥಿತಿಯಲ್ಲಿ ನನ್ನ ಶ್ರೀಮಂತಿಕೆಯ ಚಿಹ್ನೆಗಳು ಮಾಯವಾಗಿದ್ದವು. ನನ್ನನ್ನು ರಕ್ಷಣೆ ಮಾಡುವ ಉದ್ದೇಶದಿಂದ ದಾರಿ ತೋರಿಸುತ್ತಿದ್ದ ಆ ಹಿಂದೂ ಸೇವಕನೇ ನನಗೆ ಸ್ವಾಮಿಯಾದನು. ಎಲ್ಲರೂ ಕನಸಿನ ಲೋಕದಲ್ಲಿದ್ದಂತೆ ಚರಂಡಿಯ ಕಶ್ಮಲಗಳನ್ನು ಲೆಕ್ಕಿಸದೆ ಸಾಗಿದೆವು. ಅನೇಕ ನಾಯಿಗಳು ಆ ಕಶ್ಮಲಗಳ ಮೇಲೆ ಮಲಗಿದ್ದವು. ಗಾಢನಿದ್ರೆಯಲ್ಲಿದ್ದ ಅವುಗಳಿಗೆ ಅಡಚಣೆ ಮಾಡದೆ ಅದರ ಪಕ್ಕದಲ್ಲಿ ಮೆಲ್ಲಗೆ ಸರಿದುಹೋದೆವು

ಪಕ್ಕದ ಹಳ್ಳಿಯನ್ನು ಸೇರಲು ಸ್ವಲ್ಪೇ ದೂರವಿತ್ತು. ಇನ್ನು ಜೀವದ ಭಯವಿಲ್ಲವೆಂಬ ಧೈರ್ಯದಿಂದ ನಿಧಾನವಾಗಿ ಉಸಿರಾಡಲು ಪ್ರಾರಂಭಿಸಿದೆವು.

ಆದರೆ ಇದ್ದಕ್ಕಿದ್ದ ಹಾಗೆ ಆ ಕತ್ತಲಿನ ಚರಂಡಿಯ ಎದುರು ಮಾರ್ಗ ಬೆಳಕಾಯಿತು. ಆ ಬೆಳಕಿನ ಹಿಂದೆ ಅನೇಕ ಮುಖ ಕಾಣಿಸಿತು. ಕುದಿದವರ ಮುಖಗಳಂತೆ ಅವು ಆವೇಶದಿಂದ ಕೂಡಿದ್ದಿತು. ಪ್ರತಿಯೊಬ್ಬರೂ ಕತ್ತಿಯನ್ನು ಹಿಡಿದಿದ್ದರು. ಬೆಳಕಿನಲ್ಲಿ ಆ ಕತ್ತಿಗಳು ಹೊಳೆಯುತ್ತಿದ್ದವು. ಬೆಳಕನ್ನು ಹಿಡಿದ ಮುಖಂಡರುಗಳು ನಮ್ಮ ಹತ್ತಿರಕ್ಕೇ ಬರುವಂತೆ ಭಾಸವಾಯಿತು. ನಾವುಗಳು ಹೆದರಿದೆವು. ಎದೆಯ ಮಿಡಿತ ಜೋರಾಯಿತು.

ನನ್ನ ಹಿಂದೂಸೇವಕ ಧೈರ್ಯದಿಂದ ಒಂದೇ ಸಮನೆ ಹತ್ತಿರ ಬರುತ್ತಿದ್ದ ತಂಡವನ್ನು ಪರೀಕ್ಷಿಸಿದನು. ಒಳಚರಂಡಿಯ ಮಾರ್ಗವೆಲ್ಲ ಬೆಳಕಾಯಿತು. ಕತ್ತಿಗಳನ್ನು ಮೇಲಕ್ಕೆ ಹಿಡಿದು ಮುಸ್ಲಿಮ ತಂಡವು ನಮ್ಮೆದುರಿಗೆ ಬಂದು ನಿಂತಿತು. ಆ ಗುಂಪಿನಲ್ಲಿ ನನ್ನ ಕೈಕೆಳಗೇ ಕೆಲಸ ಮಾಡುತ್ತಿದ್ದ ಅನೇಕ ಮುಸ್ಲಿಮ ಸೇವಕರನ್ನು ಕಂಡೆ. ಅವರು ಪರಾರಿಯಾದುದಕ್ಕೆ ಕಾರಣ ಅಂದು ನನಗೆ ತಿಳಿಯಿತು ಸ್ವಾಮಿದ್ರೋಹವನ್ನೂ ಮಾಡಿದ್ದಲ್ಲದೆ ನನ್ನನ್ನೇ ಕಡಿಯಲು ಬಂದ ಅವರ ದೌರ್ಜನ್ಯವನ್ನು

ನೋಡಿ ನನಗೆ ಬಹಳ ದುಃಖವಾಯಿತು. ಆದರೆ ಅವರು ತಮ್ಮ ಕತ್ತಿ ಗಳನ್ನು ಕೆಳಕ್ಕಿಳಿಸಲೇ ಇಲ್ಲ.

ನನ್ನ ಹಿಂದೂಸೇವಕನು ಬಹಳ ದೈನ್ಯಭಾವದಿಂದ, "ಅಯ್ಯಾ, ನೀವೆಲ್ಲ ನಮ್ಮ ಸ್ವಾಮಿಗಳ ಕಾರ್ಖಾನೆಯಲ್ಲೇ ಕೆಲಸ ಮಾಡುತ್ತಿದ್ದವರ ಲ್ಲವೇ! ನಿಮ್ಮನ್ನೆಲ್ಲ ನಾನು ಸ್ನೇಹಿತರೆಂದೇ ನೋಡುತ್ತಿರಲಿಲ್ಲವೇ! ಈಗಲೂ ಕೂಡ ನೀವು ಗೆಳೆಯರೇ ಹೊರತು ಶತ್ರುಗಳಲ್ಲ. ಯಾರದೋ ದುರ್ಬೋಧನೆಯಿಂದ ಈ ಕೆಲಸಕ್ಕೆ ಕೈಹಾಕಿದ್ದೀರಿ. ನಿಮಗೆ ಸಹಾಯ ನೀಡುತ್ತಿದ್ದ ಸ್ವಾಮಿಯನ್ನು ಮುಟ್ಟಬೇಡಿ" ಎಂದು ತನ್ನ ಕೈಯನ್ನು ನನ್ನ ರಕ್ಷಣೆಗೋಸುಗ ಅಡ್ಡಲಾಗಿ ಚಾಚಿದನು. ಇದನ್ನು ನೋಡಿದ ಮುಸ್ಲಿಮರು ತಮ್ಮ ಕತ್ತಿಗಳನ್ನೆಲ್ಲ ಜೋಡಿಸಿ ಒಂದೇ ರಭಸದಿಂದ ಅವನ ಕೈಯನ್ನು ಕತ್ತರಿಸಿದರು. ರಕ್ತ ಚಿಮ್ಮಿತು. ನೆಲದ ಮೇಲೆ ರಕ್ತ ಹರಡಿ ಕೊಂಡಿತು. ರಕ್ತದ ಮೇಲೆಯೆ 'ಹಾ' ಎಂದು ಕುಸಿದುಬಿದ್ದನು. ಕೆಳಗೆ ಬಿದ್ದ ಅವನನ್ನು ನಾನು ನನ್ನ ಹೆಗಲ ಮೇಲಿರಿಸಿಕೊಂಡೆ. ನನಗಾಗಿ ಸತ್ತ ಆ ಹಿಂದೂ ಆತ್ಮವನ್ನು ನೋಡಿ ಬಹಳ ಮರುಕವಾಯಿತು. ನನ್ನನ್ನೇ ದಿಟ್ಟಿಸಿ ನೋಡುತ್ತ ಮುಸ್ಲಿಮರು ನಿಂತರು. ತಕ್ಷಣ ನನ್ನ ಮೇಲೆ ಗುಂಡು ಹಾರಿಸಿದರು. ಆದರೆ ಆ ಗುಂಡಿನೇಟು ನನಗೆ ಬೀಳದೆ ಸತ್ತುಹೋದವನ ಹೃದಯಕ್ಕೇ ಬಿತ್ತು. ಆಗ ಮುಸ್ಲಿಮರ ಮೇಲೆ ನನ ಗಾದ ಸಿಟ್ಟು ಹೇಳತೀರದು ಸುತ್ತಲಿಂದಲೂ ಗುಂಡಿನ ಶಬ್ದಗಳು ಕೇಳ ತೊಡಗಿದವು. ಆ ಶಬ್ದದಿಂದ ನನಗೆ ಮೂರ್ಛೆ ಬಂದಿತು. ಸೇವಕನ ಹೆಣವನ್ನು ಎತ್ತಿಕೊಂಡೇ ನೆಲಕ್ಕೆ ಕುಸಿದುಬಿದ್ದೆ.

ನನಗೆ ಎಚ್ಚರವಾದಾಗ ಬೆಳಗಿನ ಜಾವವಾಗಿತ್ತು. ನಾಯಿಗಳು ಜೋರಾಗಿ ಬೊಗಳುತ್ತಿದ್ದವು. ಚರಂಡಿಯಿಂದ ಮೇಲಕ್ಕೆದ್ದೆ. ನನ್ನ ಸೇವಕನ ಶವದ ಸುತ್ತಲೂ ನಾಯಿಗಳು ಜಗಳವಾಡುತ್ತ ಹಬ್ಬದೂಟ ವನ್ನು ಮಾಡುತ್ತಿದ್ದವು. ಹಿಂತಿರುಗಿ ನೋಡಿದೆ. ನನ್ನ ಹೆಂಡತಿ ಬಳಿಯ ಲ್ಲಿರಲಿಲ್ಲ. ಸುತ್ತ ಕಣ್ಣು ತಿರುಗಿಸಿ ನೋಡಿದರೂ ನನ್ನವಳ ಚಿಹ್ನೆ ಕಾಣ ಲಿಲ್ಲ. ಅವಳನ್ನು ಹುಡುಕುವ ನೆಪದಿಂದ ಮುಂದೆ ಸರಿದೆ. ಅಕಾಲ

ಮರಣದಿಂದ ವಿಕಾರ ರೂಪಗಳನ್ನು ಹೊಂದಿದ್ದ ನೂರಾರು ಶವಗಳು ನನ್ನ ನಡಿಗೆಗೆ ಸಿಕ್ಕಿಕೊಳ್ಳುತ್ತಿದ್ದವು ನಮ್ಮೂರ ಗಡಿಯನ್ನು ಸೂಚಿಸುವ ಭಾವಿಯ ಹತ್ತಿರಕ್ಕೆ ಬಂದೆ. ಅದು ತುಂಬಿದಂತೆ ಕಾಣಿಸಿತು. ಮುಖ ತಗ್ಗಿಸಿ ನೋಡಿದೆ. ದುಃಖಪೂರಿತವಾದ ಅನೇಕ ಮುಖಗಳು ನನ್ನ ದೃಷ್ಟಿಯನ್ನು ಚುಚ್ಚಿದವು. ಮುಖಭಾವ ಅಪಮಾನದಿಂದ ಹೆದರಿದಂತೆ ಭಾಸವಾಯಿತು. ಆಶ್ರಯವೆಲ್ಲ ನಾಶವಾಗಿದ್ದರೂ ಕೆಲವು ಸ್ತ್ರೀವ್ಯಕ್ತಿಗಳು ಉಳಿದ ಅಲ್ಪಸ್ವಲ್ಪ ಬಟ್ಟೆಬರೆಗಳಿಂದಲೇ ಮಾನ ಮುಚ್ಚಿದ್ದರು. ಇನ್ನು ಕೆಲವರು ಎಲ್ಲವನ್ನೂ ಕಳೆದುಕೊಂಡು ಪೂರ್ಣ ನಗ್ನರಾಗಿ ಇಡೀಲೋಕಕ್ಕೆ ಮಾನವನ ದೌರ್ಜನ್ಯದ ನಗ್ನಸತ್ಯವನ್ನು ಎತ್ತಿಹಿಡಿದಿದ್ದರು. ಅಂತೂ ಎಲ್ಲರೂ ಮುಸ್ಲಿಮರ ಅತ್ಯಾಚಾರಕ್ಕೆ ಸಿಗುವುದಕ್ಕಿಂತ ಮೊದಲು ಆತ್ಮ ಹತ್ಯವೇ ಲೇಸೆಂದು ನಮ್ಮೂರ ಸ್ತ್ರೀಸಮಾಜವೆಲ್ಲ ಭಾವಿಯಲ್ಲಿ ಬಿದ್ದು ಪ್ರಾಣಬಿಟ್ಟಿದ್ದರು ನನ್ನ ಹೆಂಡತಿಗಾಗಿ ಮರುಗಲು ನಾನೊಬ್ಬ ಉಳಿದಿದ್ದೆ. ಆದರೆ ಇತರರಿಗೆ ಆ ಭಾಗ್ಯವೂ ಇರಲಿಲ್ಲ. ಹಾಗೆಯೆ ನೋಡುತ್ತ ನನ್ನ ಮನಸ್ಸು ಕಲ್ಲಾಯಿತು ನಾನೇಕೆ ಬದುಕಬೇಕೆಂದು ಪ್ರಶ್ನೆ ಮಾಡಿದೆ. ಸಾಯುವುದಕ್ಕಿಂತ ನೂರಾರು ಜನರನ್ನು ಕೊಲೆ ಮಾಡಿದ ಮುಸ್ಲಿಮರ ಹೃದಯವನ್ನು ಪರೀಕ್ಷಿಸಬೇಕೆಂಬ ಇಚ್ಛೆಯಾಯಿತು. ಅದಕ್ಕೋಸ್ಕರ ಜೀವವನ್ನು ಬಿಗಿ ಹಿಡಿದೆ. ಹೀಗೆ ನಾನು ನಿರ್ಧರಿಸುತ್ತಿದ್ದಾಗ ನನ್ನ ಎದುರಿಗೆ ಒಂದು ದೃಶ್ಯ ಕಾಣಿಸಿತು.

ಪಕ್ಕದೂರಿನ ಕೆಲವು ಹಿಂದೂಗಳು ಮುಸ್ಲಿಮರನ್ನು ಅಟ್ಟಿಸಿಕೊಂಡು ಬರುತ್ತಿದ್ದರು. ಹಿಂದೂಗಳು ಬಹಳ ಉದ್ರಿಕ್ತರಾದಂತೆ ಕಂಡಿತು. ಮುಸ್ಲಿಮ ತಂಡವು ನಾನು ನಿಂತಿದ್ದ ಗಡಿಯನ್ನು ದಾಟಿ ನಮ್ಮೂರ ಒಳಕ್ಕೆ ಪ್ರವೇಶಿಸಿತು ಮುಸ್ಲಿಮರು ಮಾಡಿದ ಪ್ರಥಮ ಬಾರಿಯ ಲೂಟಿಗೇನೆ ನಮ್ಮೂರ ಮನೆಗಳೆಲ್ಲ ಬರಿದಾಗಿದ್ದವು. ಆದ್ದರಿಂದ ಹಿಂದೂಗಳಿಗೆ ಹೆದರಿ ಬಂದ ಮುಸ್ಲಿಮ ತಂಡವು ಬರಿದಾಗಿದ್ದ ಮನೆಗಳನ್ನು ಹೊಕ್ಕರು. ಇವರ ಹಿಂದೆ ಬರುತ್ತಿದ್ದ ಹಿಂದೂಗಳು ಹೊರಗಡೆಯೇ ನಿಲ್ಲಬೇಕಾಯಿತು. ಇಷ್ಟುಹೊತ್ತಿಗೆ ಸರಿಯಾಗಿ ಒಂದು ಮಿಲಿಟರಿ ಲಾರಿಯು ಹಿಂದೂ

ಗಳಿದ್ದೆಡೆಗೆ ಧಾವಿಸಿ ಬಂದಿತು. "ಗಲಾಟೆಯ ಪ್ರಯುಕ್ತ ಮಾರ್ಷಲ್ ಲಾ ವನ್ನು ಪುನಃ ಹಾಕಿದ್ದೇವೆ" ಎಂದು ಸಾರಿತು. ಇದನ್ನು ಕೇಳಿದ ಹಿಂದೂಗಳು ಮನೆಗಳ ಕಡೆ ಓಡಿದರು. ಆದರೆ ಎಲ್ಲ ಮನೆಗಳಲ್ಲೂ ಮುಸ್ಲಿಮರು ಸೇರಿಬಿಟ್ಟಿದ್ದರು ಮಿಲಿಟರಿಯವರು ಗುಂಡು ಹಾರಿಸಲು ಪ್ರಾರಂಭಿಸಿದರು. ಯಾವ ಮನೆಯಲ್ಲೂ ಜಾಗ ಸಿಕ್ಕದೆ ಹೊರಗಡೆಯೇ ನಿಂತಿದ್ದ ಹಿಂದೂಗಳ ಮೇಲೆ ಸೈನಿಕರು ಗುಂಡು ಹಾರಿಸಿದರು. ಕೆಲವರು ಚದುರಿದ ಹಿಂದೂಗಳನ್ನೂ ಬಿಡದೆ ಅವರ ಹಿಂದೆ ಓಡಿ ಗುಂಡಿಕ್ಕಿ ಕೊಂದರು. ಇದನ್ನೆಲ್ಲ ಮುಸ್ಲಿಮರು ಮನೆಗಳ ಕಿಟಕಿಯಿಂದ ಇಣಿಕಿ ನೋಡುತ್ತಿದ್ದರು. ಅಂತೂ ಹೊರಗಿದ್ದವರೆಲ್ಲ ತಪ್ಪಿಸಿಕೊಳ್ಳಲಾರದೆ ಗುಂಡಿನ ಬಾಯಿಗೆ ತುತ್ತಾದರು.

ನಾನು ಹುಟ್ಟಿ ಬೆಳೆದ ಊರು ಮುಸ್ಲಿಮರ ಪಾಲಾದದ್ದನ್ನು ಕಂಡೆನು. ಗಡಿಯನ್ನು ದಾಟಿ ಮುಂದೆ ಮುಂದೆ ನಡೆದೆನು. ನನ್ನ ಜೀವನದ ಅಲೆತಕ್ಕೆ ಸಿದ್ಧನಾದೆ. ಮಾನ ಮರ್ಯಾದೆ ಹೋದರೂ ಪ್ರಾಣ ವೊಂದಿದ್ದರೆ ಏನನ್ನಾದರೂ ಕಾರ್ಯ ಸಾಧಿಸಬಹುದೆಂದು ತೀರ್ಮಾನಿಸಿದೆ. ಒಬ್ಬಂಟಿಗನಾಗಿ ಮುಸ್ಲಿಮ ಪ್ರದೇಶಗಳಲ್ಲಿ ಸಂಚರಿಸುವುದು ಅಪಾಯಕರವೆಂದು ನನಗೆ ತೋಚಿತು. ಆದ್ದರಿಂದ ಹಿಂದೂರಾಜ್ಯಗಳಿಗೆ ವಲಸೆ ಹೋಗುತ್ತಿದ್ದ ಗುಂಪುಗಳನ್ನು ಹುಡುಕತೊಡಗಿದೆ. ಆಗ ತಾನೆ ಗುಂಪುಗುಂಪು ಪರದಾಟ ಪ್ರಾರಂಭವಾಗಿತ್ತು. ಎಲ್ಲ ಗುಂಪುಗಳೂ ಅತಿ ಚಮತ್ಕಾರಿಕವಾಗಿ ತಪ್ಪಿಸಿಕೊಳ್ಳುವ ಯತ್ನ ಮಾಡುತ್ತಿತ್ತು. ಅಪಾಯ ಪ್ರದೇಶಗಳಲ್ಲಿ ಜನಸಂಖ್ಯೆ ಕಡಿಮೆಯಾಗುತ್ತ ಬಂತು.

ನಾನು ಕೂಡ ಊರಿಂದೂರಿಗೆ ಅಲೆದಾಡುತ್ತ ಅರಾವಳಿ ಬೆಟ್ಟದ ತಪ್ಪಲಿನೆಡೆಗೆ ಬಂದೆನು. ಸುತ್ತಲೂ ಗುಡ್ಡಗಳಿಂದ ಆವರಿಸಲ್ಪಟ್ಟ ಕಣಿವೆಯ ಮಾರ್ಗದಲ್ಲಿ ಹೋಗುತ್ತಿದ್ದೆನು. ಯಾವ ಭಯವೂ ಇಲ್ಲದೆ ಬೇಗಬೇಗನೆ ಹೆಜ್ಜೆ ಹಾಕುತ್ತಿದ್ದೆ. ದೂರದಲ್ಲಿ ಒಂದು ಜನರ ಗುಂಪು ಕಾಣಿಸಿತು. ಆ ಗುಂಪಿನ ಮಧ್ಯದಲ್ಲಿ ಒಂಟೆಯ ಕತ್ತುಗಳು ಎದ್ದು ಕಾಣುತ್ತಿದ್ದವು. ಆ ಒಂಟೆಗಳ ಮೇಲೆ ಅಮೂಲ್ಯವಾದ ವಸ್ತುಗಳನ್ನಿಟ್ಟ

ದ್ದಂತೆ ಕಂಡಿತು. ಅದನ್ನು ಕಾಯುವಂತೆ ಎಡಬಲಗಳಲ್ಲಿ ಶ್ರೀಮಂತ ಉಡುಪು ಧರಿಸಿದ್ದ ವ್ಯಕ್ತಿಗಳು ನಡೆಯುತ್ತಿದ್ದರು. ಶ್ರೀಮಂತರ ಸುತ್ತಲೂ ಕಾರ್ಮಿಕರು ಬಂದೂಕಗಳನ್ನು ರಕ್ಷಣೆಗೋಸ್ಕರ ಹಿಡಿದಿದ್ದರು. ಇತರ ಬಡಜನರು ಶ್ರೀಮಂತರ ಹಿಂದುಗಡೆ ನಡೆದು ಬರುತ್ತಿದ್ದರು. ಅಂತೂ ಶ್ರೀಮಂತರನ್ನು ಅಪಾಯಕ್ಕೀಡಾಗದಂತೆ ಮಧ್ಯದಲ್ಲಿರಿಸಿ ಅವರಿಂದ ಜೀವನ ಸಾಗಿಸುತ್ತಿದ್ದ ಬಡವರೆಲ್ಲ ದೃಢ ಮನಸ್ಸಿನಿಂದ ಮುಂದೆ ಸಾಗುತ್ತಿದ್ದರು.

ನಾನು ಬೇಗಬೇಗನೆ ಗುಂಪಿದ್ದೆಡೆಗೆ ಬಂದೆನು. ಆ ಹಿಂದೂಜನರ ಸಮೂಹವು ಮುಸ್ಲಿಮರಾಜ್ಯವನ್ನು ತ್ಯಜಿಸುತ್ತಿರುವುದು ಕಂಡು ನನಗೆ ಬಹಳ ಸಂತೋಷವಾಯಿತು. ಗುಂಪಿನ ಯಜಮಾನರಾದ ಶ್ರೀಮಂತರಲ್ಲಿ ಬಂದು, ಅವರೊಡನೆ ನಾನೂ ಬರುವುದಾಗಿ ತಿಳಿಸಿದೆನು. ಅದಕ್ಕೆ ಒಬ್ಬ ಶ್ರೀಮಂತನು, "ಆಗಲಿ; ಹಿಂದುಗಡೆ ಇರುವ ರಕ್ಷಣಾದಳದೊಳಗೆ ಸೇರು" ಎಂದನು ಹಾಗೆಯೆ ನಾನು ಹಿಂದಿನ ದಳಕ್ಕೆ ಹೋಗಿ ಸೇರಿದೆ. ಆ ದಳದಲ್ಲಿದ್ದವರೆಲ್ಲ ಬಡವರಾದ ಹಿಂದೂಗಳು. ತಾವಾಗಿಯೇ ಬಂದು ಗುಂಪಿಗೆ ಸೇರಿದವರು. ಅವರಿಂದ ಶ್ರೀಮಂತರಿಗೆ ಹೆಚ್ಚಿನ ಉಪಕಾರ ವಿಲ್ಲದ್ದರಿಂದ ಅವರನ್ನೆಲ್ಲ ಹಿಂದುಗಡೆಯಿಂದ ಬರಬಹುದಾದ ಮುಸ್ಲಿಮರನ್ನು ಎದುರಿಸಲು ನೇಮಿಸಿದ್ದರು. ಶ್ರೀಮಂತರ ಮುಂದುಗಡೆ ಇದ್ದ ಜನ ಕಾರ್ಮಿಕರು. ಬೇರೆಯ ದೇಶಕ್ಕೆ ಹೋದರೂ ಕಾರ್ಮಿಕರಿಲ್ಲದೆ ತಮ್ಮ ಶ್ರೀಮಂತಿಕೆಯು ಬೆಳೆಯಲಾರದೆಂದು ತಿಳಿದಿದ್ದರಿಂದ ಗುಂಪಿನ ಯಜಮಾನರು ಅವರನ್ನು ಪ್ರೀತಿಯಿಂದ ಕಾಣುತ್ತಿದ್ದರು. ಆದ್ದರಿಂದಲೇ ಕಾರ್ಮಿಕರು ತಮ್ಮ ಮುಂದೆಯೆ ಇರುವಂತೆ ನೇಮಿಸಿದ್ದರು. ಇದನ್ನೆಲ್ಲ ನೋಡಿದ ನನಗೆ ಹಿಂದೂ ಶ್ರೀಮಂತರ ಮೇಲೆಯೆ ಕೋಪ ಬಂದಿತು; ಇಡೀ ಜನಾಂಗಕ್ಕೇ ವಿನಾಶಕಾಲ ಬಂದಿರುವಾಗ ಹಿಂದೂಗಳು ತಮ್ಮ ತಮ್ಮಲ್ಲಿಯೆ ಭೇದ ಮಾಡುತ್ತಿರುವುದನ್ನು ಕಂಡು ಬೇಸರವಾಯಿತು. ಮುಂದೆ ಎಲ್ಲ ಜನಾಂಗವೂ ನಾಶವಾಗಿ ಬಡವ-ಬಲ್ಲಿದನೆಂಬ ಎರಡೇ ಜನಾಂಗ ಉಳಿಯುವುದೆಂದು ತೀರ್ಮಾನಿಸಿದೆ; ಹಿಂದೂ-ಮುಸ್ಲಿಮ ಜಗಳ

ಕ್ಕಿಂತ ಸಹಸ್ರಪಾಲು ಕ್ರೂರವಾಗಿ ಬಡತನದ ಹೆಬ್ಬಾವು ಎದ್ದೇಳಬಹು ದೆಂದು ಊಹೆ ಮಾಡಿದೆ. ಆದರೆ ಮರುಕ್ಷಣದಲ್ಲಿ ಮುಸ್ಲಿಮರ ಅತ್ಯಾ ಚಾರಗಳು ಜ್ಞಾಪಕಕ್ಕೆ ಬಂದು ಕೆರಳಿಸಿತು. ಅದರಿಂದ ಮುಸ್ಲಿಮ ರಾಷ್ಟ್ರ ದಲ್ಲಿರುವುದಕ್ಕಿಂತ ಬಡವನಾಗಿ ಹಿಂದುವಾಗಿರುವುದೇ ಲೇಸೆಂದೆನಿಸಿತು.

ಹೀಗೆ ನಿರ್ಧರಿಸುತ್ತಿರುವಾಗ ಮುಂದಿದ್ದ ಶ್ರೀಮಂತರು ಗುಂಪನ್ನು ನಿಲ್ಲುವಂತೆ ಆಜ್ಞೆ ಮಾಡಿದರು. ಹಿಂದಿದ್ದ ದಳದವರಿಗೆಲ್ಲ ಬಂದೂಕ ಗಳನ್ನು ಹಂಚಿಸಿದರು ಹಿಂದಿನಿಂದ ಮುಸ್ಲಿಮರೇನಾದರೂ ಬಂದರೆ ಅವರನ್ನು ಎದುರಿಸಬೇಕೆಂದು ಅಪ್ಪಣೆ ಮಾಡಿದರು. ಹಾಗೆಯೇ ನನ್ನ ಪಾಲಿಗೂ ಒಂದು ಬಂದೂಕ ಬಂದಿತು.

ಆಗಲೆ ಸಂಜೆಯ ಸಮಯವಾಗಿತ್ತು. ಕಣಿವೆಯಲ್ಲಿ ಸೂರ್ಯ ಕಿರಣಗಳ ತಿಳಿಬೆಳಕು ಹರಡಿತ್ತು ಎರಡು ಕಡೆಯೂ ನಿಂತಿದ್ದ ಗುಡ್ಡಗಳು ತಮ್ಮ ನೆರಳುಗಳಿಂದ ಕಣಿವೆಯ ಬೆಳಕನ್ನು ಮುಚ್ಚಲು ಹವಣಿಸುತ್ತಿದ್ದವು.

ನಾವೆಲ್ಲ ಬಹಳ ವೇಗದಿಂದ ನಡೆಯುತ್ತಿದ್ದೆವು. ನಿಶ್ಶಬ್ದವಾದ ಆ ಕಣಿವೆಯ ಮಾರ್ಗದಲ್ಲಿ ನಮ್ಮ ಕಾಲ ಸಪ್ಪಳವೇ ಜೋರಾಗಿ ಕೇಳಿಸು ತ್ತಿತ್ತು. ಸಂಜೆಯ ತಿಳಿಕತ್ತಲು ಹರಡಿದಂತೆಲ್ಲ ನಾವೆಲ್ಲ ಬಹಳ ಭೀತಿ ಗೊಂಡೆವು. ಇಷ್ಟುಹೊತ್ತಿಗೆ ಸರಿಯಾಗಿ ದೊಡ್ಡ ಬಿರುಗಾಳಿಯು ಹಿಂದಿ ನಿಂದ ನಮ್ಮನ್ನು ನೂಕಿದಂತಾಯಿತು. ಗಾಳಿಯಲ್ಲಿ ಮಣ್ಣಿನ ಕಣಗಳು ಸೇರಿ ಕಣ್ಣನ್ನು ಮುಚ್ಚಿಸಿದವು. ಹಿಂದೆ ತಿರುಗಿ ನೋಡಿದೆವು. ಅಲ್ಲಿ ಒಂಟೆಗಳ ಮೇಲೆ ಕುಳಿತು ಕೆಲವು ಮುಸ್ಲಿಮರು ಅಟ್ಟಿಸಿಕೊಂಡು ಬರುತ್ತಿ ದ್ದರು. ನಾವಿದ್ದೆಡೆಗೆ ಒಂದೇ ಓಟದಿಂದ ನೆಗೆದು ಬಂದರು ಅವರಿಗೂ ಮತ್ತು ನಮ್ಮ ದಳದವರಿಗೂ ಕಲ್ಲುಗಳ ಹೊಡೆದಾಟ ಪ್ರಾರಂಭವಾಯಿತು. ಕೆಲವರನ್ನು ಕಣಿವೆಯಿಂದ ಮೇಲಕ್ಕೆಸೆದರು ಇನ್ನು ಕೆಲವರನ್ನು ಚಾಕು ಗಳಿಂದ ತಿವಿದರು. ಮತ್ತೆ ಕೆಲವರನ್ನು ಗುಂಡಿಕ್ಕಿ ಕೊಂದರು. ಈ ಗಲಭೆಯಲ್ಲಿ ಬರಿಯ ಹಿಂದೂಗಳೇ ಅಲ್ಲದೆ ಮುಸ್ಲಿಮರು ಕೂಡ ಸತ್ತರು. ಈ ಗಲಾಟೆಯನ್ನು ನೋಡಿ ಶ್ರೀಮಂತರು ಗುಂಪಿನ ಮಧ್ಯದಿಂದ ಮುಂದೆ ಮುಂದೆ ಓಡಿದರು. ಒಂಟೆಗಳ ಮೇಲಿದ್ದ ತಮ್ಮ ಆಸ್ತಿಪಾಸ್ತಿಗಳನ್ನೆಲ್ಲ

ಪಟ್ಟಿ ಮಾಡಿದನು. ಅಷ್ಟರಲ್ಲಿ ಒಂದು ದೊಡ್ಡ ಲಾರಿಯು ಡೇರೆಯ ಹತ್ತಿರಕ್ಕೆ ಬಂದಿತು. ಅದರ ಮೇಲೆ 'ಪಬ್ಲಿಕ್ ಸರ್ವಿಸ್' ಎಂದು ಬರೆದಿದ್ದಿತು. ಲಾರಿಯಿಂದ ಕೆಲವು ಮುಸ್ಲಿಮರು ಇಳಿದು ಒಳಗಡೆ ಇದ್ದ ಹಿಂದೂ ಸ್ತ್ರೀಯರನ್ನು ಕೆಳಗಿಳಿಸಿದರು. ಲಾರಿಯ ಮೇಲೆ ಹತ್ತಿ ಲೂಟಿ ಮಾಡಿದ ವಸ್ತುಗಳನ್ನು ಕೆಳಕ್ಕೆ ಸಾಗಿಸಿದರು. ಇದನ್ನು ಕಂಡು ನನಗೆ ಕೋಪ ಬಂದರೂ ಎಲ್ಲರಂತೆ ಸಂತೋಷಭರಿತನಾಗಿ ನಟಿಸಿದೆನು. ಸರ್ಕಾರವೇ ಅವರಿಗೆ ಕೊಡುತ್ತಿರುವ ಸೌಲಭ್ಯಗಳ ಅರಿವಾಯಿತು. 'ಪಬ್ಲಿಕ್ ಸರ್ವೀಸ್' ಲಾರಿಗಳು ಅವರ ಅತ್ಯಾಚಾರಕ್ಕೆ ಸಾಧನಗಳಾಗಿದ್ದವು.

ಎಲ್ಲ ಲೂಟಿಗಾರರನ್ನು ಒಂದೆಡೆ ಸೇರಿಸಿ ಕಂಠಪೂರ್ತಿಯಾಗುವಂತೆ ಕುಡಿಸಿದರು. ಆಗ ಪಟ್ಟಿಯನ್ನು ಪೂರ್ಣಮಾಡಿ ತರುಣನು ಮೇಲೆದ್ದು, "ನಿಮ್ಮಗಳ ಸಹಕಾರದಿಂದ ನಮ್ಮ ಎಣಿಕೆಗಿಂತಲೂ ಹೆಚ್ಚಿನದಾಗಿ ಹಣ ಲಭಿಸಿದೆ ಎಲ್ಲ ಜಿಲ್ಲೆಗಳ ಸಂಸ್ಥೆಗಿಂತಲೂ ನಮ್ಮ ಸಂಸ್ಥೆಯೇ ಮುನ್ನುಗ್ಗಿ ಯಶಸ್ವಿಯಾಗಿ ಕಾರ್ಯಾಚರಣೆಯನ್ನು ಸಾಗಿಸಿದೆ. ನಿಮ್ಮ ಮುಂದಿನ ಚಟುವಟಿಕೆಗಳನ್ನು ಮೌಲಾನರು ತಿಳಿಸುವರು" ಎಂದು ಹೇಳಿ ಕುಳಿತನು.

ಮೌಲಾನನು ಎದ್ದು, "ಗೆಳೆಯರೇ, ನಮ್ಮ ಇಸ್ಲಾಂ ಸಂಸ್ಕೃತಿಯನ್ನು ಬೆಳಗಲು ಪಣತೊಟ್ಟ ನಿಮಗೆ ನಾನು ಹೆಚ್ಚಿಗೆ ಹೇಳಬೇಕಾಗಿಲ್ಲ. ಆದರೂ ಒಂದು ಸಂಸ್ಕೃತಿಯು ಭದ್ರವಾಗಿ ನಿಲ್ಲಬೇಕಾದರೆ ಜನರೆಲ್ಲ ಒಗ್ಗಟ್ಟಾಗಿ ತಮ್ಮದೇ ಆದ ರಾಜ್ಯವನ್ನು ಸ್ಥಾಪಿಸಬೇಕು ಈಗಾಗಲೆ ನೀವೆಲ್ಲ ಒಗ್ಗಟ್ಟಿನಿಂದ ಕೆಲಸ ಮಾಡಲು ತೊಡಗಿದ್ದೀರಿ. ಅಂದ ಮೇಲೆ ಮುಸ್ಲಿಮ ರಾಷ್ಟ್ರವು ಸ್ಥಾಪಿತವಾಗುವುದರಲ್ಲಿ ಸಂಶಯವಿಲ್ಲ.

ತಮ್ಮನ್ನು ನೋಡಿ ನನಗೆ ಬಹಳ ಸಂತೋಷವಾಗಿರುವುದರಿಂದ ಕೆಲವು ಮಾತುಗಳನ್ನು ಹೇಳಲು ಬಯಸುತ್ತೇನೆ. ಮೊದಲನೆಯದಾಗಿ ಪಾಪಕೂಪದಲ್ಲಿ ಬಿದ್ದು ನರಳುತ್ತಿರುವ ಕಾಫರುಗಳನ್ನು ಆದಷ್ಟು ಮುಸ್ಲಿಮರನ್ನಾಗಿ ಪರಿವರ್ತಿಸಬೇಕು. ಇದನ್ನು ಕಾರ್ಯಾಚರಣೆಗೆ ತರಲು ಅನೇಕ ಲೂಟಿಗಳಾಗಬೇಕಾಗಬಹುದು. ಆದರೂ ನಿಮ್ಮ

ಗುರಿಯು ಪವಿತ್ರವಾದ್ದರಿಂದ ಇದರಲ್ಲಿ ದೋಷವಿಲ್ಲ. ಎರಡನೆಯದಾಗಿ —ಈಗ ವಿಶ್ವವಿಖ್ಯಾತರಾದ ಮಹಾತ್ಮ ಗಾಂಧೀಜಿಯವರು ಮುಸ್ಲಿಮರು ಕಷ್ಟಪಡುತ್ತಿರುವ ಹಳ್ಳಿಗಳಿಗೆ ಪ್ರವಾಸ ಕೈಗೊಂಡಿದ್ದಾರೆ. ನಾವು ಪಟ್ಟ ದುಃಖಗಳನ್ನೂ ಕಷ್ಟನಷ್ಟಗಳನ್ನೂ ಅವರಲ್ಲಿ ಅರಿಕೆ ಮಾಡಿಕೊಳ್ಳಬೇಕು. ಅವರ ಪ್ರಾರ್ಥನಾಸಭೆಗಳಿಗೆ ಉದ್ರಿಕ್ತರಾದ ಹಿಂದೂಗಳು ಹೋಗುತ್ತಿಲ್ಲ ವಂತೆ. ಆದರೆ ನಾವು ಮಾತ್ರ ಹಿಂದೂಗಳಂತೆ ವರ್ತಿಸದೆ ಪ್ರಾರ್ಥನಾಸಭೆ ಗಳಲ್ಲಿ ಭಾಗವಹಿಸಬೇಕು. ರಕ್ಷಣಾದಳವಿಲ್ಲದೆ ಪ್ರವಾಸ ಮಾಡುತ್ತಿರುವ ಗಾಂಧೀಜಿಯವರನ್ನು ಮುಸ್ಲಿಮರೇ ಕೊಲ್ಲುವರೆಂದು ಕೆಲವರು ಹೇಳುತ್ತಿ ದ್ದಾರೆ. ಆದರೆ ಆ ಕೆಲಸವನ್ನು ಮಾತ್ರ ಎಂದಿಗೂ ಮಾಡಬೇಡಿ. ಆ ಮಹಾತ್ಮನನ್ನು ಪ್ರತಿದಿನವೂ ನೆನೆಯಬೇಕು. ಆತನಿಂದ ನಮಗೆ ಎಲ್ಲ ತರಹದಲ್ಲೂ ಅನೇಕ ಪ್ರಯೋಜನಗಳಿವೆ. ಅಂತೂ ಸಾಧಾರಣ ಹಿಂದೂ ವಿನಂತೆ ಅವರನ್ನು ತಿಳಿಯಕೂಡದು. ಈಗಾಗಲೆ ಬಂಗಾಳದ ಹಳ್ಳಿಗಳಲ್ಲಿ ಸಂಚರಿಸುತ್ತಿದ್ದಾರೆ ಬಿಹಾರಿನಲ್ಲೂ ನಡೆದ ಘಟನೆಗಳು ಅವರ ಕಿವಿಗೆ ಬಿದ್ದಿದೆ. ಮೂರನೆಯದಾಗಿ—ನಮ್ಮದೇ ಆದ ರಾಜ್ಯವನ್ನು ಕಟ್ಟಬೇಕಾ ದರೆ ದೂರಾಲೋಚನೆ ಮತ್ತು ವಿವೇಚನಾಶಕ್ತಿಗಳು ನಮ್ಮಲ್ಲಿ ಹೆಚ್ಚಾಗಿ ಬೆಳೆಯಬೇಕು. ಆ ಗುಣಗಳು ನಮ್ಮಲ್ಲಿ ಉದ್ಭವಿಸಬೇಕಾದರೆ ಹಿಂದೂ ಗಳ ಸಂಪರ್ಕದಿಂದ ಅದು ಸಾಧ್ಯ. ಆದ್ದರಿಂದ ಹಿಂದೂ ಸ್ತ್ರೀಯರನ್ನು ಅತ್ಯಾಚಾರದ ದೃಷ್ಟಿಯಿಂದ ನೋಡದೆ ಶಾಸ್ತ್ರರೀತ್ಯಾ ಮುಸ್ಲಿಮರನ್ನಾಗಿ ಪರಿವರ್ತಿಸಬೇಕು. ನಮ್ಮಲ್ಲಿರುವ ಅವಿವಾಹಿತ ತರುಣರು ಅವರನ್ನು ಮದುವೆಯಾಗಲಿ. ಈ ಪ್ರದೇಶಗಳಲ್ಲಿ ಸಿಕ್ಕಿದ ಸ್ತ್ರೀಯರನ್ನು ಇನ್ನೂ ಒಳರಾಷ್ಟ್ರಗಳಿಗೆ ಸಾಗಿಸುವುದು ಉತ್ತಮವೆಂದು ನನಗೆ ತೋರುತ್ತದೆ. ಎಲ್ಲಕ್ಕೂ ದೇವರ ಕೃಪೆ ಬೇಕು. ಆ ಕಾಲ ಬೇಗ ಬರಲಿ ಎಂದು ಹಾರೈ ಸುತ್ತೇನೆ" ಎನ್ನುತ್ತಾ ಖುರಾನಿನ ಪದ್ಯಗಳನ್ನೋದುತ್ತಾ ದೇವರ ಚಿತ್ರಕ್ಕೆ ಹೂವುಗಳನ್ನರ್ಪಿಸಿದನು.

ತರುಣ ಮುಖಂಡನೆದ್ದು, "ದೇವರು ನಿಮಗೆಲ್ಲ ಶಕ್ತಿ ತುಂಬಿಸಲಿ. ಈಗ ಬಹಳ ಜನ ಸೇರಿದ್ದೀರಿ. ನಿಮ್ಮ ಮುಂದಿನ ಚಟುವಟಿಕೆಗಳಿಗೆ

ಒಂಟೆಗಳು ಅಗತ್ಯವಾಗಿ ಬೇಕಾಗಿರುವುದು ನಿಮಗೆ ತಿಳಿದಿದೆ. ಆದರೆ ಈಗ ಒಂಟೆಗಳ ಲೆಕ್ಕ ಮಾಡಿದ ಮೇಲೆ ನಾಲ್ಕೈದು ಒಂಟೆಗಳು ಸಾಲದಾಗಿವೆ ಆದ್ದರಿಂದ ಇಲ್ಲಿನ ಕೆಲವರು ಪಕ್ಕದೂರಿನ ಮೇರೆಯ ಹತ್ತಿರ ಹೋದರೆ ಅಲ್ಲಿ ಹಿಂದೂಗಳ ಅನೇಕ ಒಂಟೆಗಳಿವೆ. ಅವನ್ನು ಹಿಂದೂಗಳಿಗೆ ತಿಳಿಯದ ಹಾಗೆ ಹೆಚ್ಚು ಗಲಭೆ ಮಾಡದೆ ಸಾಗಿಸಿಕೊಂಡು ಬರಬೇಕು. ಆದರೆ ಮೇರೆಯನ್ನು ದಾಟಿ ಒಳಕ್ಕೆ ಹೋಗಬೇಡಿ. ಅದು ಹಿಂದೂಗಳ ರಾಜ್ಯವಾದ್ದರಿಂದ ನಿಮ್ಮನ್ನು ಜೀವಸಹಿತ ಬಿಡಲಾರರು. ಅಂತಹ ಎಚ್ಚರಿಕೆಯಿಂದ ನೀವು ಒಂಟೆಗಳನ್ನು ತಂದ ಮೇಲೆ ಎಲ್ಲರೂ ಒಟ್ಟಿಗೆ ಕೂಡಿ ಮುಂದಿನ ಕಾರ್ಯಗಳಿಗೆ ತೊಡಗೋಣ" ಎಂದನು.

ಗುಂಪಿನವರೆಲ್ಲ "ನಾವೆಲ್ಲರೂ ಹೋಗುವೆವು" ಎಂದು ಕೂಗಿದರು. ಆದರೆ ಆ ತರುಣ ಮುಖಂಡನು ಗುಂಪಿನ ಕೆಲವರನ್ನು ಮಾತ್ರ ಆರಿಸಿ ಒಂಟೆಗಳನ್ನು ಎಚ್ಚರಿಕೆಯಿಂದ ತರಲು ಅಪ್ಪಣೆ ಮಾಡಿದನು ಆ ಆಯ್ಕೆಯ ಗುಂಪಿನಲ್ಲಿ ನಾನೂ ಒಬ್ಬ ಸೇರಿದ್ದೆನು.

ನಾವೆಲ್ಲರೂ ಕೂಡಿ ಒಂಟೆಗಳನ್ನು ಗಲಭೆಯಿಲ್ಲದೆ ತರಲು ಪ್ರಯತ್ನಿಸಿದೆವು. ಆದರೆ ನಮ್ಮ ಕಾಲು ಸಪ್ಪಳದಿಂದಲೇ ಎಚ್ಚರಗೊಂಡ ಹಿಂದೂಗಳು ನಮ್ಮ ಮೇಲೆ ಧಾಳಿ ಮಾಡಲು ಪ್ರಾರಂಭಿಸಿದರು. ಹೊಡೆದಾಟವು ಹಿರಿದಾಗಿ ಪರಿಣಮಿಸಿತು ಈ ಸಮಯವನ್ನೇ ಕಾಯುತ್ತಿದ್ದ ನಾನು ಮೇರೆಯನ್ನು ಮೀರಿ ಹಿಂದೂರಾಜ್ಯದೊಳಗೆ ಪ್ರವೇಶಿಸಿದೆನು. ಮುಸ್ಲಿಮರೊಡನೆ ಮುಸ್ಲಿಮನಂತೆ ನಟಿಸಿ ಅವರ ಇಂಗಿತಗಳನ್ನೆಲ್ಲ ಅರಿತಿದ್ದೆನು. ಈಗಲೂ ಕೂಡ ಅದೇ ಮುಸ್ಲಿಮ ಉಡುಪು ನನ್ನ ಮೈಮೇಲಿದ್ದವು. ಇದನ್ನು ನೋಡಿ ಹಿಂದೂಗಳು ನನನ್ನು ಮುಸ್ಲಿಮನೆಂದು ತಿಳಿದು ಕೊಲ್ಲಲು ಹವಣಿಸಿದರು. ತಕ್ಷಣ ನಾನು, "ಮುಸ್ಲಿಮ ಉಡುಪನ್ನು ಮಾತ್ರ ಹಾಕಿಕೊಂಡಿದ್ದೇನೆ; ನಾನು ಅಚ್ಚಾ ಹಿಂದೂ" ಎಂದು ಕೂಗಿದೆನು. ಆದರೂ ಹಿಂದೂಗಳು ನನ್ನನ್ನು ನಂಬಲಿಲ್ಲ. ಅಷ್ಟು ಹೊತ್ತಿಗೆ ಸರಿಯಾಗಿ ಒಬ್ಬ ಮುಸ್ಲಿಮನು ಅಲ್ಲಿಗೆ ಬಂದನು. ಆತನನ್ನು ಕಂಡೊಡನೆ ನನಗೆ ಭಕ್ತಿಭಾವ ಬಂದಿತು. ಆತನ ಮುಖ ಶಾಂತವಾಗಿತ್ತು. ನಾನು

ಎಲ್ಲ ತರಹದ ಮುಸ್ಲಿಮರನ್ನು ನೋಡಿದ್ದರೂ ಈತನ ಮುಖ ಮಾತ್ರ ನನಗೆ ಹೊಸದಾಗಿ ಕಂಡಿತು. ಮುಸ್ಲಿಮರ ದೌರ್ಜನ್ಯದ ಕಳೆಯು ಆತನ ಲ್ಲಿರಲಿಲ್ಲ. ನನ್ನನ್ನು ಹೊಡೆಯಲು ಆತುರನಾಗಿದ್ದ ಹಿಂದೂ ಯುವಕನ ಬಳಿ ಬಂದು, "ಏತಕ್ಕೆ ಆತನನ್ನು ಕೊಲ್ಲಲು ಯತ್ನಿಸುತ್ತೀರಿ? ಅವನಾ ಗಿಯೇ ತಾನು ಹಿಂದೂ ಎಂದು ಹೇಳುತ್ತಿರುವಾಗ ಅವನ ಮಾತುಗಳ ನ್ನಾದರೂ ನಿಧಾನವಾಗಿ ಕೇಳಬೇಡವೆ?" ಎಂದು ಆ ಮುಸ್ಲಿಮನು ಪ್ರಶ್ನಿಸಿದನು.

ಅದಕ್ಕೆ ಹಿಂದೂಯುವಕ, "ಇಲ್ಲ; ಕೇಳುವುದಿಲ್ಲ ಮುಸ್ಲಿಮರೆಲ್ಲ ನೀಚರು. ಆದ್ದರಿಂದ ನಮ್ಮ ಹಿಂದೂರಾಜ್ಯದಲ್ಲಿ ಒಬ್ಬ ಮುಸ್ಲಿಮನೂ ಇರಕೂಡದು. ಇವನು ಮುಸ್ಲಿಮನಾಗಿದ್ದರೂ ಹಿಂದೂವಿನಂತೆ ನಟಿಸು ತ್ತಿದ್ದಾನೆ." ಎಂದು ನನ್ನ ಕಡೆಗೆ ಕೈತೋರಿಸಿ ಹೇಳಿದನು "ಎಲ್ಲ ಮುಸ್ಲಿಮರನ್ನೂ ನೀಚರೆಂದು ಭಾವಿಸಬೇಡಿ. ಪಕ್ಕದ ರಾಜ್ಯದ ಮುಸ್ಲಿಮರ ಅತ್ಯಾಚಾರಗಳನ್ನು ಸಹಿಸಲಾರದೆ ಹಿಂದೂರಾಜ್ಯವನ್ನು ನಂಬಿ ಬಂದ ಮುಸ್ಲಿಮರೆಷ್ಟೋ ಮಂದಿ ಇಲ್ಲವೇ? ಹಾಗೆ ಬಂದ ಮುಸ್ಲಿಮರ ಮೇಲೇಕೆ ಕೈ ಮಾಡುವಿರಿ? ನಿಮ್ಮ ರಾಜ್ಯದಲ್ಲೇ ವಿಶಾಲ ಬುದ್ಧಿಯುಳ್ಳ ಮೌಲಾನ ಅಜಾದರಂತಹ ವ್ಯಕ್ತಿಗಳಿಲ್ಲವೇ?" ಎಂದು ಆ ಮುಸ್ಲಿಮನು ಉದಾರಭಾವದಿಂದ ಬೇಡಿಕೊಂಡನು. "ಮುಸ್ಲಿಮರಲ್ಲೂ ಇಂತಹ ವ್ಯಕ್ತಿಗಳಿದ್ದಾರಲ್ಲ!" ಎಂದು ನನಗೆ ಆಶ್ಚರ್ಯವಾಯಿತು. ಮರುಕ್ಷಣದಲ್ಲೇ ಹಿಂದೂಯುವಕರ ದುಡುಕತನವೂ ಅಪಾಯಕರವಾಗಿ ಕಂಡಿತು. ಅವರಿಂದ ಬಿಡಿಸಿಕೊಳ್ಳಲು ಯಾವ ಉಪಾಯವೂ ಹೊಳೆ ಯಲಿಲ್ಲ. ಕಡೆಗೆ ನನ್ನ ನಿಜಕಥೆಯನ್ನು ಹೇಳಲೇಬೇಕಾಯಿತು. ಆ ಹಿಂದೂ ಯುವಕರಿಗೆ ನಾ ಹೇಳಿದ ಎಷ್ಟೋ ವಿಷಯಗಳು ತಿಳಿದಿರಲಿಲ್ಲ. ಮತ್ತೆ ಸಂತೋಷಭರಿತರಾಗಿ ನನ್ನನ್ನು ಬಹಳ ಬುದ್ಧಿವಂತನಾದ ಗೂಢ ಚಾರನೆಂದು ಮೆಚ್ಚಿದರು ನನಗೆ ಹಿಂದೂ ಉಡುಪನ್ನು ಕೊಟ್ಟು ಕೊಲ್ಲದೆ ಬಿಟ್ಟರು.

ಕೇವಲ ಸ್ವಲ್ಪ ಹೊತ್ತಿನಲ್ಲೇ ನಾನು ಯುವಕರ ಗುಂಪಿನಲ್ಲಿ ಪ್ರಮುಖ ಸದಸ್ಯನಾದೆ. ಯುವಕರ ಮುಖಂಡ ತನ್ನ ಸಂಘದ ಉದ್ದೇಶ

ಗಳನ್ನು ವಿವರಿಸಿದ. ಹಿಂದೂ ಮುಸ್ಲಿಮ ರಾಷ್ಟ್ರದ ಮೇರೆಯ ಪ್ರದೇಶ ಗಳಲ್ಲಿ ನಿರಾಶ್ರಿತರಾಗಿ ಬರುತ್ತಿರುವ ಅಸಂಖ್ಯಾತ ಹಿಂದೂ ಜನಕ್ಕೆ ಆದಷ್ಟು ಸೌಕರ್ಯಗಳನ್ನು ಕಲ್ಪಿಸಿಕೊಡುವುದೇ ತನ್ನ ಸಂಘದ ಮುಖ್ಯೋದ್ದೇಶ ವೆಂದು ತಿಳಿಸಿದ. "ಮುಸ್ಲಿಮ ರಾಷ್ಟ್ರದಲ್ಲಿ ಒಬ್ಬ ವ್ಯಕ್ತಿಗೆ ಹಾನಿ ಬಂದರೆ ಇಡೀ ಜನಾಂಗವೇ ಒಗ್ಗಟ್ಟಿನಿಂದ ಎದುರಾಳಿಯೊಡನೆ ಹೋರಾಡುವುದು. ಆದರೆ ನಮ್ಮ ಹಿಂದೂಗಳಲ್ಲಿ ಪಕ್ಕದ ಮನೆಯ ಗಲಾಟೆಗೆ ನಮ್ಮ ನಿದ್ರೆ ಕೆಟ್ಟಿತಲ್ಲಾ ಎನ್ನುವವರೇ ಜಾಸ್ತಿ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ನಮ್ಮ ಸಂಸ್ಕೃತಿಯನ್ನು ಉಳಿಸಿಕೊಳ್ಳಬೇಕಾದರೆ ನಮ್ಮದೇ ಆದ ಒಂದು ಸಂಘಟನೆ ಅತ್ಯಗತ್ಯ. ಆದಕ್ಕಾಗಿ ಪ್ರತಿಯೊಬ್ಬನೂ ಸೊಂಟ ಕಟ್ಟಿ ನಿಲ್ಲ ಬೇಕು. "ಮುಸ್ಲಿಮ್ ನ್ಯಾಷನಲ್ ಗಾರ್ಡ್"ಗಳಿರುವಂತೆ ನಮ್ಮಲ್ಲೂ ಕೂಡ ಅಲ್ಲಲ್ಲಿ ಸಂಘಗಳು ಸ್ಥಾಪನೆಯಾಗಬೇಕು. ನಮ್ಮ ಸಂಘಕ್ಕೆ ಚೀಟಿಯ ಮೇಲೆ ಅಚ್ಚುಹೊಡೆದ ಕರ್ತವ್ಯಪಟ್ಟಿ ಇಲ್ಲ. ಅಂತೆಯೆ ಪ್ರತಿ ಯೊಬ್ಬರೂ ಕೂಡ ತಮ್ಮ ತಮ್ಮಲ್ಲಿಯೆ ಅರ್ಥ ಮಾಡಿಕೊಂಡು ನಮ್ಮ ಸಂಘದ ಸದಸ್ಯರಾಗಬೇಕು. ಇತ್ತೀಚಿನ ಗಲಭೆಗಳಿಂದ ನಮ್ಮ ಸಂಖ್ಯೆಯೇ ಕಡಿಮೆಯಾಗುತ್ತಿದೆ. ಆದ್ದರಿಂದ ಈಗ ನಾವು ಹಿಂದೂ ನಿರಾಶ್ರಿತರನ್ನು ಉಳಿಸಿಕೊಂಡು ಬರುವುದೇ ನಮ್ಮ ಪ್ರಥಮ ಕರ್ತವ್ಯ. ಆದಕ್ಕಾಗಿ ನಾವೆಲ್ಲರೂ ಹೊಡೆದಾಡೋಣ. ಹಿಂದೆ ನಮ್ಮ ರಾಷ್ಟ್ರ ಎಷ್ಟೋ ವೀರರಿಗೆ ಜನ್ಮ ಕೊಟ್ಟಿತು. ಅದರ ನೆನಪೊಂದೇ ನಮಗೆ ಸ್ಫೂರ್ತಿ ಕೊಡಬಲ್ಲದು. ನೀನು ನಮ್ಮ ಸಂಘಕ್ಕಾಗಿ ದುಡಿಯಬೇಕು. ಮುಸ್ಲಿಮರು ಯಾವ ಯಾವ ರೀತಿ ಒಳಸಂಚು ನಡೆಸುತ್ತಿರುವರೋ ಅದೇ ರೀತಿ ನಾವುಗಳೂ ಆರಂಭಿಸೋಣ. ಬ್ರಿಟೀಷರನ್ನೋಡಿಸಿದಂತೆ ಮುಸ್ಲಿಮರನ್ನೂ ನಮ್ಮ ರಾಷ್ಟ್ರದಿಂದ ಒದ್ದೋಡಿಸಬೇಕು. ವ್ಯಾಪಾರಕ್ಕಾಗಿ ಬಂದ ಬ್ರಿಟೀಷರು ನಮ್ಮ ರಾಷ್ಟ್ರವನ್ನೇ ಗೆದ್ದು ಚಕ್ರವರ್ತಿಗಳಾದರು. ಲೂಟಿಗಾಗಿ ಬಂದ ಮುಸ್ಲಿಮರು ನಮ್ಮ ಎಷ್ಟೋ ಗುಡಿಗೋಪುರಗಳನ್ನು ಹಾಳುಮಾಡಿದ್ದಲ್ಲದೆ ತಮ್ಮದೇ ನಾಡನ್ನು ನಮ್ಮ ಜಾಗದಲ್ಲಿ ಕಟ್ಟುತ್ತಿದ್ದಾರೆ. ಅಂಥಾ ದ್ದರಲ್ಲಿ ನಾವುಗಳು ಕೈಕಟ್ಟಿ ಕುಳಿತುಕೊಂಡರೆ ನಮ್ಮ ಪೌರುಷ

ಕಣ್ಣಿಗೆ ಕಾಣದಂತೆ ಮಾಯವಾದೀತು! ಗಂಡಸರಂತೆ ಹೆದರದೆ ಮುನ್ನು-
ಗ್ಗೋಣ" ಎಂದು ಆ ಯುವಕರ ಮುಖಂಡ ಒಂದು ದೊಡ್ಡ ಉಪನ್ಯಾಸ
ವನ್ನೇ ಕೊಟ್ಟ. ತಾರುಣ್ಯದ ಬಿಸಿರಕ್ತ ಅವನ ಮಾತುಗಳಲ್ಲೂ ಹರಿಯು
ತ್ತಿದೆಯೇನೋ ಎನ್ನುವಂತೆ ಭಾಸವಾಯಿತು. ಮಧ್ಯೆ ಮಧ್ಯೆ ಮೀಸೆ
ಯನ್ನು ನೇವರಿಸಿಕೊಳ್ಳುತ್ತಿದ್ದ ಅವನನ್ನು ನೋಡಿದರೆ ಹಿಂದಿನ ಕಾಲದ
ಆಸ್ಥಾನದಲ್ಲಿದ್ದ ರಾಯಭಾರಿಗಳ ಚಿತ್ರ ಜ್ಞಾಪಕಕ್ಕೆ ಬರುತ್ತಿತ್ತು. ನಾನು
ಯಾವ ಮಾತನ್ನೂ ಆಡದೆ ಎಲ್ಲಕ್ಕೂ ಹೂಗುಟ್ಟಿದೆ.

ಎಲ್ಲ ವಿಷಯಗಳನ್ನೂ ಬುಡಸಹಿತವಾಗಿ ನೋಡಬೇಕೆಂಬುದು ನನ್ನ
ಹುಟ್ಟುಗುಣ. ಆದಕ್ಕಾಗಿಯೆ ನಾನು ಯಾರ ಮಾತಿಗೂ ವಿರೋಧಿಸು
ತ್ತಿರಲಿಲ್ಲ. ಹಾಗೆಯೇ ಆ ವೀರಯುವಕನ ಮಾತಿಗೂ ಹೂಗುಟ್ಟಿದೆ.

ನಿರಾಶ್ರಿತರ ವ್ಯವಸ್ಥೆಗಾಗಿ ನಾನು ಪ್ರಮುಖಪಾತ್ರ ವಹಿಸಬೇಕಾ
ಯಿತು. ಒಂದೇ ಸಮನೆ ತಿರುಗಾಟ ಪ್ರಾರಂಭವಾಯಿತು. ಮುಸ್ಲಿಮ
ರಾಜ್ಯವನ್ನು ತಿರುಗಾಡಿದ ನನಗೆ ಹಿಂದೂ ರಾಜ್ಯದ ಧೋರಣೆಯನ್ನು
ಕಂಡು ಆಶ್ಚರ್ಯವಾಯಿತು ಹಿಂದೂಗಳಲ್ಲೇ ಭಿನ್ನವಾದ ಅಭಿಪ್ರಾಯ
ಗಳು ತಲೆದೋರಿ ಸಮರ್ಥ ಸರ್ಕಾರವನ್ನು ಕಟ್ಟಲು ಅಸಮರ್ಥರಾಗಿದ್ದರು.
ದೇಶಿಯ ಸಂಸ್ಥಾನಗಳಲ್ಲೂ ಸಣ್ಣ ಸಣ್ಣ ರಾಜಪುತ್ರ ಜಹಗೀರುಗಳಲ್ಲೂ
ಒಳಕಲಹಗಳು ಪ್ರಾರಂಭವಾಗಿದ್ದವು.

ಆದಷ್ಟು ನಿರಾಶ್ರಿತರ ಸಂರಕ್ಷಣಾ ಶಿಬಿರಗಳನ್ನು ತೆರೆದದ್ದಾಯಿತು.
ಸ್ತ್ರೀ ಪುರುಷರೆಂಬ ಭೇದವಿಲ್ಲದೆ ಶಿಬಿರಗಳಲ್ಲಿ ವ್ಯವಸ್ಥೆ ಮಾಡಲಾಯಿತು.
ಎಲ್ಲವನ್ನೂ ಕಳೆಕೊಂಡು ಬಂದ ನಿರಾಶ್ರಿತರಲ್ಲಿ ಸ್ತ್ರೀ ಪುರುಷರೆಂಬ
ಸಂಕೋಚವಿರಲಿಲ್ಲ. ಮಾನವ ಜಾತಿಗೆ ಹೊರತಾಗಿದ್ದ ಅವರು ಪುನಃ
ಮಾನವರಾದೆವಲ್ಲ! ಎಂಬುದೇ ಅವರಿಗೆ ಆಶ್ಚರ್ಯವಾಗಿತ್ತು.

ಕಡೆಯ ತನಕವೂ ಅದೇ ಭಾವನೆ ಅವರಲ್ಲಿದ್ದರೆ ಶಿಬಿರಗಳ ವ್ಯವಸ್ಥೆ
ಸುಲಭವಾಗಿ ನಡೆಯುವುದರಲ್ಲಿ ಸಂಶಯವಿರಲಿಲ್ಲ. ಆದರೆ ಸ್ತ್ರೀ ಪುರು
ಷರು ಅದೇ ರೀತಿ ಕಡೆಯ ತನಕವೂ ಇರುತ್ತಾರೆಯೇ! ಎನ್ನುವುದರಲ್ಲಿ
ನನಗೆ ಸಂಶಯ ಬಂತು. ಗಂಡು ಹೆಣ್ಣಿಗಾಗಿ ಮತ್ತು ಹೆಣ್ಣು ಗಂಡಿಗಾಗಿ

ಎಂದು ದೇವರೇ ಪ್ರಕೃತಿ ಸಹಜವಾಗಿ ನಿರೂಪಿಸಿರುವಾಗ ಎಲ್ಲಿಯವರೆಗೆ ಮನುಷ್ಯರು ಎಲ್ಲೇ ಕಟ್ಟು ಹಾಕಲು ಸಾಧ್ಯ ಎಂದು ಯೋಚಿಸತೊಡಗಿದೆ. ಆದರೂ ಆ ಯೋಚನೆ ಪ್ರಕೃತ ಉದ್ಭವಿಸಿಲ್ಲವಾದ್ದರಿಂದ ಅದಕ್ಕಾಗಿ ಚರ್ಚೆ ಮಾಡುವುದು ಅಸಮಂಜಸವೆಂದು ತೀರ್ಮಾನಿಸಿ ಅಲ್ಲಿಗೇ ಬಿಟ್ಟೆ

ಸ್ವಲ್ಪ ದಿನಗಳ ನಂತರ ಒಬ್ಬ ಹಿಂದೂ ಯುವತಿ ನಮ್ಮ ಶಿಬಿರಕ್ಕೆ ಭೇಟಿ ಕೊಟ್ಟಳು. ಅವಳ ಹೆಸರು ನನಗೆ ಮರೆತು ಹೋಗಿದೆ ಆದರೂ ಅವಳು ಬಂದ ಠೀವಿ ನೋಡಿದರೆ ಸಿನಿಮಾ ನಟಿಯಂತೆ ಕಾಣುತ್ತಿದ್ದಳು. ಸ್ತ್ರೀಯರಿಗೆ ಪ್ರತ್ಯೇಕ ವಾಸಸ್ಥಳಗಳನ್ನು ಏರ್ಪಡಿಸಬೇಕೆಂತಲೂ ಮತ್ತು ಆದಷ್ಟು ಹುಡುಗಿಯರು ತಮ್ಮ ಸೌಂದರ್ಯವನ್ನು ಕಾಪಾಡಿಕೊಂಡು ಬರಬೇಕೆಂದೂ ವಾದಿಸಿದಳು ಅವಳ ಜೊತೆಯಲ್ಲೊಬ್ಬ ಮಿಲಿಟರಿ ಅಧಿಕಾರಿ ಬಂದಿದ್ದ. ಇವಳು ಅವನ ಹೆಂಡತಿ ಇರಬೇಕೆಂದು ತೀರ್ಮಾನಿಸಿದೆ. ಅವನು ಕೂಡ ಹೆಂಡತಿಯ ವಾದವನ್ನೇ ಎತ್ತಿ ಹಿಡಿದು, "ನೋಡಿ, ಒಮ್ಮೆ ಕರಾಚಿಯಲ್ಲಿ ಮುಸ್ಲಿಮ್ ಯುವತಿಯರು ಗಲಾಟೆ ಮಾಡಿದಾಗ ಪೋಲೀಸಿನವರು 'ಟಿಯರ್ ಗ್ಯಾಸ್" ಪ್ರಯೋಗಿಸಿದರು. ಆದರೆ ಆ ಹೆಂಗಸರು ಎಷ್ಟು ಧೈರ್ಯಶಾಲಿಗಳು! ತಮ್ಮ ರೂಪು ನಾಶವಾಯಿತೆಂದು ಸರ್ಕಾರದ ಮೇಲೆ ಸವಾಲು ಹಾಕಿ ಗೊಂದಲವೆಬ್ಬಿಸಿದರು. ಹಾಗಿರುವಾಗ ನಮ್ಮಲ್ಲಿ ಹೆಂಗಸರು ಇನ್ನೂ ಪರಾವಲಂಬನೆಯಿಂದಲೇ ಕಾಲಕಳೆಯುತ್ತಿದ್ದಾರೆ. ಆ ಕಾಲ ಹೋಗಬೇಕು ಅದಕ್ಕಾಗಿ ಈಗಿನಿಂದಲೂ ಈ ನಿರಾಶ್ರಿತ ಯುವತಿಯರಿಗೆ ತಮ್ಮ ಕಾಲ ಮೇಲೆ ತಾವು ನಿಲ್ಲುವಂತೆ ಏರ್ಪಾಡು ಮಾಡಬೇಕು ಪ್ರತ್ಯೇಕ ಶಿಬಿರಗಳನ್ನು ತೆರೆದು ಹೆಚ್ಚಾಗಿ ಆರ್ಥಿಕ ಸಹಾಯ ಪಡೆದು ನಡೆಸಿದರೆ ಸ್ತ್ರೀಯರಿಂದ ಎಷ್ಟೋ ಕೆಲಸಗಳನ್ನು ಮಾಡಿಸಬಹುದು...." ಎಂದು ಆ ಮಿಲಿಟರಿಯವನು ಹುಮ್ಮಸ್ಸಿನಿಂದ ಮಾತಾನಾಡಿದನು ಅವರ ಸಲಹೆಗಳಿಗೆ ಆದರದಿಂದ ಗಮನಕೊಡುತ್ತೇವೆಂದು ಭರವಸೆಕೊಟ್ಟು ಅವರನ್ನು ಬೀಳ್ಕೊಟ್ಟೆವು. ಹದಿನೈದು ದಿನಗಳ ನಂತರ ಅವನನ್ನು ದೆಹಲಿಗೆ ವರ್ಗಾಯಿಸಿದರೆಂಬ ಸುದ್ದಿ ತಿಳಿದುಬಂತು.

ಒಂದು ದಿನ ಮಧ್ಯರಾತ್ರಿ ಇದ್ದಕ್ಕಿಂದ್ದಂತೆ ನನಗೆ ಎಚ್ಚರವಾಯಿತು. ಆಗ ಛಳಿಗಾಲ ಬೇರೆ. ದಪ್ಪನೆಯ ರಗ್ಗನ್ನು ಆತುಕೊಂಡು ಮಲಗಿದ್ದ ನಾನು ಸ್ವಲ್ಪ ಬೇಜಾರಿನಿಂದಲೇ ಮೇಲಕ್ಕೆದ್ದೆ. ಆದರೆ ತಕ್ಷಣ ಎಲ್ಲೆಡೆಯಲ್ಲೂ ನೀರವ. ಮತ್ತೆ ಏನೋ ಗಾಳಿಯ ಸದ್ದಿರಬೇಕೆಂದು ಮಲಗಿದೆ. ಐದು ನಿಮಿಷದ ನಂತರ ಪುನಃ ಒಂದು ಸದ್ದು ಕೇಳಿಸಿತು. ಈ ಸಾರಿ ಆ ಸದ್ದು ತಣ್ಣನೆ ತೀಡುತ್ತಿದ್ದ ಗಾಳಿಯೊಡನ ಮತ್ತಷ್ಟು ರಭಸವಾಗಿ ಕೇಳತೊಡಗಿತು. ಸದ್ದು ಯಾವ ಕಡೆಯಿಂದ ಬರುತ್ತಿದೆ ಎನ್ನುವುದು ತಿಳಿಯಲಿಲ್ಲ. ಚಳಿಗಾಳಿಯೊಡನೆ ನನ್ನ ಹಲ್ಲು ಸಾಲುಗಳೂ ಸೇರಿ ಕಟಕಟ ಶಬ್ದ ಮಾಡತೊಡಗಿದವು. ಆದಷ್ಟು ಹಲ್ಲನ್ನು ಬಿಗಿಹಿಡಿದು ಸದ್ದನ್ನರಸಲು ಹೊರಟೆ ನನ್ನ ಕಾಲುಗಳು ಮುಸ್ಲಿಮ ನಿರಾಶ್ರಿತ ಹೆಂಗಸರಿಗಾಗಿ ಏರ್ಪಡಿಸಿದ್ದ ಶಿಬಿರದ ಹತ್ತಿರ ಕರೆದೊಯ್ಯಿತು. ಅಲ್ಲಿಂದಲೇ ಅಳುವಿನ ಸದ್ದು ಕೇಳಬಂತು. ಒಳಕ್ಕೆ ಹೋಗಿ ನೋಡಲಾಗಿ ಒಬ್ಬ ಮುಸ್ಲಿಮ ಮಹಿಳೆ ಒಂದೇ ಸಮನೆ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಆ ಮಹಿಳೆಯ ಮುಖ ನೋಡಿದರೆ ಕೇವಲ ಇಪ್ಪತ್ತರ ಯುವತಿಯಂತೆ ಕಾಣುತ್ತಿದ್ದಳು. ವಯಸ್ಸಿಗೆ ತಕ್ಕ ರೂಪವತಿಯಾಗಿದ್ದಳು ಮೈ ಮೇಲಿನ ಬಟ್ಟೆ ಮಲಿನವಾಗಿದ್ದರೂ ಅದರ ಸೀಲಿಯ ಬಣ್ಣ ಅವಳ ಶರೀರಕ್ಕೆ ಮೆರಗು ಕೊಟ್ಟಂತಿತ್ತು. ಅಂಥವಳು ಅಳುವುದಕ್ಕೆ ಕಾರಣವೇನೆಂದು ತಿಳಿಯಲಿಲ್ಲ. ಹಿಂದೂಗಳಿಂದ ಏನಾದರೂ ಕಿರುಕುಳ ಹೊಂದಿ ದುಃಖ ಪಡುತ್ತಿರುವಳೇ ಎಂದು ಸಂಶಯಪಟ್ಟೆ. ಒಬ್ಬ ಸ್ತ್ರೀ ಕಣ್ಣೀರು ಹಾಕುತ್ತಿರುವಾಗ ಏನೋ ಮಹತ್ವದ ವಿಷಯ ನಡೆದಿರಬೇಕೆಂದು ತಿಳಿದು ವಿಚಾರಿಸಲು ಹೊರಟೆ.

ಆಕೆಯ ಬಳಿ ನಾನು ಬಂದು ನಿಂತರೂ ಆಕೆಗೆ ಗೊತ್ತಾಗಲಿಲ್ಲ. ಕಣ್ಣೀರು ಅವಳ ಕಣ್ಣುಗಳಿಗೆ ಧಾರಾವಾಹಿಯಾಗಿ ತೆರೆ ಹಾಕಿತ್ತು. ನಾನಾಗಿಯೇ ಆಕೆಯನ್ನು ಪ್ರಶ್ನಿಸಿದೆ "ಏಕಮ್ಮ ಈ ಮಧ್ಯರಾತ್ರಿಯಲ್ಲಿ ಅಳುತ್ತಿರುವೆ? ಚಳಿಗಾಲವೆಂದು ಎಲ್ಲರೂ ಬೆಚ್ಚಗೆ ಮಲಗಿರುವಾಗ ನೀನೊಬ್ಬಳು ಮಾತ್ರ ಇಂತಹ ಶೀತದಲ್ಲೂ ಏಕೆ ಅಳುತ್ತಿರುವೆ? ನಿನಗೇ

ನಾದರೂ ಕಷ್ಟ ಒದಗಿದ್ದರೆ ತಿಳಿಸು. ನಮ್ಮ ನಾಡಿಗೆ ಬಂದ ಮುಸ್ಲಿಮ ಮಹಿಳೆಯರನ್ನು ಆದರದಿಂದ ನೋಡುವುದು ನಮ್ಮ ಆದ್ಯ ಕರ್ತವ್ಯ. ಹೆದರದೆ ನಿನ್ನ ಸಂಗತಿಯನ್ನು ಹೇಳು. ಇಲ್ಲಿ ಯಾರಾದರೂ ಕೇಳುವ ರೆಂಬ ಭೀತಿ ಇದ್ದರೆ ಹೊರಗಡೆ ಕಲ್ಲುಬೆಂಚಿನ ಮೇಲೆ ಕುಳಿತುಕೊಳ್ಳುವ ಬಾ" ಎಂದು ನಾನು ಅವಳಿಗೆ ಭರವಸೆ ಕೊಟ್ಟಾಗ ಕಣ್ಣು ತೆರೆದು ನೋಡಿ ದಳು. ತಕ್ಷಣ ಮಿಂಚಿನಂತೆ ನನ್ನೊಡನೆ ಹೊರಕ್ಕೆ ಬಂದಳು.

ಅವಳ ಕಥೆಯನ್ನು ಕೇಳಲು ನಾನು ಕುತೂಹಲ ಭರಿತನಾದೆ. ಮುಖ ಮೇಲಕ್ಕೆ ಮಾಡಿ ಕಾರ್ಮೋಡಗಳನ್ನು ದಿಟ್ಟಿಸಿ ನೋಡುತ್ತಾ ಮಾತನಾಡಲಾರಂಭಿಸಿದಳು. ಆ ಕರಾಳ ಕತ್ತಲೆಯಲ್ಲೂ ಅವಳ ಮುಖ ಮಿಂಚಿನ ಹುಳುವಿನಂತೆ ಹೊಳೆಯುತ್ತಿತ್ತು.

"ಸ್ವಾಮಿ, ನಾನು ಪಂಜಾಬಿನ ನಾಲಾಪ್ರದೇಶದ ಗಡಿಯವಳು. ಈಗಲೂ ಅಲ್ಲಾಗುತ್ತಿರುವ ಗಲಭೆ ನಿಮಗೆ ಗೊತ್ತಿದೆ. ಆದರೆ ನಮ್ಮ ಹಳ್ಳಿ ಈಗ ಹೇಗಿದೆಯೋ ಗೊತ್ತಿಲ್ಲ

ಸ್ವಲ್ಪ ತಾಳಿ; ಜ್ಞಾಪಿಸಿಕೊಳ್ಳುತ್ತೇನೆ........'' ಎಂದು ಗಲ್ಲದ ಮೇಲೆ ಕೈ ಇಟ್ಟು ಕುಳಿತಳು. ಏನನ್ನೋ ಯೋಚಿಸಿದಳು ಕಾರ್ಮೋಡದ ಮಧ್ಯದಲ್ಲಿ ಕ್ಷಣಕಾಲ ಬಂದು ಕಣ್ಮರೆಯಾಗುವ ಮಿಂಚನ್ನು ಹುಡುಕು ವಂತೆ ಅವಳ ಕಣ್ಣುಗುಡ್ಡೆಗಳು ತನ್ನದೇ ಆದ ಆವರಣದಲ್ಲಿ ಒಂದೇಸಮನೆ ತಿರುಗಾಡಿದವು.

"ಸ್ವಾಮಿ, ಆಗ ನನಗೆ ಹದಿನಾರು ವರುಷ. ಆಗ ತಾನೆ ಯೌವನದ ಹೊಸ್ತಿಲಲ್ಲಿ ಕಾಲಿಟ್ಟಿದ್ದೆ. ನಮ್ಮ ಗ್ರಾಮದ ಹಿರಿಯರು ನನ್ನನ್ನು ಅವರ ಗ್ರಾಮದೇವತೆಯೆಂದು ಕರೆದು ವಿಶ್ವಾಸವಿಟ್ಟಿದ್ದರು ಮಗುವಿನಿಂದ ಕಂಡ ನನ್ನನ್ನು ಅವರು ಮಗುವೆಂದೇ ಸಂಬೋಧಿಸುತ್ತಿದ್ದರು. ಹಾಗೆಯೆ ನನಗೆ ಹದಿನಾರು ವರುಷ ತುಂಬಿದರೂ ಹಳ್ಳಿಯಲ್ಲಿ ಎಳೆಯ ಮಗುವಿ ನಂತೆಯೆ ಎಲ್ಲರೊಡನೆಯೂ ಧೈರ್ಯವಾಗಿ ಮಾತನಾಡುತ್ತಿದ್ದೆ.

ನಮ್ಮೂರಿನ—ಅಂದರೆ ನಮ್ಮ ಸಣ್ಣ ಹಳ್ಳಿಯ—ಮುಖ್ಯಸ್ಥನಾದ ಪಟೇಲ ಹಿಂದುವಾಗಿದ್ದನು. ಹೆಂಡದಂಗಡಿ ಇಟ್ಟಿದ್ದ ಜೈನಾರಾಯಣನೂ

ಹಿಂದೂ. ಬಟ್ಟೆಯನ್ನು ತಾನೇ ನೆಯ್ದು ಮಾರಾಟ ಮಾಡುತ್ತಿದ್ದ ಖಾಸೀಂ ನಮ್ಮ ಜನ. ಕುಂಬಾರ ಹಿಂದೂವಾದರೆ ಕಮ್ಮಾರ ನಮ್ಮವನು. ಚರ್ಮದ ವ್ಯಾಪಾರಿ ನಮ್ಮವನಾದರೆ ಚಮ್ಮಾರ ಹಿಂದೂ. ಹೀಗೆ ನಮ್ಮ ಹಳ್ಳಿಯಲ್ಲಿ ಹಿಂದೂ ಮುಸ್ಲಿಮರೆಂಬ ಭೇದವಿರಲಿಲ್ಲ. ಒಬ್ಬರನ್ನೊಬ್ಬರು ಸೋದರರಂತೆ ತಿಳಿದಿದ್ದರು. ಅಂತೆಯೆ ನಮ್ಮ ಹಳ್ಳಿ ಶಾಂತವಾಗಿತ್ತು.

ಹಳ್ಳಿಯ ಜನ ದಿನವೆಲ್ಲ ದುಡಿದು ಬಳಲಿ ಬೇಸತ್ತಿದ್ದರೆ ರಾತ್ರಿಯ ವೇಳೆ ಬಯಲುನಾಟಕ ಅವರನ್ನು ಸಮಾಧಾನಗೊಳಿಸುತ್ತಿತ್ತು. ಪಟೇಲನ ಹಿರಿಯ ಮಗ ಬಯಲುನಾಟಕಕ್ಕೆ ಮುಖ್ಯಸ್ಥನಾಗಿದ್ದನು. ಅವನು ಪ್ರತಿ ವಾರದಲ್ಲೂ ಒಂದು ದಿನ ಪಕ್ಕದ ಪಟ್ಟಣಗಳಿಗೆ ಹೋಗಿ ಹೊಸ ಹೊಸ ವಿಷಯಗಳನ್ನು ತಿಳಿದು ಬರುತ್ತಿದ್ದನು. ಸಿನಿಮಾಗಳನ್ನು ಕಂಡು ರಜತ ಪರದೆಯ ಅದ್ಭುತಗಳನ್ನು ಹಳ್ಳಿಯವರಿಗೆ ವರ್ಣಿಸುತ್ತಿದ್ದನು. ಹೊಸ ಸಿನಿಮಾ ಹಾಡುಗಳ ಧಾಟಿಯನ್ನು ತನ್ನ ನಾಟಕದಲ್ಲೂ ತರಬೇಕೆಂದು ಪ್ರಯತ್ನಿಸುತ್ತಿದ್ದನು. ಅದಕ್ಕೆ ಸರಿಯಾಗಿ ತಬಲ ಬಾರಿಸುವ ಹಯಾತ್ ಖಾನ್ ಹಗಲು ರಾತ್ರಿಯೆನ್ನದೆ ಹಾಡುಗಳನ್ನು ರೂಪಾಂತರಿಸುತ್ತಿದ್ದನು. ಹಯಾತ್‌ಖಾನ್ ನಾಟಕದಲ್ಲಿ ಪಾತ್ರ ವಹಿಸದಿದ್ದರೂ ಎಲ್ಲ ಆಟಗಾರರೂ ಅವನ ಬಳಿಯಲ್ಲಿ ಸೇರಿ ತಮ್ಮ ಪಾತ್ರಗಳ ಹಾಡುಗಳನ್ನು ಅವನ ತಬಲ ವಾದನಕ್ಕೆ ಸರಿಯಾಗಿ ಹೊಂದಿಸಿಕೊಳ್ಳುತ್ತಿದ್ದರು. ನಾಟಕದಲ್ಲಿ ಹಾಡುಗಳೇ ಜಾಸ್ತಿಯಿದ್ದುದರಿಂದ ಹಯಾತ್‌ಖಾನ್ ನಾಟಕದ ಸೂತ್ರಧಾರ ಎಂದರೆ ಅತಿಶಯೋಕ್ತಿಯಲ್ಲ. ಮೊಗಲ್ ಸಾಮ್ರಾಜ್ಯದ ಮೇಲೆ ಎಷ್ಟೋ ಲಾವಣಿಗಳನ್ನು ಹಯಾತ್‌ಖಾನ್ ಸ್ವತಃ ರಚಿಸಿದ್ದನು. ಅದನ್ನು ನಾಟಕದಲ್ಲಿ ಬಹಳ ರೀತಿಯಿಂದ ಹಾಡಿಸುತ್ತಿದ್ದನು. ನಾಟಕದಲ್ಲಿ ಬಣ್ಣಬಣ್ಣದ ಸೀನರಿ ಇರಬೇಕೆಂದು ಪಟೇಲರ ಹಿರಿಯ ಮಗ ಒಂದು ತಾಜಮಹಲಿನ ಚಿತ್ರ ಬರೆಸಿ ಅದನ್ನು ಎರಡನೆಯ ಪರದೆಯಾಗಿ ನೇತುಹಾಕುತ್ತಿದ್ದ. "ಮೊಗಲ್ ಸಾಮ್ರಾಜ" ಎಂಬ ಆಟ ನಮ್ಮಲ್ಲಿ ತಿಂಗಳುಗಟ್ಟಲೆ ನಡೆಯುತ್ತಿತ್ತು. ತಾಜಮಹಲ್ ಚಿತ್ರದ ಮುಂದೆ ಒಬ್ಬ ಹಳ್ಳಿಯ ಫಕೀರ ಹಾಡುತ್ತ ಬರುವಂತೆ ದೃಶ್ಯ ಆರಂಭವಾಗುತ್ತಿತ್ತು. ಪುನಃ ಎರಡನೆಯ

ಮೂರನೆಯ ದೃಶ್ಯವೂ ತಾಜಮಹಲಿನ ಮುಂದೇ ನಡೆಯುತ್ತಿತ್ತು. ಅಕ್ಬರ್‌ನಿಂದ ಹಿಡಿದು ಔರಂಗಜೇಬನ ತನಕವೂ ತಾಜಮಹಲೇ ನಮ್ಮ ನಾಟಕಕ್ಕೆ ಹಿನ್ನೆಲೆಯಾಗಿತ್ತು. ಇದನ್ನು ನೋಡಿ ಕೆಲವು ವೇಳೆ ನಮಗೆ ನಗು ಬರುತ್ತಿತ್ತು ಏಕೆಂದರೆ ಒಂದು ಸಾರಿ ಷಹಜಾನನು ತನ್ನ ಪ್ರೇಯಸಿ ಮಮ್ತಾಜಳನ್ನು, "ಇಗೋ ನೋಡು, ತಾಜಮಹಲ್ ಎಷ್ಟು ಸುಂದರ ವಾಗಿದೆ; ಬಾ, ಕೂಡಿ ನಲಿದಾಡುವ" ಎನ್ನುತ್ತಿದ್ದನು. ಮತ್ತೆ ಷಹಜಾನ್ ಸೆರೆಮನೆಯ ವಾಸದಲ್ಲಿದ್ದಾಗಲೂ ತಾಜಮಹಲಿನ ಚಿತ್ರ ಅಲ್ಲೇ ಇರು ತ್ತಿತ್ತು. ಒಮ್ಮೆ ಅಂತಃಪುರವೆಂಬಂತೆ, ಮತ್ತೊಮ್ಮೆ ಸೆರೆಮನೆಯಂತೆ, ಮಗ ದೊಮ್ಮೆ ರಣರಂಗವಾಗಿ ತಾಜಮಹಲ್ ಇದ್ದ ಜಾಗ ಬಿಟ್ಟು ಕದಲುತ್ತಿರ ಲಿಲ್ಲ ಯಾವಾಗಲಾದರೂ ನಾವು ನಕ್ಕರೆ ಹಯಾತ್‌ಖಾನನಿಗೆ ಕೋಪ ಬರುತ್ತಿತ್ತು "ಹಿಂದೆ ಚಿತ್ರ ಯಾವುದಿದ್ದರೇನು ? ನನ್ನ ಹಾಡನ್ನು ಅರ್ಥ ಮಾಡಿಕೊಳ್ಳದೆ ಸುಮ್ಮನೆ ನಗುತ್ತಿದ್ದೀರಿ. ನನ್ನ ಹಾಡಿನ ಹೊಡೆತದಿಂದ ತಾಜಮಹಲ್ ಚಿತ್ರವನ್ನೂ ರಣರಂಗ ಮಾಡಬಲ್ಲೆ. ನನ್ನ ಹಾಡಿನ ಮೃದುತ್ವದಿಂದಲೇ ತರುಣ ತರುಣಿಯರಲ್ಲಿ ಅನುರಾಗ ಹುಟ್ಟಿಸಬಲ್ಲೆ. ನೀವು ಹೀಗೆಯೇ ನಗುತ್ತಿದ್ದರೆ ಬಿಡುವಿಲ್ಲದಂತೆ ನಗಿಸಿಬಿಡುವೆ. ಏನೋ ಪಾಪ, ಬೆಳೆಯುವ ಹುಡುಗಿಯರು ಅಂತ ಸುಮ್ಮನಿದ್ದೇನೆ ಅಷ್ಟೆ. ಜಾಸ್ತಿ ಗಲಾಟೆ ಮಾಡಿದರೆ ಒಂದೊಂದು ಹುಡುಗಿಗೆ ಒಂದೊಂದು ಗಂಡನ್ನು ಇಲ್ಲೇ ಗಂಟು ಹಾಕಿಬಿಡುತ್ತೇನೆ" ಎಂದು ಹಯಾತ್‌ಖಾನ್ ಮತ್ತಷ್ಟು ನಗಿಸುತ್ತಿದ್ದನು ರಸಿಯಾ ಪಾತ್ರ ವಹಿಸುತ್ತಿದ್ದ ರಹೀಮನಿಗೆ ಅಲಂಕರಿ ಸಲು ಹಯಾತ್‌ಖಾನ್ ಎಷ್ಟೋ ಬಾರಿ ನನ್ನ ಉಡುಪುಗಳನ್ನು ಎರವ ಲಾಗಿ ತೆಗೆದುಕೊಳ್ಳುತ್ತಿದ್ದನು. ಅವಳಂತೆ ಮಾತನಾಡಬೇಕು; ಅವಳಂತೆ ನಡೆಯಬೇಕು, ಅವಳ ಹಾಗೆಯೆ ಇರಬೇಕು ಎಂದು ನನ್ನನ್ನೇ ನೋಡುತ್ತಾ ಹಯಾತ್ ರಹೀಮನಿಗೆ ನಿರ್ದೇಶಿಸುತ್ತಿದ್ದನು. ಕಡೆಗೆ ರಹೀಮ್ ರಸಿಯಾ ಬೇಗಂ ಆಗಿ ನಾಟಕದಲ್ಲಿ ಬಂದಾಗ ನನಗೇ ಆಶ್ಚರ್ಯ ವಾಗುತ್ತಿತ್ತು. ನನ್ನನ್ನು ನಾನೇ ನೋಡಿಕೊಳ್ಳುವಂತೆ ಮಾಡಿ ನಗುತ್ತಿ ದ್ದನು ಹಯಾತ್. ಹಯಾತ್‌ಖಾನನು ನಿಜವಾಗಿಯೂ ಸುಂದರನಾಗಿ

ದ್ದನು. ಅವನ ಜೆಟ್ಟಿಯಂಥಹ ವ್ಯಕ್ತಿತ್ವ ಯಾರನ್ನಾದರೂ ಆಕರ್ಷಿಸು
ವಂತಿತ್ತು. ಆದರೆ ಅವನ ಶಕ್ತಿ ಎಷ್ಟು ಹೆಚ್ಚಿನದಾಗಿತ್ತೋ ಅಷ್ಟೇ ಅವನ
ಮುಖ ಸೌಮ್ಯವಾಗಿತ್ತು. ಹಯಾತ್ ದಿನವೂ ನನ್ನನ್ನು ಕುಚೋದ್ಯ
ಮಾಡುವ ನೆಪದಲ್ಲಿ ನನ್ನ ಹತ್ತಿರ ಬರಲು ಪ್ರಯತ್ನಿಸುತ್ತಿದ್ದಾನೆಂದು
ಹೇಗೋ ತಿಳಿಯಿತು. ಅಂತೆಯೆ ನನ್ನ ಮನಸ್ಸು ಕೂಡ ಎಲ್ಲೆಲ್ಲೋ
ಹಾರಾಡಿ ಕಡೆಗೆ ಹಯಾತನ ಹತ್ತಿರವೇ ಹೋಗಲು ಹವಣಿಸುತ್ತಿದ್ದಿತು.
ಅನೇಕ ರೀತಿಯಲ್ಲಿ ಮನಸ್ಸು ಬಿಗಿಹಿಡಿಯಲು ಪ್ರಯತ್ನಪಟ್ಟೆ. ಆದರೂ
ಕೂಡ ಮನಸ್ಸಿನ ಮುಂದೆ ನಿಲ್ಲುವ ಇಚ್ಛೆ ಗಳಿಸಲು ಅಸಾಧ್ಯವಾಯಿತು.
ಎದೆಯ ಮೇಲೆ ಕೈ ಇಟ್ಟು ಸುಮ್ಮನೆ ಕುಳಿತುಬಿಟ್ಟೆ, ಮತ್ತಷ್ಟು ಎದೆಯ
ಮಿಡಿತ ಜೋರಾಗಿ ಕೇಳಲಾರಂಭಿಸಿತು. ಕಡೆಕಡೆಗೆ ನಾಟಕಕ್ಕೆ ಹೋದರೂ
ನನ್ನ ಗಮನವೆಲ್ಲ ಹಯಾತನ ಮೇಲೆ ಇದ್ದಿತು. ಹಾಗೆಯೆ ಹಯಾತನು
ಕೂಡ ನನ್ನನ್ನೇ ಕದ್ದು ನೋಡಲಾರಂಭಿಸಿದ. ನಾಟಕದಲ್ಲಿ ಹೆಚ್ಚು
ಹೆಚ್ಚು ಪ್ರಣಯಗೀತೆಗಳನ್ನೇ ಹಾಡುತ್ತಿದ್ದ. ತನ್ನ ಮನಸ್ಸಿನ ಅನು
ರಾಗದ ತೀವ್ರತೆಯನ್ನು ತೋರಲು ನಾಟಕವೇ ಅವನ ಸಾಧನವಾಯಿತು.
ಇಂತಹ ವಿಷಯಗಳನ್ನು ಹಳ್ಳಿಗಳಲ್ಲಿ ಗುಪ್ತವಾಗಿಡಲು ಸಾಧ್ಯವಾಗು
ವುದೇ ಇಲ್ಲ. ಹಾಗಯೆ ನಮ್ಮ ಹಳ್ಳಿಯಲ್ಲೂ ನನ್ನ ಮತ್ತು ಹಯಾತ್
ಖಾನನ ಮೇಲೆ ಎಲ್ಲಿಲ್ಲದ ಸಂದೇಹಗಳು ಹುಟ್ಟಿಕೊಂಡವು. ಅಶ್ವತ್ಥ
ಕಟ್ಟೆಯ ಬಳಿ ದಿನವೂ ಇಸ್ಪೀಟು ಆಡುತ್ತಿದ್ದ ತರುಣರಿಗಂತೂ ಇದೇ
ಪ್ರತಿದಿನದ ಕಾಲಹರಣವಾಯಿತು. ಒಬ್ಬೊಬ್ಬರು ಒಂದೊಂದು ರೀತಿ
ಯಲ್ಲಿ ಕಥೆ ಕಟ್ಟಲು ಪ್ರಾರಂಭಿಸಿದರು. ಆಗ ತಾನೆ ಯೌವನಕ್ಕೆ ಕಾಲಿಟ್ಟ
ಆ ಹುಡುಗರ ಅನುಭವವಿಲ್ಲದ ಮಾತುಗಳಂತೂ ತೀರ ಅಸಹ್ಯವಾಗಿತ್ತು.
ಕಡೆಗೆ ಆ ಹುಡುಗರ ಗುಂಪಿನಿಂದ ಪಟೇಲರ ಹಿರಿಯ ಮಗನಿಗೆ ಸುದ್ದಿ
ತಲುಪಿತು. ನಾಟಕದ ಮೇಲ್ವಿಚಾರಕನಾದ ತನಗೇ ದಕ್ಕದಂತೆ ಹುಡುಗಿ
ಯನ್ನು ಹಾರಿಸಿದ್ದಾನೆಂದು ಹಯಾತನ ಮೇಲೆ ಪಟೇಲರ ಮಗ ಉರಿದು
ಬಿದ್ದ. ಏನಾದರೂ ಮಾಡಿ ನನ್ನನ್ನು ಹೊಂದಬೇಕೆಂದು ಪಟೇಲರ ಮಗ
ಯಾರಿಗೂ ತಿಳಿಯದಂತೆ ಮನಸ್ಸಿನಲ್ಲೇ ಪ್ರತಿಜ್ಞೆ ಮಾಡಿದ. ಈ ಸಮಾ

ಚಾರ ನನಗೂ ತಿಳಿದುಬಂತು. ಆದರೆ ನಾನು ನಿಸ್ಸಹಾಯಕಳಾಗಿದ್ದೆ. ಅತ್ತ ಹಯಾತನ ಬಳಿ ಹೋಗೋಣವೆಂದರೆ ಅಷ್ಟು ಧೈರ್ಯ ಇನ್ನೂ ಬಂದಿರಲಿಲ್ಲ. ಅಥವಾ ಒಮ್ಮೆ ಆ ಧೈರ್ಯ ಬಂದರೂ ನಾಟಕದ ಮನೆಯಲ್ಲಿ ಹಯಾತನ ಬಳಿ ಪಟೇಲರ ಮಗ ಯಾವಾಗಲೂ ಇರುತ್ತಲೇ ಇದ್ದ. ಆ ರೀತಿ ಯಾವ ದಾರಿಯೂ ಕಾಣದೆ ಒಂದು ತಿಂಗಳ ಕಾಲ ರೆಕ್ಕೆ ಕಳೆದುಕೊಂಡ ಹುಳುವಿನಂತೆ ಒದ್ದಾಡಿದೆ

ನಮ್ಮ ಹಳ್ಳಿಯಲ್ಲಿದ್ದುದು ಒಂದೇ ಭಾವಿ. ನೀರು ತರಲು ಎಲ್ಲರೂ ಅಲ್ಲಿಗೆ ಬರಬೇಕು. ಹಾದು ಹೋಗುವ ದಾರಿಯಲ್ಲಿ ಹಿಂದೂ ಮನೆಗಳ ಬಳಿ ಬರಲೇ ಬೇಕಾಗಿತ್ತು. ಅಲ್ಲೇ ಊರ ಮುಖ್ಯಸ್ಥ ಪಟೇಲನ ಮನೆ ಇತ್ತು. ನಾನು ಅತ್ತ ಹೋದಾಗಲೆಲ್ಲ ಪಟೇಲರ ಮಗ ನನ್ನನ್ನೇ ಇಣಿಕಿ ನೋಡುತ್ತಿದ್ದನು. ಸ್ವಲ್ಪ ದಿನಗಳ ನಂತರ ಹೊರಕ್ಕೆ ಬಂದೇ ನೋಡಲಾರಂಭಿಸಿದ. ಅದನ್ನು ಕಂಡ ನನಗೆ ಕೋಪ ಉಕ್ಕೇರಿತು. ಸೊಂಟದಲ್ಲಿದ್ದ ಕೊಡದಿಂದ ನೀರು ಕೂಡ ಉಕ್ಕಿ ಚಲ್ಲಿಹೋಯಿತು. ಆಗ ನನಗೆ ಕೇಳಿಸುವಂತೆ, "ಹೌದು; ನಿಜವಾಗಿಯೂ ಸುಂದರಿಯರಿಗೆ ಕೊಡ ಕೊಟ್ಟರೆ ನೀರು ತರುತ್ತಾರೆಯೇ? ಅವರು ತಂದರೇನು ಬಿಟ್ಟರೇನು? ಆ ನೆಪದಿಂದಲಾದರೂ ಅವರ ರೂಪು ಲಾವಣ್ಯ ಹೀರಬಹುದಲ್ಲಾ ಎನ್ನುವುದೇ ಆ ಹಯಾತನಂಥವರಿಗೆ ಸಂತೋಷ. ಪಾಪ, ಅವನಿಗೇನು ಗೊತ್ತು ಬೀದಿ ಮೋಹಿನಿಯ ಸ್ವಭಾವ" ಎಂದು ಪಟೇಲರ ಮಗ ಬಳಿಯಲ್ಲಿ ಹೊಗೆಸೊಪ್ಪು ತೀಡುತ್ತಿದ್ದ ಗೆಳೆಯನಿಗೆ ಹೇಳಿಕೊಂಡ. ಹೀಗೆಯೆ ಅನೇಕ ದಿನಗಳು ಉರುಳಿದವು.

ಒಂದು ದಿನ ನೀರು ತರುತ್ತಿದ್ದಾಗ ಪಟೇಲರ ಮಗ ಅಡ್ಡಕಟ್ಟಿದ. ನಾನು ಬೆಚ್ಚಿಬಿದ್ದೆ. ಏನೂ ತೋಚದೆ ಕೊಡವನ್ನೇ ಎತ್ತಿ ಅವನ ತಲೆಯ ಮೇಲೆ ಕುಕ್ಕಿದೆ. ತಲೆಗೆ ಏಟು ಜೋರಾಗಿಯೆ ಬಿತ್ತು. ಕೋಪದಲ್ಲಿ ಮಾಡಿದ ಕೆಲಸ ನೋಡಿ ನನಗೆ ಒಂದು ತರಹ ಹೆದರಿಕೆಯೂ ಆಯಿತು. ಮರದ ಮೇಲೆ ಸಿಳ್ಳೆ ಹೊಡೆಯುತ್ತಿದ್ದ ಅವನ ಸ್ನೇಹಿತರು ಕೆಳಗಿಳಿದು ಬಂದರು. ಮೇಲಿನಿಂದ ಒಬ್ಬ ಥಂಗನೆ ನೆಲಕ್ಕೆ ಧುಮುಕಿದ. ಪಟೇಲರ

ಮೊಗನಿಗೆ ನೀರುತಟ್ಟಿ ಎಬ್ಬಿಸಿದ. ಪಟೇಲರ ಮಗ ನನ್ನನ್ನು ದುರುಗುಟ್ಟಿ ನೋಡಿ ನಾನು ಹೊದ್ದಿದ್ದ ಧಾವಳಿಯನ್ನು ಕಿತ್ತೆಸೆದ. ತಕ್ಷಣ ನಾನು ಓಡಿದೆ. ಆದರೆ ನನ್ನನ್ನೇ ಹಿಂಬಾಲಿಸಿ ಬಂದು ಮುಷ್ಟಿಯಿಂದ ನನ್ನ ಗಲ್ಲಕ್ಕೆ ಒಂದು ಏಟು ಬಿಗಿದ. ನನಗೆ ತಲೆ ತಿರುಗಿದಂತಾಗಿ ಬಿದ್ದುಬಿಟ್ಟೆ. ಐದು ನಿಮಿಷದ ನಂತರ ಎಚ್ಚರ ಬಂದಿತು. ನಾನು ಬಿದ್ದಿದ್ದ ಅವ್ಯವಸ್ಥೆ ಯನ್ನು ನೋಡಿ ನನಗೇ ನಾಚಿಕೆಯಾಯಿತು. ಸುತ್ತಲೂ ನೋಡಿದೆ. ಪಟೇಲರು ಮಗನನ್ನು ದರದರ ಎಳೆದುಕೊಂಡು ಹೊರಟರು. ನಾಟಕದ ವರೆಲ್ಲ ಅವನ ಹಿಂದೆಯೇ ಹೊರಟರು. ನನ್ನಂಥಹವನ ಮಗನಾಗಿ ಬೀದಿ ಯಲ್ಲಿ ಹೋಗುವ ಮುಸ್ಲಿಮ ಹುಡುಗಿಯ ಮೇಲೆ ಕೈ ಮಾಡಿದನಲ್ಲಾ ಎಂದು ಪಟೇಲರು ದುಃಖಪಟ್ಟರು. ಅದೂ ಅಲ್ಲದೆ ನಾಳೆಯ ದಿನ ಇದೇ ಕಾರಣದಿಂದ ಹಿಂದೂ ಮುಸ್ಲಿಮ ಗಲಭೆಯಾದರೆ ಹಳ್ಳಿಯ ಶಾಂತ ವಾತಾವರಣವೇ ಕೆಟ್ಟು ಹೋಗುವುದಲ್ಲಾ ಎಂದು ಪಟೇಲರು ಕಣ್ಣೀರು ಹಾಕಿದರು. ಸುಮಾರು ಮೂವತ್ತು ವರುಷಗಳಿಂದ ಗ್ರಾಮಾಡಳಿತವನ್ನು ಸುಗಮವಾಗಿ ನಡೆಸಿ ಕಡೆಗೆ ಮುದಿವಯಸ್ಸಿನಲ್ಲಿ ಈ ಕಪ್ಪುಹೆಸರು ಹೊಂದ ಬೇಕಲ್ಲಾ ಎಂದು ಪದೇ ಪದೇ ನೆನೆಸಿಕೊಂಡು ಮಗನನ್ನು ಬೈಯ್ದರು. ಹೆಂಡತಿ ಸತ್ತಾಗಿನಿಂದ ಎರಡನೆಯ ಮದುವೆಯನ್ನೂ ಮಾಡಿಕೊಳ್ಳದೆ ಮಗನನ್ನೇ ಸರ್ವಸ್ವವೆಂದು ತಿಳಿದಿದ್ದರು. ಅದಕ್ಕಾಗಿಯೆ ಮಗನಿಗೆ ಎಲ್ಲ ಸೌಲಭ್ಯಗಳನ್ನೂ ಒದಗಿಸಿಕೊಟ್ಟಿದ್ದರು. ಅದರ ಪ್ರತಿಫಲವೋ ಎನ್ನು ವಂತೆ ಪಟೇಲರಿಗೆ ಮಗನ ಇತ್ತೀಚಿನ ನಡವಳಿಕೆ ಬೇಸರಿಸಿತ್ತು. ಹಾಗಿ ದ್ದರೂ ಮಗನ ಮನಸ್ಸನ್ನು ತುಂಬ ನೋಯಿಸಬಾರದೆಂದು ಸುಮ್ಮನಾಗಿ ಬಿಟ್ಟರು.

ಇತ್ತ ನಡೆದ ವಿಷಯ ತಿಳಿದು ಹಯಾತ್‌ಖಾನನು ಕೋಪ ಗೊಂಡನು. ಪಟೇಲರ ಮಗನನ್ನು ಚೆನ್ನಾಗಿ ಬೈಯ್ದುಬಿಟ್ಟನು. ತಕ್ಷಣ ನಾಟಕದ ಕೂಟವನ್ನು ಬಿಟ್ಟು ಹೊರಬಂದನು. ಅಂದಿನಿಂದ ನಮ್ಮೂರಿ ನಲ್ಲಿ ಮಾಮೂಲಿನಂತೆ ನಡೆಯುತ್ತಿದ್ದ ಬಯಲುನಾಟಕ ನಿಂತು ಹೋಯಿತು. ಶಾಂತ ವಾತಾವರಣವೇ ಕಲಕಿಹೋಯಿತು. ಜೈನಾರಾಯ

ಣನು ಮುಸ್ಲಿಮರಿಗೆ ಹಣ ಕೊಡಲು ನಿರಾಕರಿಸಿದನು. ಹಿಂದೂ ಅಂಗಡಿಗಳ ಬಳಿ ಮುಸ್ಲಿಮರ ಸುಳಿದಾಟ ಕಡಿಮೆಯಾಯಿತು. ಒಂದು ಸಾರಿ ರಹೀಂ ನಾಟಕದ ಉಡುಪುಗಳನ್ನು ಗಂಟು ಕಟ್ಟಿ ಹಯಾತನ ಮನೆಗೆ ಬರುತ್ತಿದ್ದಾಗ ಪಟೇಲರ ಮಗ ಆ ಚಿಕ್ಕ ಹುಡುಗನನ್ನು ಹಿಂದಿನಿಂದ ಬಂದು ತನ್ನ ಮನೆಗೆಳೆದುಕೊಂಡು ಹೋದನು. ರಹೀಮನಿಂದಲೇ ಗಂಟನ್ನು ಬಿಚ್ಚಿಸಿದನು. ಅದರಲ್ಲಿ ನಾನು 'ರಜಿಯಾ ಬೇಗಂ' ಪಾತ್ರಾಭಿನಯಕ್ಕೆ ಕೊಟ್ಟ ವಸ್ತ್ರಗಳಿದ್ದವು. ರಹೀಮನಿಂದ ಅದನ್ನು ಕಸಿದುಕೊಂಡು ರಹೀಮನಿಗೇ ಎರಡೇಟು ಬಿಗಿದು ಕಳಿಸಿದನು. ರಹೀಂ ಹೊರಡದೆ ಅಲ್ಲೇ ನಿಂತಿದ್ದನು. ಅದು ತನ್ನ ಬಟ್ಟೆಯಲ್ಲವೆಂದೂ ಹಯಾತನಿಗೆ ವಾಪಸು ಕೊಡಬೇಕೆಂದೂ ಬೇಡಿಕೊಂಡನು. "ಇನ್ನು ಸ್ವಲ್ಪ ಗಲಾಟೆ ಮಾಡಿದರೆ ನಿನ್ನ ಬಟ್ಟೆಯನ್ನೂ ಕಳಚಿ ಬತ್ತಲೆಯಾಗಿ ನಿನ್ನನ್ನು ಬೀದಿಯಲ್ಲಿ ಬಿಸಾಡುವೆ. ತಿಳಿಯಿತೋ?" ಎಂದು ಪಟೇಲರ ಮಗ ಗಟ್ಟಿಯಾಗಿ ಗದರಿಸಿದಾಗ ರಹೀಂ ಹೆದರಿ ಓಡಿ ಬಂದುಬಿಟ್ಟನು.

ನಾನು ಸಿಗದಿದ್ದರೂ ನನ್ನ ಉಡುಪು ಸಿಕ್ಕಿತಲ್ಲಾ ಎಂದು ಪಟೇಲರ ಮಗ ಹಿಗ್ಗಿದನಂತೆ. ಆ ಉಡುಪಿನ ಹಿಂದೆ ನಾನೇ ಇರುವಂತೆ ಭಾವಿಸಿಕೊಂಡು ಅದರ ಜೊತೆ ದಿನವೆಲ್ಲಾ ಆಟವಾಡುತ್ತಿದ್ದನಂತೆ. ಆದರೆ ಹಾಗಿರಲು ಎಷ್ಟು ದಿನ ಸಾಧ್ಯ. ಮತ್ತೆ ಪಟೇಲರ ಮಗ ಹಿಂದಿನಂತೆಯೇ ಆಗಿ ನನ್ನ ಮೇಲೆ ಕಣ್ಣು ಹಾಕಲು ಪ್ರಾರಂಭಿಸಿಬಿಟ್ಟ. ಈ ಮಧ್ಯದಲ್ಲಿ ಪಟೇಲರು ಇದ್ದಕ್ಕಿದ್ದಂತೆ ತೀರಿಕೊಂಡರು. ಅಂತ್ಯಕಾಲದಲ್ಲಿ ಪಟೇಲರು ಶಾಂತವಾಗಿ ಕಾಲವಾದರೋ ಇಲ್ಲವೋ ಯಾರಿಗೂ ತಿಳಿಯದು. ಅಂತೂ ಅವರ ಹೊಟ್ಟೆ ಉಬ್ಬರಿಸಿತ್ತು. ಮೈ ನೀಲಿಯಾಗಿತ್ತು. ಯಾರೋ ಪಿಸು ಮಾತಿನಲ್ಲಿ, "ವಿಷ ಬಿದ್ದಿದ್ದರೂ ಬಿದ್ದಿರಬಹುದು" ಎಂದರು. ಆದರೆ ಪಟೇಲರಿಗೆ ವಿಷ ಹಾಕುವ ಧೈರ್ಯವಾಗಲಿ, ಮನಸ್ಸಾಗಲಿ ಯಾರಿಗೂ ಇರಲಿಲ್ಲ. ಅದೂ ಅಲ್ಲದೆ ಹಳ್ಳಿಯ ಜನವೆಲ್ಲ ಪಟೇಲರನ್ನು ದೇವರಂತೆ ಕಾಣುತ್ತಿದ್ದರು. ಹಾಗೆಯೇ ಪಟೇಲರೂ ತಮ್ಮ ಸಾತ್ವಿಕ ಗುಣವನ್ನು ಕಾಪಾಡಿಕೊಂಡು ಬಂದಿದ್ದರು. ಹಿಂದೆ ತಮ್ಮ ಮಗ ನನ್ನ ಮೇಲೆ ಕೈ

ಮಾಡಿದಾಗ ಪಟೇಲರು ಪಟ್ಟ ದುಃಖ ನಿಜವಾಗಿಯೂ ಅವರ ಹಿರಿಯ ತನವನ್ನು ಎತ್ತಿ ಹಿಡಿಯುವುದರಲ್ಲಿ ಸಂಶಯವಿಲ್ಲ. ಅಂಥಾದ್ದರಲ್ಲಿ ಪಟೇಲರನ್ನು ಕೊಲೆ ಮಾಡಲು ಯಾರು ತಾನೆ ಮುನ್ನುಗ್ಗಿಯಾರು ? ಎಂದು ಹಳ್ಳಿಯ ಜನವೆಲ್ಲ ಸಂದೇಹಪಟ್ಟರು.

ಒಂದು ದಿನ ರಾತ್ರಿ ನಾನು ಹಯಾತ್‌ಖಾನನ ಬಳಿ ನನ್ನ ದುಃಖ ವನ್ನು ತೋಡಿಕೊಳ್ಳುತ್ತಿದ್ದಾಗ, ಹಯಾತ್ ಹೇಳಿದನು—"ಪಟೇಲರನ್ನು ವಿಷ ಹಾಕಿ ಕೊಂದು ಈಗ ತಂದೆಯ ಬೇಲಿಯನ್ನೂ ಕಿತ್ತೆಸೆದು ನುಗ್ಗು ತ್ತಿದ್ದಾನೆ ಅವರ ಮಗ. ಅದಕ್ಕಾಗಿ ನೀನೇನೂ ಹೆದರಬೇಡ. ನಾನು ಎಲ್ಲ ಏರ್ಪಾಡು ಮಾಡಿದ್ದೇನೆ" ಎಂದು ನನ್ನ ಬುಜವನ್ನು ನೇವರಿಸಿ ನನಗೆ ಭರವಸೆ ಕೊಟ್ಟನು. ಆದರೂ ನನ್ನ ಮನಸ್ಸಿನ ಅಳುಕು ಕಡಿಮೆ ಯಾಗಲಿಲ್ಲ. ಪಟೇಲರ ಮಗನ ಚಿತ್ರ ಕಣ್ಣಿಗೆ ಕಟ್ಟಿದಂತಾಯಿತು. ತಕ್ಷಣ ಚೀರಿ ಹಯಾತನ ಎದೆಯ ಮೇಲೆ ಬಿದ್ದೆ. ಮತ್ತೆ ನಾ ಮಾಡಿದ ಕಾರ್ಯಕ್ಕೆ ನಾನೇ ಲಜ್ಜೆಪಟ್ಟು ಮೇಲಕ್ಕೆದ್ದೆ. ಹೊರಕ್ಕೆದ್ದು ಹೋದೆ. ಪುನಃ ಹಿಂದಕ್ಕೆ ಬಂದು ಹಯಾತನ ಬಳಿಯಲ್ಲಿಯೇ ಕುಳಿತೆ. ಅಂದು ಹಯಾತ್ ನನಗೆ ಆಶ್ರಯನಾಗಿ ಬಂದಿರದಿದ್ದರೆ ನಾನು ಉಳಿಯುತ್ತಿ ದ್ದೆನೋ ಇಲ್ಲವೋ ಸಂಶಯವಾಗಿತ್ತು. ಅಂತೂ ಹಯಾತ್ ನನ್ನ ಬಾಗದ ದೇವರಾಗಿದ್ದ. ಒಮ್ಮೆ ಕನಸಿನಲ್ಲಿ ಅವನನ್ನು ಮದುವೆಯಾಗಿ ಸುಖ ಸಂಸಾರವನ್ನು ನಡೆಸುತ್ತಿರುವಂತೆ ಕಂಡೆ. ಆದರೆ ಮರುಕ್ಷಣ ನಿಜ ಪ್ರಪಂಚದ ಅರಿವಾಗಿ ನಿಟ್ಟುಸಿರು ಬಿಟ್ಟೆ.

ಕೆಲವು ದಿನಗಳ ನಂತರ ನಮ್ಮ ಲೀಗಿನ ಚುಂದ್ರಿಗರ್ ಪ್ರಚಾರ ಕಾರ್ಯಕ್ಕಾಗಿ ನಮ್ಮ ಹಳ್ಳಿಗೆ ಬಂದರು. ಮುಸ್ಲಿಮರನ್ನು ಸಂಘಟಿಸುವು ದಕ್ಕಾಗಿ ಅವರು ಉಪನ್ಯಾಸ ಮಾಡಿದರು. ಆ ಕಾರ್ಯ ನೆರವೇರಿಸಲು ಒಬ್ಬ ಪ್ರಮುಖನನ್ನು ಅವರು ನೇಮಿಸಬೇಕಾಗಿತ್ತು. ಅದಕ್ಕೆ ಹಯಾತ್ ಖಾನ್ ಮುಂದೆ ಬಂದನು. ಇತರ ಮುಸ್ಲಿಮರು ಸದಸ್ಯರಾದರು. ಕಾರ್ಯ ವನ್ನು ಯಶಸ್ವಿಯಾಗಿ ನಡೆಸಿಕೊಡುವುದಾಗಿ ಹಯಾತ್‌ಖಾನ್ ಎಲ್ಲರ ಪರವಾಗಿ ಆಶ್ವಾಸನೆ ಕೊಟ್ಟನು. ಚುಂದ್ರಿಗರ್ ಅವರು ಹಯಾತ್

ಇತ್ತ ಒಂದು ದಿನ ಪಟೇಲರ ಮಗ ರಹೀಮುನನ್ನು ಹಿಡಿದು ತರಲು ಒಂದು ಉಪಾಯ ಹೂಡಿದ. ತನ್ನ ಗೆಳೆಯನೊಬ್ಬನ ಚಿಕ್ಕ ತಮ್ಮನಿಗೆ ರಹೀಮುನಿಂದ ಕಸಿದುಕೊಂಡ ಹೆಣ್ಣು ಉಡುಪನ್ನು ತೊಡಿಸಿದ. ಅವನನ್ನು ರಹೀಮುನು ಆಟವಾಡುತ್ತಿರುವ ಸ್ಥಳಕ್ಕೆ ಹೋಗುವಂತೆ ಆಜ್ಞೆ ಮಾಡಿದ. ರಹೀಂ ಜೂಜಾಟವಾಡುತ್ತಿದ್ದ ಇವನನ್ನು ನೋಡಿ ಕೋಪ ಗೊಂಡು ಹಿಂಬಾಲಿಸಲು ಓಡಿ ಬಂದ. ರಹೀಮುನಿಗೆ ನಾಟಕದಲ್ಲಿ ಹುಡು ಗಿಯ ಪಾತ್ರವಹಿಸಿ ಸ್ತ್ರೀ ಉಡುಪು ಕಂಡರೆ ಬಹಳ ಪ್ರೀತಿ ಇತ್ತು. ಕೆಲವರು ಹೇಳುತ್ತಿದ್ದಂತೆ ರಹೀಮುನು ಗಂಡಿಗಿಂತಲೂ ಹೆಣ್ಣಾಗಿದ್ದರೆ ಚೆನ್ನಾಗಿತ್ತು. ತನ್ನ ಉಡುಪು ಇವನು ಹೇಗೆ ಹಾಕಿಕೊಂಡ ಎನ್ನುತ್ತಲೇ ರಹೀಂ ಅವ ನನ್ನು ಹಿಂಬಾಲಿಸಿದ. ಆ ಹುಡುಗ ಪಟೇಲರ ಮನೆಗೆ ನೇರವಾಗಿ ಓಡಿದ. ಹಿಂದೆ ಬರುತ್ತಿದ್ದ ರಹೀಮನೂ ಒಳಕ್ಕೆ ನುಗ್ಗಿದ. ಸಮಯ ಕಾಯುತ್ತಿದ್ದ ಪಟೇಲರ ಮಗ ಮತ್ತು ಅವನ ಗೆಳೆಯರು ಬಲೆಯ ಪಾರಿ ವಾಳವನ್ನು ಹಿಡಿಯುವಂತೆ ರಹೀಮನನ್ನು ಒಳಕ್ಕೆ ಸೇರಿಸಿಕೊಂಡು ಮುಂಬಾಗಿಲಿನ ಅಗಳಿ ಹಾಕಿದರು. ರಹೀಂ ಬೆಚ್ಚಿಬಿದ್ದು ಅಳತೊಡ ಗಿದ.

“ಹಯಾತ್ ಏನು ಏನು ಒಳಸಂಚು ಮಾಡಿದ್ದಾನೆ? ಹೇಳು; ಇಲ್ಲದಿದ್ದರೆ ನಿನ್ನ ಜಪ್ಪ ಡ ಸುಲಿಯುತ್ತೇನೆ” ಎಂದು ಪಟೇಲರ ಮಗ ರಹೀಮುನನ್ನು ಹೆದರಿಸಿದಾಗ ರಹೀಂ ಎಲ್ಲವನ್ನೂ ಹೇಳಿಬಿಟ್ಟ. “ಸರಿ, ಇನ್ನು ಮೇಲೆ ನೀನು ನನ್ನ ಗುಂಪಿನಲ್ಲಿಯೇ ಇದ್ದುಬಿಡು. ನಿನಗೆ ಬೇಕಾದ್ದನ್ನು ತರಿಸಿಕೊಡುವೆ.” ಎಂದು ಪಟೇಲರ ಮಗ ರಹೀಮು ನಿಗೆ ಸಮಾಧಾನ ಹೇಳಿ ತನ್ನ ಮುಂದಿನ ಕಾರ್ಯಭಾರವನ್ನು ಯೋಚಿಸ ತೊಡಗಿದ “ಹಿಂದೂ ಹುಡುಗಿಯರ ಪಟ್ಟಿಯನ್ನು ತಯಾರಿಸಿ ಬಿಟ್ಟರೆ ಹಯಾತ್ ಏನು ಬೇಕಾದರೂ ಮಾಡಬಹುದೆಂದು ತಿಳಿದು ಕೊಂಡಿದ್ದಾನೆ. ಪಾಪ; ಅವನಿಗೇನು ಗೊತ್ತು ನಮ್ಮ ಹುಡುಗಿಯರ ಸುದ್ದಿ. ಬರೀ ಪಟ್ಟಿಯನ್ನೇ ನೋಡುತ್ತ ಸಂತೋಷಪಡಬೇಕಷ್ಟೆ!....”

ಎಂದು ಪಟೇಲರ ಮಗ ನಕ್ಕ. ಆಗಲೇ ಹಿಂದೂ ಹುಡುಗಿಯರನ್ನೆಲ್ಲ ಪಕ್ಕದ ಪಟ್ಟಣಕ್ಕೆ ಸಾಗಿಸಿ ಬಿಟ್ಟಿದ್ದ. ಅದಕ್ಕೆ ಸರಿಯಾಗಿ ಮುಸ್ಲಿಂ ಹುಡುಗಿಯರು ಯಾರೂ ಹೊರಕ್ಕೆ ಹೋಗದಂತೆ ಹಳ್ಳಿಯ ಗಡಿಯ ಸುತ್ತಲೂ ಗೂಢಚಾರರನ್ನು ನೇಮಿಸಿದ್ದ. ಅಂತೂ ಪಟೇಲರ ಮಗ ದೊಡ್ಡ ಕಾರ್ಯಕ್ಕೆ ಕೈ ಹಾಕಿದ್ದ.

ಹಳ್ಳಿಯಲ್ಲಿ ಹಿಂದಿನಂತೆ ವಿಶಾಲವಾದ ಮಾತುಕತೆಗಳು ನಿಂತು ಹೋದವು. ಅಲ್ಲಲ್ಲಿ ಗುಂಪು ಸೇರಿ ಹರಟೆಕೊಚ್ಚುತ್ತಿದ್ದ ತಂಡ ಕಾಣ ದಾಯಿತು. ಪ್ರತಿ ದಿನವೂ ಅಶ್ವತ್ಥ ಕಟ್ಟೆ ಕೆಳಗೆ ಇಸ್ಪೀಟು ಆಡುತ್ತಿದ್ದ ಪೋಲಿ ಹುಡುಗರು ಕೂಡ ಆಟವನ್ನೇ ನಿಲ್ಲಿಸಿಬಿಟ್ಟರು. ಜೈ ನಾರಾ ಯಣನು ತನಗೆ ನಷ್ಟವಾದರೂ ಚಿಂತೆಯಿಲ್ಲವೆಂದು ಹಿಂದೂಗಳಿಗೆಲ್ಲಾ ಕಂಠಪೂರ್ತಿಯಾಗುವಂತೆ ಹೆಂಡ ಸುರಿದನು. ಅಮಲಿನಲ್ಲಿ ಹಿಂದೂಗಳು ಮುಸ್ಲಿಮರನ್ನು ಮನ ಬಂದಂತೆ ಹೀಯಾಳಿಸಿದರು. ಯಾರಾದರೂ ಮಾತು ನಿಲ್ಲಿಸಿ ಎಂದರೆ ಎಲ್ಲ ಹೆಂಡದ ಪ್ರಭಾವವೇ ಹೊರತು ನಮ್ಮದಲ್ಲ ಎಂದುಬಿಡುತ್ತಿದ್ದರು. ಎಲ್ಲೆಲ್ಲಿ ನೋಡಿದರೂ ಸಂಶಯ ತಲೆದೋರಿತು. ಬೀದಿಯಲ್ಲಿ ಜನ ಮೌನತಾಳಿ ಆದರ ಸಾವಿರ ಪಾಲಷ್ಟು ಗದ್ದಲವನ್ನು ತಮ್ಮ ತಮ್ಮ ಮನೆಯೊಳಗೇ ಮಾಡಿಕೊಳ್ಳುತ್ತಿದ್ದರು. ಪಟೇಲರ ಮನೆಯ ಒಳ ಜಗಲಿಯಂತೂ ರಂಗಭೂಮಿಯಾಯಿತು. ಹಿಂದೆ ಇಡೀ ಹಳ್ಳಿಯ ಸೌಭಾಗ್ಯವನ್ನು ಚರ್ಚಿಸುತ್ತಿದ್ದ ಆ ಜಾಗ ಇಂದು ಹಳ್ಳಿಯ ದೌರ್ಭಾಗ್ಯಕ್ಕೆ ಎಡೆಕೊಟ್ಟಿತು. ಪಟೇಲರ ಸ್ಥಾನದಲ್ಲಿ ಅವರ ಮಗ ಕುಳಿತ ಮೇಲೆ ವಿಚಿತ್ರ ಬದಲಾವಣೆಗಳಾದವು.

ರಾಮೋತ್ಸವದ ಸಮಯ ಬಂದಿತು. ಹಿಂದೆ ರಂಜಾನ್ ರಾಮೋ ತ್ಸವಗಳು ಹಿಂದೂ ಮುಸ್ಲಿಮರಿಬ್ಬರಿಗೂ ಸಂತಸದ ದಿನಗಳಾಗಿದ್ದವು. ಆದರೆ ಇಂದಿನ ಪರಿಸ್ಥಿತಿ ತೀರ ಹದಗೆಟ್ಟಿತ್ತು. ರಾಮೋತ್ಸವದ ನೆಪ ದಲ್ಲಿ ಪಟೇಲರ ಮಗ ತನ್ನ ಗುಂಪನ್ನು ಹುರಿದುಂಬಿಸಿದ. ಇದೇ ಸಮಯ ವೆಂದು ಅವನ ಗೆಳೆಯರು ಬೆಂಬಲವಿತ್ತರು. ಯಾವ ಯಾವ ರೀತಿ

ಯಲ್ಲಿ ಹಯಾತ್ ಖಾನನನ್ನು ಭೂಗತ ಮಾಡಬಹುದೆಂದು ಯೋಚಿಸಿದರು. ಕಡೆಗೆ ಪಟೀಲರ ಮಗ. "ನಾವು ಉತ್ಸವ ಮಾರುತಿಯನ್ನು ಮಸೀದಿಯ ಬಳಿಯಲ್ಲೇ ಮೆರವಣಿಗೆ ಮಾಡೋಣ. ಈಗ ಹಯಾತ್ ತಾನಾಗಿಯೇ ಕಾಲು ಕೆರೆದುಕೊಂಡು ನಿಲ್ಲುತ್ತಾನೆ. ಆ ಸಮಯವನ್ನೇ ನಿರೀಕ್ಷಿಸಿ ತೀರಿಸಿಬಿಟ್ಟರಾಯಿತು." ಎಂದನು. ಎಲ್ಲರೂ ಒಪ್ಪಿದರು. ರಾಮೋತ್ಸವವನ್ನು ಅತಿ ವಿಜೃಂಭಣೆಯಿಂದ ನಡೆಸಲು ಏರ್ಪಾಡುಗಳಾದವು. ಮುಸ್ಲಿಮರಾರೂ ಉತ್ಸವದ ಬಳಿ ಬರಲು ಅವಕಾಶವಿರಲಿಲ್ಲ. ಹಿಂದಿನವರ್ಷದಲ್ಲಿ ಮುಸ್ಲಿಮರು ಕೂಡ ಕಬೀರ್ ಗೀತೆಗಳನ್ನು ಹಾಡುತ್ತ ರಾಮೋತ್ಸವದಲ್ಲಿ ಭಾಗವಹಿಸಿದ್ದರು. ಆದರೆ ಈ ವರ್ಷ ಆ ಏರ್ಪಾಡು ಪೂರ್ಣರದ್ದಾಯಿತು.

ಉತ್ಸವದ ದಿನ ಮೆರವಣಿಗೆ ಮಸೀದಿಯ ಬಳಿಯಲ್ಲೇ ಹಾದು ಹೋಯಿತು. ಆ ಸಣ್ಣ ಮಸೀದಿಯ ಮಾಡಿಯಿಂದ ಒಬ್ಬ ಹಣ್ಣು ಹಣ್ಣಾದ ಮುದುಕ ಇಳಿದು ಬಂದ. ಆತನಿಗೆ ಸಮಾರು ತೊಂಬತ್ತು ವರುಷವಿರಬಹುದು. ನಮ್ಮ ಹಳ್ಳಿಯ ಇತಿಹಾಸಕಾರನಂತೆ ಆತ ಕೋಲ ಮೇಲೆ ಕೈಯೂರಿ ರಾಮನ ವಿಗ್ರಹಕ್ಕೆ ಕೈ ಮುಗಿದ. ಅವನ ಕಣ್ಣುಗಳಲ್ಲಿ ಆನಂದ ಭಾಷ್ಪಗಳುದುರಿದವು. ಕಿವಿ ಕೇಳಿಸದಿದ್ದರೂ ಕಣ್ಣಿನ ನೋಟ ಚೆನ್ನಾಗಿತ್ತು. ಅಂತೆಯೆ ಇತ್ತೀಚಿನ ಒಡಕು ತೊಡಕುಗಳು ಅವನಿಗೆ ಗೊತ್ತಿರಲಿಲ್ಲ. ಮಸೀದಿಯಿಂದ ಕೆಲವು ಮುಸ್ಲಿಮ್ ತರುಣರು 'ವಾದ್ಯ ನಿಲ್ಲಿಸಿ ಸಮ್ಮನೆ ಮುಂದೆ ಹೊರಡಿ. ಗಲಾಟೆ ಮಾಡಿದರೆ ನಿಮಗೆ ಉಳಿಗಾಲವಿಲ್ಲ.....' ಎಂದು ಕೂಗಿದರು. ಆದರೆ ಪಟೇಲರ ಮಗ ವಾದ ನಿಲ್ಲಿಸದೆ ಮತ್ತಷ್ಟು ತಮ್ಮ ಕಡೆಯವರಿಗೆ ಗಲಾಟೆ ಮಾಡುವಂತೆ ಪ್ರೇರೇಪಿಸಿದ. ಉತ್ಸವದ ತೇರು ನೂಕುತ್ತಿದ್ದ ಪುಂಡು ಹುಡುಗರು ಕೆಲವು ಚೂಪಾದ ಕಲ್ಲುಗಳನ್ನು ಬೀರಲಾರಂಭಿಸಿದರು. ಅದರಲ್ಲಿ ಈಟಿಯಂತೆ ಹರಿತಾದ ಒಂದು ಕಲ್ಲು ಭಾವಾವೇಶದಿಂದ ವೈಮರೆತ್ತಿದ್ದ ಆ ಮುದಿ ಮುಸ್ಲಿಮನ ಹಣೆಗೆ ತಾಕಿತು. ರಕ್ತ ಧಾರಾಕಾರವಾಗಿ ಸುರಿಯಿತು.

ಕೈ ಮುಗಿದುಕೊಂಡೇ ರಾಮನನ್ನು ಧ್ಯಾನಿಸುತ್ತ ಕೆಳಕ್ಕೆ ಬಿದ್ದನು. ಪ್ರಾಣ ತಕ್ಷಣ ಹೊರಟು ಹೋಯಿತು. ಇದನ್ನು ಕಂಡ ಹಯಾತ್ ಖಾನ್ ಮತ್ತು ಇತರ ತರುಣರು ಉದ್ರೇಕಗೊಂಡು ಮಸೀದಿಯ ಕಿಟಕಿಗಳಿಂದ ಉತ್ಸವದ ಜನಕ್ಕೆ ಒಂದೇ ಸಮನೆ ಕಲ್ಲುಗಳನ್ನು ಬೀರಿದರು. ಮೇಲಿಂದ ಮೇಲೆ ಬೀಳುತ್ತಿದ್ದ ಕಲ್ಲಿನೇಟು ಸಹಿಸಲಾರದೆ ಹಿಂದೂಗಳು ಉತ್ಸವ ಮಾರುತಿಯನ್ನು ಅಲ್ಲೇ ಬಿಟ್ಟು ಓಡಿದರು.

ಪಟೇಲರ ಮಗ ಹಿಮ್ಮೆಟ್ಟಿದರೂ ಸ್ವಲ್ಪ ದೂರದಲ್ಲಿ ಒಂದು ಸಭೆ ಸೇರಿಸಿದನು. ಉತ್ಸವ ಮಾರುತಿಯನ್ನು ಸುಟ್ಟ ಮುಸ್ಲಿಮರನ್ನು ತೀರಿಸಿ ಬಿಡಲೇಬೇಕೆಂದು ತೀರ್ಮಾನಿಸಿದರು. ಜನ ತುಂಬ ಉದ್ರಿಕ್ತರಾಗಿ ಯಾವ ಕೆಲಸವನ್ನು ಬೇಕಾದರೂ ಮಾಡಲು ಸಿದ್ಧರಾಗಿದ್ದರು.

ಪಟೇಲರಮಗನ ಮುಖಂಡತ್ವದಲ್ಲಿ ಒಂದು ಗುಂಪು ಸೀಮೆಎಣ್ಣೆಯ ಗಡಂಗಿಗೆ ಮುತ್ತಿಗೆ ಹಾಕಿತು. ಗಡಂಗಿನ ಇಬ್ರಾಹಿಂ ಹೆದರಿಬಿಟ್ಟು ಅಂಗಡಿಗೆ ಒಳ ಬೀಗ ಹಾಕಿಕೊಂಡು ಹಿಂದಿನ ಬಾಗಿಲಿಂದ ಪರಾರಿಯಾದ. ಆದರೆ ಹಿಂದೂ ಯುವಕರು ಬಾಗಿಲನ್ನು ಜಾಡಿಸಿ ಒದ್ದರು. ಅವರೇಟು ತಡೆಯಲಾರದೆ ಭೂಮಿಯೂ ನಡುಗಿ ಬಾಗಿಲೂ ಕೆಳಕ್ಕೆ ಬಿತ್ತು. ಸೀಮೆ ಎಣ್ಣೆ ಡಬ್ಬಗಳನ್ನು ತಿರುಗ ಮುರುಗ ಮಾಡಿ ನೋಡಿದರು. ಸೀಲಾಗಿದ್ದ ಡಬ್ಬಗಳನ್ನು ಕೆಲವರು ಕಲ್ಲಿನಿಂದಲೇ ಕುಟ್ಟಿ ತೆಗೆದುಬಿಟ್ಟರು. ಉದ್ದನೆಯ ಕೋಲುಗಳನ್ನು ಸಂಪಾದಿಸಿದರು.. ತಮ್ಮ ತಲೆಯ ಪೇಟಗಳನ್ನು ಬಿಚ್ಚಿ ಕೋಲಿನ ತುದಿಗೆ ಕಟ್ಟಿದರು. ಒಬ್ಬೊಬ್ಬರು ಒಂದೊಂದು ಕೋಲನ್ನು ಆ ರೀತಿ ಕಟ್ಟಿ ಬಟ್ಟೆಯ ತುದಿಯನ್ನು ಎಣ್ಣೆಯೊಳಕ್ಕೆ ಅದ್ದಿದರು. ಮತ್ತೆ ಹೊರತೆಗೆದು ಹೊರಕ್ಕೆ ಬಂದರು. ಸಾಲಾಗಿ ಕೋಲುಗಗಳನ್ನು ಹಿಡಿದು ವಾನರ ಸೇನೆಯಂತೆ ಛಂಗನೆ ಕುಣಿದಾಡಿದರು. ಮುಸ್ಲಿಮ್ ಮನೆಗಳ ಮುಂದೆ ಓಡಿದರು.

ಆ ಸಮಯದಲ್ಲಿ ಮುಸ್ಲಿಮ್ ಗಂಡಸರೆಲ್ಲ ಮಸೀದಿಯಲ್ಲಿ ಸೇರಿದ್ದರು. ಮುಸ್ಲಿಮರ ಮನೆಗಳಲ್ಲಿ ಹೆಂಗಸರು ಮಾತ್ರ ಇದ್ದರು. ಅದನ್ನರಿತ

ಹಿಂದೂ ಯುವಕರು ತಮ್ಮ ಕೋಲ ತುದಿಗೆ ಬೆಂಕಿ ಕಡ್ಡಿ ಗೀರಿದರು. ಮೊದಲೇ ಸೀಮೆ ಎಣ್ಣೆಯಲ್ಲಿ ನೆಂದ ಚೆಂಡು ಉರಿಯತೊಡಗಿತು. ತಕ್ಷಣ ಮುಸ್ಲಿಮರ ಮನೆಗಳ ಮೇಲೆ ಬಿಸಾಡಿದರು. ಅದನ್ನು ಕಂಡ ಮುಸ್ಲಿಮ್ ಹೆಂಗಸರು ಮನೆಯಾಚೆ ಓಡಿದರು. ಆಗ ನಾನು ಕೂಡಬೀದಿಗೆ ಓಡಿ ಬಂದೆ. ನಮ್ಮಗಳನ್ನೆಲ್ಲ ಹಿಂದೂ ಯುವಕರು ಸುತ್ತುಗಟ್ಟಿದರು. ಆ ನೂಕು ನುಗ್ಗಾಟದಲ್ಲಿ ಎಷ್ಟೋ ಜನ ನನ್ನ ಎದೆಯ ಮೇಲೆಬಿದ್ದರು. ನನಗೆ ನಾಚಿಕೆಯಾಗಿ ಅತ್ತುಬಿಟ್ಟೆ. ಆಗ ಪಟೇಲರ ಮಗ ಮುಂದೆ ಬಂದು, "ಏಕೆ ಅಳುವೆ? ನಿಮಗೆ ಯಾವ ಹಾನಿಯನ್ನೂ ಮಾಡುವುದಿಲ್ಲ." ಎಲ್ಲರೂ ನಾನು ಹೇಳಿದ ಸ್ಥಳಕ್ಕೆ ಮಾತ್ರ ಬರಬೇಕು." ಎಂದು ಒಂದು ದೊಡ್ಡ ಪಾಳು ಮನೆಯಲ್ಲಿ ಹುಡುಗಿಯರನ್ನೆಲ್ಲಾ ಕೂಡಿ ಹಾಕಿದನು. ಆ ಮನೆ ಬಹಳ ಹಳೆಯ ಕಾಲದ್ದು. ಹಿಂದೆ ಯಾವನೋ ಒಬ್ಬ ಫಕೀರ ಅಲ್ಲಿದ್ದನಂತೆ. ಅವನು ಸಾಧುವಿನ ವೇಷ ಹಾಕಿಕೊಂಡು ಒಬ್ಬ ಮಾನ್ಯ ಯುವತಿಯನ್ನು ಬಲಾತ್ಕರಿಸಿ ಅತ್ಯಾಚಾರ ಮಾಡಿದನೆಂತಲೂ. ಸಹಿಸ ಲಾರದೆ ಆ ಹುಡುಗಿ ಮಧ್ಯ ರಾತ್ರಿಯಲ್ಲಿ ನೇಣುಹಾಕಿಕೊಂಡು ಪ್ರಾಣ ಬಿಟ್ಟಳೆಂತಲೂ ಹಳ್ಳಿಯುವರು ಆಗಾಗ ಹೇಳುತ್ತಿದ್ದರು. ಮತ್ತೆ ಆ ಹುಡುಗಿ ದೆವ್ವವಾಗಿ ಫಕೀರನನ್ನೂ ಕೊಂದು ಎಲ್ಲರಮೇಲೂ ಸಿಟ್ಟು ಗೊಂಡಿದ್ದಾಳೆಂದೂ ಹಳ್ಳಿಯವರ ನಂಬಿಕೆಯಾಗಿತ್ತು. ಆದ್ದರಿಂದಲೇ ಆ ಮನೆಯನ್ನು ದೆವ್ವದ ಮನೆಯೆಂತಲೂ ಬಹಳ ವರುಷಗಳಿಂದ ಹಳ್ಳಿಯ ಜನ ನಿರಾಕರಿಸಿದರು. ಅಂತಹ ಮನೆಯಲ್ಲಿ ನಮ್ಮ ನ್ನೆಲ್ಲ ಕೂಡಿ ಹಾಕಿದರು. ಆಗ ನಾವು ಏನೂ ಮಾಡುವಂತಿರಲಿಲ್ಲ. ನಮ್ಮನ್ನು ಅಲ್ಲಿ ಬಿಟ್ಟು ಪಟೇಲರ ಮಗ ಗುಂಪಿನೊಡನೆ ಮಸಿದಿಯ ಕಡೆ ತಿರುಗಿದ. ಆದರೆ ಅಷ್ಟರಲ್ಲಿ ನಮ್ಮ ಜನ ಪಕ್ಕದೂರಿಗೆ ಓಡಿಹೋಗಿದ್ದರು.

ಪಟೇಲರ ಮಗ ಪುನಃ ನಮ್ಮ ಬಳಿಗೆ ಬಂದ. ಸಾಧುವಿನಂತೆಯೆ ನಟಿಸಿದ. ನನ್ನ ಹತ್ತಿರ ಬಂದು ಬಲು ಮರ್ಯಾದೆಯಿಂದಲೇ ಮಾತ ನಾಡಿದ. ಅಂತೂ ಮನಸ್ಸಿಗೆ ಬೇಸರವಾಗಿದ್ದರೂ ನಮ್ಮ ತಂಟೆಗೆ

ಯಾರೂ ಬರಲಿಲ್ಲವಲ್ಲ ಎಂದೇ ನಮಗೆ ಸಮಾಧಾನವಾಗಿತ್ತು. ಬೆಂಕಿಗೆ ಸಿಲುಕಿ ಅಲ್ಲಲ್ಲಿ ಹರಿದು ಹೋಗಿದ್ದ ನಮ್ಮ ಬಟ್ಟೆಗಳನ್ನು ಕಂಡು ಪಟೇಲರ ಮಗ ಹೊಸ ಬಟ್ಟೆಗಳನ್ನು ತರಿಸಿಕೊಟ್ಟ. ಒಂದು ರಾತ್ರಿ ನನ್ನ ಬಳಿ ಬಂದು, "ನೋಡು, ನಾಳೆಯ ದಿನ ಪಕ್ಕದೂರಿಗೆ ಹೊರಟು ಬಿಡಬೇಕು. ಸರ್ಕಾರದವರು ಇಲ್ಲಾದ ಗಲಭೆಯ ಸಣ್ಣ ಸುದ್ದಿಯನ್ನೇ ದೊಡ್ಡದು ಮಾಡಿ ಪೋಲೀಸ್ ಪಡೆಯನ್ನು ಇಲ್ಲಿಗೆ ಕಳಿಸುತ್ತಾರೆಂದು ತಿಳಿದು ಬಂದಿದೆ. ಹಾಗೇನಾದರೂ ಬಂದರೆ ಪೋಲೀಸಿನ ಕೈಲಿ ನಾವು ಸಿಕ್ಕುವ ಕಷ್ಟ ಪ್ರಾಪ್ತವಾಗುತ್ತೆ. ಆದರಿಂದ ಗಂಡಸರಾದ ನಾವು ಹೇಗಾದರೂ ತಪ್ಪಿಸಿಕೊಳ್ಳಬಹುದು. ಆದರೆ ನೀವು ಅತ್ಯಾಚಾರಕ್ಕೆ ಗುರಿಯಾಗು ತ್ತೀರಿ. ಮಾನ ಮರ್ಯಾದೆ ಬಿಟ್ಟ ಪೋಲಿಸರು ಹೆಂಗಸರನ್ನು ಮನ ಬಂದಂತೆ ಉಪಯೋಗಿಸಿಕೊಂಡು ಬೀದಿಯಲ್ಲಿ ಬತ್ತಲೆಯಾಗಿ ಕಳಿಸಲೂ ಹೇಸುವುದಿಲ್ಲ. ಅದಕ್ಕಾಗಿ ನಾವೆಲ್ಲ ನಾಳೆ ಬೆಳಗಿನ ಝಾವವೇ ಪ್ರಯಾ ಣಕ್ಕೆ ಸಿದ್ಧವಾಗಬೇಕು. ನಿಮ್ಮನ್ನು ಕಾಪಾಡುವ ಭಾರ ನಮ್ಮ ಮೇಲಿ ರಲಿ." ಎಂದು ಪಟೇಲರ ಮಗ ನನ್ನ ಮುಖಕ್ಕೆ ಮುಖಕೊಟ್ಟು ಮಾತ ನಾಡಿದ. ಆಗ ಏಕೋ ಇದ್ದಕ್ಕಿದ್ದಂತೆ ಆ ಮುಖ ಹಯಾತ್ ಖಾನನ ಮುಖದಂತೆ ಕಂಡಿತು. ತಕ್ಷಣ ನನ್ನ ಗಲ್ಲವನ್ನು ಅವನ ಮುಖಕ್ಕೆ ಒತ್ತರಿಸಿದೆ. ಮರುಕ್ಷಣ ನೆನಪಾಗಿ ಪಟೇಲರ ಮಗನೊಡನೆ ಈ ರೀತಿ ಆಭಾಸ ಮಾಡಿಕೊಂಡೆನಲ್ಲಾ ಎಂದು ಬೆಚ್ಚಿ ಬಿದ್ದೆ. ಆದರೆ ಪಟೇಲರ ಮಗ ಬಹುದಿನದಿಂದ ಬಯಸಿದ್ದ ಆಸೆಯನ್ನು ಒಂದು ಕ್ಷಣದಲ್ಲಿ ತೀರಿಸಿಕೊಂಡೇ ಬಿಟ್ಟನು.

ಬೆಳಗಿನ ಝಾವ ಹುಡುಗಿಯರೆಲ್ಲ ಹಿಂದೂ ಗುಂಪಿಗೆ ಸೇರಿ ಪ್ರಯಾಣ ಬೆಳಸಿದೆವು. ಕೆಲವು ವೇಳೆ ಬಿಸಿಲಿನ ತಾಪ ಜೋರಾಗಿತ್ತು. ಮತ್ತೆ ಮಳೆಗಾಳಿಗಳೂ ನಮ್ಮನ್ನು ತಲ್ಲಣಿಸುತ್ತಿದ್ದವು. ಆಯಾಸದಿಂದ ನಿಶ್ಯಕ್ತರಾಗಿದ್ದಾಗ ಮರದ ನೆರಳಿನಲ್ಲೇ ಮಲಗಿಬಿಡುತ್ತಿದ್ದೆವು. ಆ ಸಮಯದಲ್ಲಿ ನಾವು ಎಷ್ಟೋ ಮಾನ ಮರ್ಯಾದೆಗಳನ್ನು ಬಿಡಬೇಕಾಯಿತು.

ನಾನು ಎದ್ದಾಗ ಕುಳಿತಾಗಲೆಲ್ಲ ಪಟೇಲರ ಮಗ ನನ್ನ ಮೇಲೆ ಕಣ್ಣಿಟ್ಟಿದ್ದ. ಈ ರೀತಿಯ ಇಣಿಕು ನೋಟಗಳನ್ನು ಸಹಿಸಲಾರದೆ ನಾನು ನಿದ್ರೆ ಮಾಡುವುದನ್ನೇ ಬಿಟ್ಟು ಬಿಟ್ಟೆ. ಸ್ವಾಭಾವಿಕವಾಗಿಯೇ ಬಂದ ನಿದ್ದೆಯನ್ನು ಅತಿ ಸಾಹಸದಿಂದ ಗೆಲ್ಲುತ್ತಿದ್ದೆ. ಬರ ಬರುತ್ತಾ ಅದೇ ರೋಗವಾಗಿ ಪರಿಣಮಿಸಿತು ಅದರ ಜೊತೆಗೆ ಓಡಾಟದ ಶ್ರಮ ಸೇರಿ ರೋಗ ಮೂರ್ಛೆರೋಗಕ್ಕೆ ತಿರುಗಿತು. ಕೆಲವು ವೇಳೆ ಮೂರ್ಛೆಯಿಂದ ಎಚ್ಚೆತ್ತ ನನ್ನ ದೇಹ ಮತ್ತಷ್ಟು ಶಕ್ತಿಹೀನವಾಗಿರುತ್ತಿತ್ತು. ಮೂರ್ಛೆ ಬಂದಾಗ ನನ್ನ ದೇಹದ ಸ್ಥಿತಿ ಹೇಗಿತ್ತೆಂಬುದನ್ನು ಊಹಿಸಲೂ ಅಸಾಧ್ಯವಾಯಿತು. ಕಡೆಗೆ ಹೇಗೋ ಪ್ರಯಾಸ ಪಟ್ಟುಕೊಂಡು ಈ ರಾಜಪುತ್ರಸ್ಥಾನದ ಗಡಿಯೊಳಗೆ ಬಂದೆವು.

ಆಗಿನಿಂದಲೂ ಈ ಶಿಬಿರದಲಿದ್ದೇನೆ. ನನ್ನ ಕಥೆಯನ್ನು ಕೇಳಿ ನಿಮಗೆ ಬೇಸರವಾಗಿರಬಹುದು. ಆದರೆ ನಿಮ್ಮ ಮುಖಭಾವ ಆ ಬೇಸರಿಕೆಯನ್ನು ತೋರಿಸುತ್ತಿಲ್ಲ. ನಿಮ್ಮಂತಹ ಸಹೃದಯರು ಸಿಗುವುದು ನಿಜವಾಗಿಯೂ ದುರ್ಲಭ...." ಎಂದು ಆ ಮುಸ್ಲಿಮ್ ಮಹಿಳೆ ಕಣ್ಣೀರು ಹಾಕಿದಳು.

"ಆದರೆ ಈ ಮಧ್ಯರಾತ್ರಿಯಲ್ಲಿ ಏಕೆ ಅಳುತ್ತಿದ್ದೆ ? ಹಿಂದಿನ ನೆನಪು ಬಂದಿತೇ ?" ಎಂದು ನಾನು ಪ್ರಶ್ನಿಸಿದೆ.

"ಇಲ್ಲ ಸ್ವಾಮಿ; ನಿನ್ನೆ ಮಲಗಿದ ತಕ್ಷಣ ಒಂದು ಕನಸು ಬಿತ್ತು. ಹಯಾತ್‌ಖಾನ್ ನನ್ನನ್ನೇ ಧ್ಯಾನಿಸುತ್ತ ಕಂಜರಿ ಹಿಡಿದು ಲಾವಣಿ ಹಾಡುತ್ತಿದ್ದ. ನಮ್ಮಿಬ್ಬರ ಮಧ್ಯದಲ್ಲಿ ದೊಡ್ಡ ಹಳ್ಳವಿತ್ತು. ನನ್ನನ್ನು ನೋಡಿದ ತಕ್ಷಣ ಹಯಾತ್ ಓಡಿಬಂದ. ಅಷ್ಟರಲ್ಲೇ ಹಳ್ಳದಲ್ಲಿ ಬಿದ್ದುಬಿಟ್ಟ. ಬಿರುಗಾಳಿ ಬೀಸಿ ಸುತ್ತುಮುತ್ತಲಿನ ಧೂಳನ್ನು ತಂದು ಹಳ್ಳ ಮುಚ್ಚಿಬಿಟ್ಟಿತು. ಆದರೂ ಕಂಜರಿಯ ಸದ್ದು ನಿಲ್ಲಲಿಲ್ಲ. "ಹಯಾತ್, ಹಯಾತ್" ಎಂದು ಕೂಗುತ್ತ ನಾನು ಕೂಡ ಹಳ್ಳದಲ್ಲಿ ಬಿದ್ದೆ. ಆದರೆ ನಾ ಬಿದ್ದ ತಕ್ಷಣ ಹಯಾತ್‌ನ ಕೈಯಲ್ಲಿದ್ದ ಕಂಜರಿಗೆ ಬಲವಾಗಿ ಪೆಟ್ಟು

ತಗಲಿ ಕಂಜರಿ ಒಡೆದುಹೋಯಿತು. ಅದಕ್ಕಾಗಿ ನಾನು ಅಯ್ಯೋ ಎಂದು ಬೆಚ್ಚುಬಿದ್ದೆ. ಇವತ್ತು ಕೂಡ ಸಾಯಂಕಾಲದ ತನಕ ಅದೇ ಯೋಚನೆ ಮಾಡುತ್ತಿದ್ದೆ. ಅಷ್ಟರಲ್ಲಿ ಪಕ್ಕದ ಶಿಬಿರದಲ್ಲೇ ಇರುವ ಪಟೇಲರ ಮಗ ನನ್ನ ಬಳಿ ಬಂದು, "ಯಾಕೆ ಸುಮ್ಮನೆ ಯೋಚನೆ ಮಾಡುವೆ? ಈಗ ಮಹಾತ್ಮ ಗಾಂಧೀಜಿಯವರು ಕೊಟ್ಟ ಹೇಳಿಕೆಯಂತೆ ಅಪಹೃತ ಮುಸ್ಲಿಂ ಸ್ತ್ರೀಯರನ್ನು ಅವರ ನಾಡಿಗೇ ಕಳಿಸುವರಂತೆ. ಆದರೆ ಅದರಿಂದ ನಿನ ಗೇನೂ ಪ್ರಯೋಜನವಿಲ್ಲ. ಏಕೆಂದರೆ ಈಗಾಗಲೆ ನಿನ್ನವರು ಕಾಲವಾಗಿ ಹೋಗಿದ್ದಾರೆ. ಹಯಾತ್ ಕೂಡ ಮೊನ್ನೆ ತಾನೆ ಸತ್ತುಹೋದನೆಂದು ವಿಷಯ ತಿಳಿಯಿತು. ಆದ್ದರಿಂದ ನನ್ನೊಡನೆ ಇದ್ದುಬಿಡು. ಸುಖವಾಗಿ ಕಾಲ ಕಳೆಯೋಣ. ಇನ್ನೂ ಹುಡುಗಿಯಾದ ನಿನಗೆ ಆಸೆ ಇದ್ದೇ ಇರ ಬೇಕು. ಆ ಆಸೆಯನ್ನು ಎಲ್ಲೋ ಹುಡುಕಿಕೊಂಡು ಹೋಗುವ ಬದಲು ನನ್ನಲ್ಲೇ ಪಡೆಯಲಾಗದೇ? ನಿನಗಾಗಿ ಎಷ್ಟೋ ಕಷ್ಟಪಟ್ಟಿದ್ದೇನೆ. ಇಂದು ರಾತ್ರಿ ನಾನು ಪುನಃ ಬರುತ್ತೇನೆ. ಸುಖಮಯ ಜೀವನಕ್ಕೆ ಇಂದೇ ನಾಂದಿಯಾಗಲಿ" ಎಂದು ಹೇಳಿಹೋದ. ಅದನ್ನೇ ಯೋಚಿಸುತ್ತ ಮಧ್ಯರಾತ್ರಿಯಲ್ಲಿ ಅಳತೊಡಗಿದೆ. ನಿಮ್ಮ ನಿದ್ದೆ ಕೆಡಿಸಿದ್ದಕ್ಕಾಗಿ ನನ್ನನ್ನು ಕ್ಷಮಿಸಿ" ಎಂದು ಅವಳು ನನಗೆ ಸಲಾಂ ಮಾಡಿದಳು.

"ಪಟೇಲರ ಮಗನಿಗೆ ಸರಿಯಾದ ಬುದ್ಧಿ ಕಲಿಸುತ್ತೇನೆ. ನೀನು ನಿರಾತಂಕವಾಗಿ ಮಲಗು ಹೋಗು" ಎಂದು ನಾನು ಅವಳನ್ನು ಸಮಾ ಧಾನಗೊಳಿಸಿ ನನ್ನ ಶಿಬಿರಕ್ಕೆ ಬಂದೆ.

ತಲೆಯಲ್ಲಿ ನೂರೆಂಟು ಯೋಚನೆಗಳು ಬಡಿದಾಡಿದವು. ನಿರಾಶ್ರಿತ ರೆಂಬ ಹೆಸರಿನಲ್ಲಿ ಶಿಬಿರದೊಳಗೆ ಸೇರಿದ್ದ ಪಟೇಲರ ಮಗನಂಥಹ ಗೋಮುಖವ್ಯಾಘ್ರಗಳನ್ನು ಕಂಡು ಹೆದರಿಕೆಯಾಯಿತು. ಹೆಣ್ಣು ಹಿಂದು ವಾದರೇನು ಮುಸ್ಲಿಮಳಾದರೇನು—ಹೆಣ್ಣೆಂದರೆ ಅದರ ಸುತ್ತ ಒಂದು ವಿಷವ್ಯೂಹ ಇದ್ದೇ ಇರುತ್ತದೆ ಎಂದು ಭಾಸವಾಯಿತು. ಅಂತೂ ಮುಸ್ಲಿಂ ಮಹಿಳೆಯ ಕಥೆ ನನ್ನ ಮನ ಕರಗಿಸಿತು. ಅವಳ ಜೀವನವನ್ನು ಯಾವ

ರೀತಿ ಸುಖಾಂತವಾಗಿ ಮಾಡಬಹುದೆಂದು ಯೋಚಿಸಿದೆ. ಆದರೆ ಸಮಸ್ಯೆಗೆ ತಕ್ಕ ಉತ್ತರ ದೊರೆಯಲಿಲ್ಲ. ಪಾಪ; ಆ ಶಿಬಿರದಲ್ಲಿ ಇನ್ನೆಷ್ಟು ಮುಸ್ಲಿಂ ಮಹಿಳೆಯರು ಹೀಗೆಯೆ ನರಳಾಡುತ್ತಿರುವರೋ ಎಂದು ನನ್ನಲ್ಲಿ ನಾನೇ ದುಃಖಪಟ್ಟೆ. ಗಾಂಧೀಜಿಯವರು ಹೇಳಿದಂತೆ ಅವರನ್ನು ಅವರ ನಾಡಿಗೇ ಕಳಿಸಿಬಿಟ್ಟರೆ ಒಳ್ಳೆಯದಾಗುತ್ತದೆಯೇ? ಎಂದು ಪ್ರಶ್ನಿಸಿಕೊಂಡೆ. ಆದರೆ ಅವರ ನಾಡಿನ ಸ್ಥಿತಿ ಈಗ ಹೇಗಿದೆಯೋ? ಒಂದುವೇಳೆ ಅದೇ ಜನ ಇದ್ದರೂ ಅವರು ಮನೆಗೆ ಬಂದ ಮಹಿಳೆಯರ ಮೇಲೆಯೆ ಸಂಶಯಪಟ್ಟರೆ ಆ ಯುವತಿಯರ ಜೀವನವೇ ಹಾಳಾಗುವುದಿಲ್ಲವೇ? ಅಥವಾ ಇಲ್ಲೇ ಉಳಿದುಕೊಂಡರೆ ಪಟೇಲರ ಮಗನಂಥಹವರು ಜಾಸ್ತಿಯಾಗಿ ಬೀದಿಯಲ್ಲಿ ಬಿದ್ದ ವಸ್ತುವಿನಂತೆ ಅವರ ಮೇಲೆ ಅತ್ಯಾಚಾರ ನಡೆಸುವುದರಲ್ಲಿ ಸಂಶಯ ವಿಲ್ಲ. ಆಗ ಆ ಭಗ್ನಹೃದಯಿಗಳು ಅವರಿಗೆ ತಲೆ ಬಾಗಲೇಬೇಕು. ಬಲಾತ್ಕಾರದಿಂದ ಅವರ ಆಸೆಯನ್ನು ಈಡೇರಿಸಲೇ ಬೇಕು. ಹೀಗೆ ಮೈ ಮನಸ್ಸು ಎರಡನ್ನೂ ಕೆಡಿಸಿಕೊಂಡ ಯುವತಿಯರು ಮುಂದೆ ಬದುಕಿ ಯಾರೇ? ಅವರು ಕಣ್ಮರೆಯಾದರೂ ಅವರಿಂದ ಬಂದ ಶನಿಸಂತಾನ ತನ್ನದೇ ಆದ ದುರದೃಷ್ಟವನ್ನು ನಾಡಿನಲ್ಲೆಲ್ಲ ಬೀರುವುದಲ್ಲವೇ? ಇದಕ್ಕೆಲ್ಲ ನಮ್ಮ ಶಿಬಿರವೇ ಕಾರಣವಾಗುವುದಿಲ್ಲವೇ?" ಇವೇ ಮುಂತಾದ ಯೋಚನೆ ಗಳು ನನ್ನಲ್ಲೇ ಉಳಿದುಕೊಂಡವು.

ಹೀಗೆ ನನ್ನ ಯೋಚನೆಗೆ ಯಾವ ಉತ್ತರವೂ ನಿಲುಕದಿದ್ದಾಗ ಒಂದು ದಿನ ನನ್ನನ್ನು ದೆಹಲಿಗೆ ವರ್ಗಾಯಿಸಿದ್ದಾರೆಂದು ಸುದ್ದಿ ಬಂದಿತು. ಮೇಲಿನ ವ್ಯವಸ್ಥಾಪಕರು—ಅಂದರೆ ಸರಕಾರದ ಅಧಿಕಾರಿಗಳಲ್ಲೊಬ್ಬರು —ನನ್ನ ಕಾರ್ಯದಕ್ಷತೆಯನ್ನು ಹೊಗಳಿ ಪತ್ರ ಬರೆದಿದ್ದರು. ದೆಹಲಿಗೆ ಇತ್ತ ಪಂಜಾಬಿನಿಂದಲೂ, ಅತ್ತ ಬಂಗಾಳದಿಂದಲೂ ನಿರಾಶ್ರಿತರು ತಂಡ ತಂಡವಾಗಿ ಬರುತ್ತಿದ್ದುದರಿಂದ ಅಲ್ಲಿಯ ಸಮಸ್ಯೆ ಕಠಿಣತರವಾಗಿದೆಯೆಂದು ಅವರು ಬರೆದಿದ್ದರು. ಆದಕ್ಕಾಗಿಯೆ ನನ್ನನ್ನು ಅಲ್ಲಿಗೆ ಹೋಗಲು ಸೂಚಿಸಿದ್ದರು.

ತಲೆಯ ತುಂಬ ಸಂದಿಗ್ಧ ವಿಷಯಗಳನ್ನು ಹೊತ್ತುಕೊಂಡು ದೆಹಲಿಗೆ ಪ್ರಯಾಣ ಮಾಡಿದೆ. ಅಂದು ಮಧ್ಯರಾತ್ರಿಯಲ್ಲಿ ಅಳುತ್ತಿದ್ದ ಮುಸ್ಲಿಂ ಮಹಿಳೆ ಇಂದೂ ಅಳುತ್ತಿರುವಳೋ ಏನೋ ಎಂದು ಮೇಲೆದ್ದು ಕುಳಿತೆ. ಆದರೆ ರೈಲಿನ ಶಬ್ದ ಮಧ್ಯರಾತ್ರಿಯಲ್ಲಿ ಅಳುತ್ತಿದ್ದಂತೆಯೇ ಇತ್ತು. ಇಡೀ ಜಗತ್ತೇ ನನ್ನೆದುರಿಗೆ ನಿಂತು ಅಳುತ್ತಿರುವಂತೆ ಕಂಡಿತು.

ದೆಹಲಿಗೆ ಮೂರು ಮೈಲಿ ದೂರದಲ್ಲಿದ್ದಿತು ನಮ್ಮ ಶಿಬಿರ. ನನ್ನನ್ನು ಸ್ವಾಗತಿಸಲು ಅಲ್ಲಿಯ ಮುಖಂಡರು ಬಂದಿದ್ದರು. ಪರಸ್ಪರ ಪರಿಚಯ ವಾದಮೇಲೆ ಶಿಬಿರದ ಕಾರ್ಯಕಲಾಪಗಳನ್ನು ನನಗೆ ವರ್ಣಿಸಿದರು. ಅದೊಂದು ನಿರಾಶ್ರಿತರ ಶಿಬಿರವಾಗಿದ್ದರೂ ಸ್ತ್ರೀಯರಿಗೇ ಮೀಸಲಾಗಿತ್ತು. ನಿರಾಶ್ರಿತರಾಗಿ ಬಂದ ಸ್ತ್ರೀಯರಿಗೆ ಆದಷ್ಟು ಸ್ವಾವಲಂಬನೆಯಿಂದ ಜೀವನ ನಡೆಸಲು ಏರ್ಪಾಡುಮಾಡಿ ಕೊಡಲಾಗಿತ್ತು. ಕೇವಲ ಸ್ವಲ್ಪ ತಿಂಗಳುಗಳಿಂದಲೇ ಅದರ ಪ್ರತಿಫಲ ಕಾಣಬರುತ್ತಿತ್ತು. ಕುಶಲ ಕಲೆ ಗಳಲ್ಲಿ ಪರಿಣತರಾದ ಸ್ತ್ರೀಯರು ಸ್ಫೂರ್ತಿಯಿಂದ ಕಾರ್ಯ ಮಾಡತೊಡಗಿ ದ್ದರು. ಹಳ್ಳಿಯ ಹೆಂಗಸರು ಶಿಬಿರದ ಸುತ್ತಲೂ ಇದ್ದ ಬೀಡು ಜಾಗ ವನ್ನು ಹಸನು ಮಾಡಿ ಉತ್ತಮತರದ ತರಕಾರಿಯನ್ನೂ ಹೂಗಳನ್ನೂ ಬೆಳೆದಿದ್ದರು. ಕೆಲವರು ಅತ್ಯಲ್ಪ ಕಾಲದಲ್ಲೇ ಚಾಪೆಗಳನ್ನು ಸೊಗಸಾಗಿ ಹೆಣೆಯುತ್ತಿದ್ದರು. ಇನ್ನು ಕೆಲವರು ಲಾಭದಾಯಕವಾಗಿ ಕೋಳಿಗಳನ್ನು ಸಾಕುವುದರಲ್ಲಿ ತೊಡಗಿದ್ದರು. ಮತ್ತಿತರರು ದನ ಕರುಗಳನ್ನು ಮೇಯಿ ಸಲು ಸೊಂಪಾದ ಹುಲ್ಲನ್ನು ಬೆಳೆದಿದ್ದರು. ಅಂತೂ ಆ ಶಿಬಿರ ತನ್ನದೇ ಆದ ಸಂಸಾರವನ್ನು ಕಲ್ಪಿಸಿತ್ತು. ವಿದ್ಯಾವಂತ ಯುವತಿಯರು ಅದರ ಮೇಲ್ವಿಚಾರಕರಾಗಿದ್ದರು. ಹೊಸ ಹೊಸ ಪುಸ್ತಕಗಳನ್ನೋದಿ ಅವರು ಇತರರಿಗೆ ಸಲಹೆ ಕೊಡುತ್ತಿದ್ದರು. ಪ್ರತಿ ವಾರವೂ ಎಲ್ಲರೂ ತಮ್ಮ ತಮ್ಮ ಕಾರ್ಯಗಳ ವರದಿಯನ್ನು ಒಪ್ಪಿಸುತ್ತಿದ್ದರು. ಅದರಲ್ಲಿ ಕೆಲವರು ತಮ್ಮ ಕಾರ್ಯದಕ್ಷತೆಗಾಗಿ ಮೆಚ್ಚುಗೆ ಪಡೆಯುತ್ತಿದ್ದರು. ಅದಕ್ಕಾಗಿ ಅವರಿಗೆ ಬಹುಮಾನವನ್ನೂ ಹಂಚಲಾಗುತ್ತಿತ್ತು. ಅದನ್ನು ನೋಡಿದ ಇತರರು

ತಾವು ಅದೇ ರೀತಿ ಬಹುಮಾನ ಪಡೆಯಲು ಪ್ರಯತ್ನಿಸುತ್ತಿದ್ದರು. ಕಾರ್ಯವನ್ನು ವಿಚಕ್ಷಣೆಯಿಂದ ನಡೆಸಲು ಈ ಬಹುಮಾನ ವಿನಿಯೋಗವು ಒಂದು ಪ್ರಮುಖ ಸಾಧನವಾಗಿತ್ತು. ಆದರೆ ಇದರಿಂದ ಯಾವ ಅಸೂಯೆಗೂ ಎಡೆಗೊಡದಂತೆ ಕಾರ್ಯಕರ್ತರು ನೋಡಿಕೊಳ್ಳಬೇಕಾಯಿತು. ಶಿಬಿರದ ವ್ಯವಸ್ಥಾಪಕರೆಲ್ಲ ಸ್ತ್ರೀಯರೇ ಆದ್ದರಿಂದ ಅಸೂಯೆಗೆಡೆಗೊಡದಂತೆ ಕಾರ್ಯ ನಡೆಸಲು ಅಸಮರ್ಥರಾಗಿದ್ದರು. ಕೆಲವು ವೇಳೆ ದಿಟ್ಟತನದ ಉತ್ತರ ಹೇಳಲು ಹಿಂಜರಿಯುತ್ತಿದ್ದರು. ಮಕ್ಕಳನ್ನು ಹೆತ್ತು ನಿಶ್ಯಕ್ತರಾಗಿದ್ದ ಹೆಂಗಸರು ತಪ್ಪು ಕೆಲಸ ಮಾಡಿದರೂ ಅವರನ್ನು ಬಯ್ಯದೆ ಕ್ಷಮಿಸಿಬಿಡುತ್ತಿದ್ದರು. ಎಷ್ಟೋ ವೇಳೆ ಸಲಹೆ ಕೊಡುತ್ತೇನೆಂದು ಹೊರಟವರು ಉದ್ದೇಶವನ್ನೇ ಮರೆತು ಹಿಂತಿರುಗಿಬಿಡುತ್ತಿದ್ದರು. ಆದ್ದರಿಂದಲೇ ಶಿಬಿರವು ಸ್ತ್ರೀಯರಿಗೇ ಮೀಸಲಾಗಿದ್ದರೂ ಮೇಲ್ವಿಚಾರಕನಾಗಿ ಒಬ್ಬ ದಕ್ಷ ಪುರುಷನಿದ್ದರೇ ಮೇಲೆಂದು ತೀರ್ಮಾನಿಸಿದ್ದರು. ಅದಕ್ಕಾಗಿಯೇ ಈ ಶಿಬಿರಕ್ಕೆ ನನಗೆ ಆಹ್ವಾನ ಬಂದಿದ್ದು. ನನ್ನನ್ನು ಉತ್ತಮ ಕಾರ್ಯಕರ್ತನೆಂದು ಅವರು ತಿಳಿದಿದ್ದರು. ನನಗ ನಾನು ಇನ್ನೂ ಸಂಶಯ ವ್ಯಕ್ತಿಯಾಗಿದ್ದರೂ ಇತರರಿಗೆ ಅಸಮಾನ್ಯ ಪುರುಷನಾಗಿದ್ದೆ. ಅಂತೂ ಶಿಬಿರದ ಮೇಲ್ವಿಚಾರಕನಾಗಿ ಕೆಲಸ ಮಾಡತೊಡಗಿದೆ.

ಸ್ವಲ್ಪ ದಿನಗಳ ನಂತರ ಶಿಬಿರದ ಹೆಸರು 'ಸ್ತ್ರೀ ಸಂರಕ್ಷಣಾಲಯ' ಎಂದು ಮಾರ್ಪಟ್ಟಿತು. ನಿರಾಶ್ರಿತ ಸ್ತ್ರೀಯರನ್ನು ಕಡೆಯ ತನಕವೂ ನಿರಾಶ್ರಿತರನ್ನಾಗಿಡುವುದು ಒಳ್ಳೆಯದಲ್ಲವೆಂದೂ, ಆದಷ್ಟು ಬೇಗ ಅವರನ್ನು ದೇಶದ ಸತ್ಪ್ರಜೆಯನ್ನಾಗಿ ಮಾಡಬೇಕೆಂದೂ ಇತರರೊಡನೆ ನಾನು ತೀರ್ಮಾನಿಸಿದೆ. ದೆಹಲಿಯಲ್ಲಿ ಇನ್ನೂ ಅನೇಕ ಸ್ತ್ರೀ ಶಿಬಿರಗಳಿದ್ದವು. ಅದರಲ್ಲಿ ಕೆಲವು ಅನಾಥಾಲಯಗಳು. ಅದರ ವಿಚಾರಗಳನ್ನು ತಿಳಿದುಕೊಳ್ಳಬೇಕೆಂದು ನನಗೆ ಕುತೂಹಲವಾಯಿತು. ಅದೂ ಅಲ್ಲದೆ ನಿರಾಶ್ರಿತರ ವಿಷಯವಾಗಿ ಎಲ್ಲೆಲ್ಲಿ ನೋಡಿದರೂ ಉಪನ್ಯಾಸಗಳಾಗುತ್ತಿದ್ದವು. ಸೇಠ್ ಡಾಲ್ಮಿಯಾ ಅವರಂಥ ಲಕ್ಷಾಧೀಶ್ವರರೂ ನಿರಾಶ್ರಿತರ ಪರವಾಗಿ ವಾದಿಸುತ್ತಿದ್ದರು. ನಿರಾಶ್ರಿತ ಸ್ಥಿರ ಚರ ಆಸ್ತಿಗಳ ಮೇಲೆ

ದಾಲ್ಮಿಯ ಅವರ ಅಭಿಪ್ರಾಯ ಖಚಿತವಾಗಿತ್ತು. ಬಿರ್ಲಾಭವನದಿಂದ ಗಾಂಧೀಜಿಯವರು ನಿರಾಶ್ರಿತರ ಕಷ್ಟ ನಿಷ್ಠೂರಗಳಿಗೆ ತಮ್ಮದೇ ಆದ ಸರಳ ರೀತಿಯಲ್ಲಿ ಉತ್ತರ ಹೇಳುತ್ತಿದ್ದರು. ನೆಹರೂ ಸರ್ಕಾರ ನಿರಾಶ್ರಿತ ರಿಗೆ ಆದಷ್ಟು ವಸತಿ ಸೌಕರ್ಯಗಳನ್ನು ಒದಗಿಸಿಕೊಟ್ಟಿತ್ತು. ಅದಕ್ಕಾಗಿ ಪ್ರತ್ಯೇಕ ಇಲಾಖೆಯನ್ನೇ ತೆರೆದು ಒಬ್ಬ ಮಂತ್ರಿಯನ್ನು ನೆಹರೂರವರು ನೇಮಿಸಿದ್ದರು. ಅಷ್ಟೇ ಅಲ್ಲದೆ ನೆಹರೂರವರೇ ಎಷ್ಟೋ ನಿರಾಶ್ರಿತರಲ್ಲಿ ಮಾತನಾಡಿ ಅವರ ಕಷ್ಟಸುಖಗಳನ್ನು ಚರ್ಚಿಸಿದ್ದರು.

ನಮ್ಮ 'ಸ್ತ್ರೀ ಸಂರಕ್ಷಣಾಲಯ'ದಲ್ಲಿ ಸ್ತ್ರೀಯರು ತಮ್ಮ ಶಕ್ತಿಯ ಮೇಲೆ ತಾವು ನಿಲ್ಲುವಂತಾದಮೇಲೆ ಶಿಬಿರವನ್ನು ಬಿಟ್ಟುಬಿಡಬಹು ದಾಗಿತ್ತು. ಹಾಗಿಲ್ಲದಿದ್ದರೆ ಅಸಂಖ್ಯಾತವಾಗಿ ಬರುತ್ತಿದ್ದ ಸ್ತ್ರೀಯರನ್ನು ನಮ್ಮ ಶಿಬಿರದಲ್ಲಿ ಇಟ್ಟುಕೊಳ್ಳಲಾಗುತ್ತಿರಲಿಲ್ಲ. ಕೆಲವು ಸ್ತ್ರೀಯರು ಸ್ವತಃ ಜೀವನ ನಡೆಸುವ ಶಕ್ತಿಯುಳ್ಳವರಾಗಿದ್ದರೂ ನಮ್ಮ ಶಿಬಿರವನ್ನು ಬಿಡದೆ ಇದ್ದುದು ನನಗೆ ಆಶ್ಚರ್ಯದ ಸಂಗತಿಯಾಗಿತ್ತು. ಅದೂ ಅಲ್ಲದೆ ಅವರಲ್ಲಿ ಅನೇಕರು ಇನ್ನೂ ತರುಣಿಯರು. ಮುಂದೆ ಸಂಸಾರ ಮಾಡಿಕೊಂಡು ಸುಖವಾಗಿರುವ ಕನಸು ಕಾಣದೆ ದಿನವೂ ಬರುತ್ತಿದ್ದ ನಿರಾಶ್ರಿತರ ಹೊಸ ರೀತಿಯ ದುಃಖಪ್ರಪಂಚವನ್ನು ನೋಡುವುದರಲ್ಲೇ ತೃಪ್ತರಾಗಿದ್ದರು. ಆದರೆ ಕಡೆಯ ತನಕವೂ ಅವರು ಹಾಗೆಯೇ ಇರುತ್ತಾರೆಯೇ ಎಂಬ ಪ್ರಶ್ನೆ ನನ್ನನ್ನು ಕಾಡಿಸಿತ್ತು. ಕೆಲವು ಕಾಲ ತಳ್ಳಿದ ಮೇಲೆ ಅದಕ್ಕೆ ಸೂಕ್ತ ಉತ್ತರ ಸಿಗಬಹುದೆಂದು ನಾನು ಭಾವಿಸಿದೆ.

ಮೂರು ತಿಂಗಳಲ್ಲಿ ಆದಷ್ಟು ಶಿಬಿರದ ಅವ್ಯವಸ್ಥೆಗಳು ಕಡಿಮೆ ಯಾದವು. ನಿರಾಶ್ರಿತರಿಗಾಗಿ ದೇಶದ ನಾನಾ ಮೂಲೆಗಳಿಂದ ಆಹಾರ, ಬಟ್ಟೆಗಳು ಬರತೊಡಗಿದವು. ಖಾಸಗಿ ಸಂಸ್ಥೆಗಳಲ್ಲಿ ರಾಮಕೃಷ್ಣಾಶ್ರಮ ಹೆಚ್ಚಿನ ಪರಿಶ್ರಮಪಟ್ಟು ಬಟ್ಟೆಬರೆಗಳನ್ನೂ ಆರ್ಥಿಕ ಸಹಾಯವನ್ನೂ ಒದಗಿಸಿಕೊಟ್ಟಿತ್ತು. ಬರ ಬರುತ್ತಾ ನಮ್ಮ ಶಿಬಿರ ಆರ್ಥಿಕ ದಾರಿದ್ರ್ಯ ವನ್ನು ಹೋಗಲಾಡಿಸಿಕೊಂಡು ಶಾಂತ ವಾತಾವರಣವನ್ನು ಕಲ್ಪಿಸಿ

ಕೊಂಡಿತು. ರಚನಾತ್ಮಕ ಕಾರ್ಯಕ್ರಮಗಳಿಗೆ ಹೆಚ್ಚಿನ ಅವಕಾಶ ದೊರೆಯಿತು. ಅಂತೆಯೆ ನಮ್ಮ ಶಿಬಿರದ ಮುಂದಾಳುಗಳಾಗಿ ಯುವತಿಯರು ಮುಂದೆ ಬಂದರು. ತಮ್ಮಲ್ಲಿಯೇ ಒಂದು ಸಮಾಜ ಸ್ಥಾಪನೆ ಮಾಡಬೇಕೆಂದು ತೀರ್ಮಾನಿಸಿದರು. ಕಾರ್ಯಕ್ರಮ ಪಟ್ಟಿಯನ್ನು ತಯಾರಿಸಿದರು. ಇಪ್ಪತ್ತು ವರುಷದೊಳಗಿನ ಹೆಂಗಸರೆಲ್ಲಾ ಸ್ವಯಂ ಸೇವಕಿಯರಾಗಿ ಚುನಾಯಿತರಾದರು. ಮೊದಲನೆಯದಾಗಿ ಸರಿಯಾದ ಕಟ್ಟಡವಿರಬೇಕೆಂದು ತೀರ್ಮಾನಿಸಿದರು. ಅದಕ್ಕಾಗಿ ನಶಿಸಿ ಹೋಗಿದ್ದ ಶಿಬಿರದ ಕೆಲವು ಭಾಗಗಳನ್ನು ಪೂರ್ಣ ನಾಶಗೊಳಿಸಿ ಹೊಸ ಕಟ್ಟಡ ಕಟ್ಟಲು ಪ್ರಾರಂಭಿಸಿದರು. ಹೊಸ ರೀತಿಯಲ್ಲಿ ಅವುಗಳನ್ನು ರೂಪಾಂತರಗೊಳಿಸಿದರು. ಅಂತೂ ಹಳೆಯ ಮನೆಯಂತಿದ್ದ ಶಿಬಿರ ಹೊಸ ಬಂಗಲೆಯಾಗಿ ಮಾರ್ಪಟ್ಟಿತು.

ಹಿಂದೆ ದೆಹಲಿಯ ಜನ ಅಷ್ಟಾಗಿ ನಮ್ಮ ಶಿಬಿರದ ಬಳಿ ಬರುತ್ತಿರಲಿಲ್ಲ. ಆದರೆ ಈಚೆಗೆ ಜನರ ಓಡಾಟ ಬಹಳಹಾಗಿತ್ತು. ಅದರಲ್ಲೂ ಉತ್ತಮತರದ ಸೂಟು ಬೂಟುಗಳನ್ನು ಹಾಕಿಕೊಂಡ ಕಾಲೇಜು ಹುಡುಗರ ತಂಡ ತಂಡವೇ ಬರತೊಡಗಿತು. ಹೊರಡುವಾಗ ಮನಸ್ಸಿಲ್ಲದ ಮನಸ್ಸಿನಿಂದ ಹಿಂತಿರುಗುತ್ತಿದ್ದರು. ಪುನಃ ಕೆಲವು ವಿಷಯಗಳನ್ನು ಚರ್ಚಿಸಬೇಕಾಗಿದೆಯೆಂದು ಮಾರನೆಯ ದಿನವೂ ಹಾಜರಾಗುತ್ತಿದ್ದರು. ಇವರ ನಡೆವಳಿಕೆಯನ್ನು ಕಂಡು ನನಗೆ ಬಲವಾಗಿ ಸಂಶಯ ಮೂಡಿತು. ಒಂದು ದಿನ ಚನ್ನಾಗಿ ಪರೀಕ್ಷೆ ಮಾಡಿಬಿಡೋಣವೆಂದು ಮನಸ್ಸು ಮಾಡಿದೆ. ಬೆಳಗಿನ ಹೊತ್ತಿಗಿಂತಲೂ ಸಾಯಂಕಾಲವೇ ಸರಿಯಾದ ಪರೀಕ್ಷೆ ಸಮಯವೆಂದು ತೀರ್ಮಾನಿಸಿ ಪ್ರತಿದಿನ ಸಾಯಂಕಾಲ ಹೊಂಚು ಕಾಯಲಾರಂಭಿಸಿದೆ. ಬರುವವರಿಗೆ ನಾನು ಯಾರೆಂದು ತಿಳಿಯದ ಹಾಗೆ ವೇಷ ಬದಲಾಯಿಸಿಕೊಂಡೆ. ಸ್ವಲ್ಪ ದಿನಗಳ ನಂತರ ಸಾಯಂಕಾಲ ಬಂದವರಲ್ಲಿ ಕೆಲವರು ರಾತ್ರಿಯೂ ಅಲ್ಲೇ ಇರುವ ಹಾಗೆ ಏರ್ಪಾಡು ಮಾಡಿಕೊಂಡಿದ್ದರು. ಸಾಯಂಕಾಲ ಆರು ಗಂಟೆಯ ತನಕ ಏನೋ ಮಹತ್ವ ವಿಷಯಗಳನ್ನು ಚರ್ಚಿಸುವಂತೆ ನಟಿಸಿ ಸಂಜೆಗತ್ತಲು ಕವಿ

ದಂತೆಲ್ಲಾ ತಮ್ಮ ಮಾತುಗಳನ್ನೇ ಬದಲಾಯಿಸಿಬಿಡುತ್ತಿದ್ದರು. ಸಂಜೆ ಗತ್ತಲು ಯಾವ ರೀತಿ ಪೂರ್ಣ ಬೆಳಕನ್ನಾಗಲೀ ಪೂರ್ಣ ಅಂಧಕಾರವನ್ನಾಗಲೀ ಹೊರ ಸೂಸುವುದಿಲ್ಲವೋ ಹಾಗೆಯೆ ಅವರ ಮಾತುಗಳೂ ಅರ್ಥರಹಿತವಾಗಿ ವಿಟನ ಮಾತುಗಳನ್ನು ಹೋಲುತ್ತಿದ್ದವು. ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ತಮಗೆ ಬೇಕಾದ ಹುಡುಗಿಯರನ್ನು ಪುಸಲಾಯಿಸುತ್ತಿದ್ದರು. ಅದಕ್ಕೆ ತಕ್ಕಂತೆ ನಮ್ಮ ಶಿಬಿರದ ಹುಡುಗಿಯರು ಸ್ವಯಂಸೇವಕಿಯರೆಂಬ ಹೆಸರಿನಿಂದ ಅವರೊಡನೆ ಲೀಲಾಜಾಲವಾಗಿ ಹರಟೆ ಕೊಚ್ಚುತ್ತಿದ್ದರು. ಮಾತುಕತೆಗಳು ಮುಗಿದಮೇಲೆ ಇಬ್ಬರಿಗೂ ಮುಂದೇನು ಮಾಡಬೇಕೆಂದು ತೋರದಿದ್ದಾಗ ರಾತ್ರಿಯ ಕಪ್ಪು ಮತ್ತಷ್ಟು ಕಪ್ಪಾಗಿ ಕಾಣಿಸುತ್ತಿತ್ತು. ಅಂಥ ಅಂಧಕಾರದಲ್ಲಿ ನಡೆಯುತ್ತಿದ್ದ ಕೃತ್ಯಗಳನ್ನು ನೋಡಲು ನಾಚಿಕೆಯಾಗಿ ಚಂದ್ರನು ಕೂಡ ಮೋಡದ ಮರೆಯಲ್ಲಿ ಸೇರಿದ್ದನು! ಕಣ್ಣು ಮುಚ್ಚಿಕೊಂಡು ಬೆಕ್ಕು ಹಾಲು ಕುಡಿದರೆ ಮನೆಯವನೇನೂ ಕಣ್ಣು ಮುಚ್ಚಿರುವುದಿಲ್ಲ; ಹಾಗೆಯೆ ನಾನು ಕೂಡ ನಮ್ಮವರ ದುರ್ಬಲ ಮನಸ್ಸಿನ ದುಷ್ಟ ಕೂತೂಹಲವನ್ನು ನೋಡಲು ಆ ಮಧ್ಯರಾತ್ರಿಯಲ್ಲೂ ಕಣ್ಣು ತೆರೆದು ಕುಳಿತಿದ್ದೆ!

ರಾತ್ರಿ ಹತ್ತು ಗಂಟೆಯ ಸಮಯ. ಪ್ರಾರ್ಥನಾ ಮಂದಿರದಿಂದ ಗಡಿಯಾರ ಹತ್ತು ಬಡಿಯಿತು. ಪ್ರತಿಯೊಂದು ಹೊಡೆತದ ಶಬ್ದವೂ ನನಗೆ ಸ್ಪಷ್ಟವಾಗಿ ಕೇಳಿತು. ಆದರೆ ಆ ರಾತ್ರಿಯಲ್ಲಿ ಏಕಾಂತವಾಗಿ ನಮ್ಮ ಶಿಬಿರದ ಒಬ್ಬ ಯುವತಿ ಯಾವನೊ ಒಬ್ಬ ತರುಣನೊಂದಿಗೆ ಮಾತನಾಡುತ್ತಿದ್ದಳು. ಇಬ್ಬರ ಮುಖವೂ ನನಗೆ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಅದೂ ಅಲ್ಲದೆ ನಮ್ಮ ಶಿಬಿರದಲ್ಲಿದ್ದ ಸ್ತ್ರೀಯರೆಲ್ಲರ ಮುಖ ಪರಿಚಯವಿದ್ದರೂ ಅವರ ಹೆಸರುಗಳು ನನಗೆ ಜ್ಞಾಪಕವಿರಲಿಲ್ಲ. ಆದರೂ ಶಿಬಿರದ ವ್ಯವಸ್ಥಾಪಕರಲ್ಲಿ ಪ್ರಮುಖನಾದ ನಾನು ನಮ್ಮ ಶಿಬಿರದವರ ಚಟುವಟಿಕೆಗಳನ್ನು ಸೂಕ್ಷ್ಮ ದೃಷ್ಟಿಯಿಂದ ನೋಡಬೇಕಾದುದು ಕರ್ತವ್ಯವಾಗಿತ್ತು. ಕರ್ತವ್ಯಕ್ಕಿಂತಲೂ ಹೆಚ್ಚಿನ ರೀತಿಯಲ್ಲಿ ಮೊದಲಿನಿಂದಲೂ ಕಷ್ಟನಷ್ಟಗಳಿಗೆ ಗುರಿಯಾದ ನಾನು ಬೇಸತ್ತು ಎಲ್ಲ ವಿಷಯಗಳ ಬುಡ

ವನ್ನೂ ಕಿತ್ತೊಗೆಯುವ ಪವಾಡ ಪುರುಷನ ಮನೋಭಾವವನ್ನು ತಳೆದಿದ್ದೆ. ಅಂತೆಯೆ ಅಂದಿನ ಸನ್ನಿವೇಶ ನನಗೆ ಹೊಸ ವಿಷಯ ತಿಳಿಯಲು ಅವಕಾಶ ಕಲ್ಪಿಸಿತ್ತು.

ಆ ಎರಡು ವ್ಯಕ್ತಿಗಳು ತಮ್ಮನ್ನು ಯಾರೂ ಕಾಣಲಾರರೆಂಬ ಧೈರ್ಯದಿಂದ ಸ್ವಲ್ಪ ಗಟ್ಟಿಯಾಗಿಯೇ ಮಾತನಾಡುತ್ತಿದ್ದುವು. ಯುವತಿಯ ಮುಖ ಕೆಂಪೇರಿತ್ತು. ತಲೆ ಕೆದರಿತ್ತು. ಬಟ್ಟೆಯ ಕಡೆ ಅಷ್ಟಾಗಿ ಗಮನವಿದ್ದಂತೆ ಕಾಣಲಿಲ್ಲ. ಅಂತೆಯೆ ತರುಣನು ಕೂಡ ಏನೊ ಉಸಿರು ಕಟ್ಟಿದವನಂತೆ ಪಿಸು ಮಾತನಾಡುತ್ತಿದ್ದನು. ಅವನ ಮುಖ ಅಮೃತ ವನ್ನು ಕುಡಿದು ಕಳೆ ಹೊಂದಿದ ದೇವತೆಯ ಮುಖದಂತೆ ಕಂಗೊಳಿಸು ತಿತ್ತು. ಅವರಾಡುವ ಮಾತನ್ನು ಕೇಳುವಾಸೆಯಿಂದಲೋ ಎಂಬಂತೆ ತಣ್ಣನೆಯ ಗಾಳಿ ನಿಧಾನವಾಗಿ ಬೀಸುತಿತ್ತು. ತನ್ನೊಡನೆ ಹೂವಿನ ಪರಿಮಳವನ್ನೂ ಹೊತ್ತು ತಂದು ಅವರ ಮಾತುಗಳಿಗೆ ಸ್ಫೂರ್ತಿ ಕೊಡು ತಿತ್ತು. ತರುಣ ತಾನು ಸ್ವರ್ಗಲೋಕದಲ್ಲಿರುವಂತೆಯೇ ಭಾವಿಸಿದ್ದ. ಅಂತೆಯೆ ನಮ್ಮ ಶಿಬಿರದ ಯುವತಿಯೂ ಕೂಡ ತಾನು ಶಿಬಿರದ ಆವರಣದಲ್ಲಿರುವುದನ್ನೇ ಮರೆತು ಬಿಟ್ಟಿದ್ದಳು.

ಕಡೆಗೆ ತರುಣನು ಯುವತಿಯೊಡನೆ, "ಇನ್ನೆಷ್ಟು ದಿನ ಈ ರೀತಿಯ ಹೆದರಿಕೆಯ ಬಾಳನ್ನೇ ನಡೆಸುವೆ ? ಸುಖವಾಗಿ ನನ್ನೊಡನೆ ಬಾ. ನಿನಗಾಗಿ ನಾನು ಪಟ್ಟ ಕಷ್ಟ ದೇವರಿಗೇ ಗೊತ್ತು. ಈ ಶಿಬಿರದಲ್ಲೇ ನೀನು ಇರುವಿಯಾದರೆ ಕಡೆಗೊಂದು ದಿನ ಬೀದಿಯ ಪಾಲಾಗುವುದರಲ್ಲಿ ಸಂಶಯವಿಲ್ಲ. ಅದೂ ಅಲ್ಲದೆ ಈ ನಿನ್ನ ವಯಸ್ಸು, ಅದಕ್ಕೆ ತಕ್ಕ ಸುಂದರ ರೂಪು ನಿನಗೆ ಯಾವ ಕೆಲಸದಲ್ಲೂ ಶಾಶ್ವತ ಸ್ಥಾನ ಕಲ್ಪಿಸಿ ಕೊಡಲಾರದು. ನಮ್ಮ ದೇಶದಲ್ಲಿರುವವರಿಗೆ ಬೇರೆಯ ವಿಷಯಗಳಲ್ಲಿ ಆಸಕ್ತಿ ಕಡಿಮೆಯಿದ್ದರೂ ವಿಷಯಾಸಕ್ತಿ ಹೇರಳವಾಗಿದೆ. ಅಂಥಾದ್ದರಲ್ಲಿ ನಿರಾಶ್ರಿತಳೆಂಬ ಹೆಸರಿನಿಂದ ನಿನ್ನಂತಹ ಯುವತಿ ಸುಖ ಬಾಳುವೆ ನಡೆಸಲು ಸಾಧ್ಯವಾಗುವುದೇ ? ಮತ್ತೊಮ್ಮೆ ಯೋಚಿಸಿ ನೋಡು. ನಿನ್ನ

ಆಶಾಗೋಪುರಕ್ಕೆ ರೂಪು ಕೊಡಬೇಕಾದರೆ ನಿನ್ನಿಂದಲೇ ಸಾಧ್ಯ. ಇಷ್ಟರ ಮೇಲೆ ನಿನ್ನ ಮನಸ್ಸಿಗೆ ಬಂದಂತೆ ನೀನು ಕೆಟ್ಟ ದಾರಿ ಹಿಡಿಯುವುದಾದರೆ ನಾನು ಎಂದೆಂದಿಗೂ ಚಿರವಿರಹಿಯಾಗಿಯೇ ಕಾಲಕಳೆಯುತ್ತೇನೆ" ಎಂದನು.

ಅದಕ್ಕೆ ಯುವತಿ ಕಣ್ಣೀರು ಹಾಕಿದಳು. ಪ್ರತಿಯೊಂದು ಕಣ್ಣೀರಿನ ಹನಿಯೂ ಅವಳಿಗೆ ಹಿಂದಿನ ಯಾವುದೊ ನೆನಪು ಕೊಡುತ್ತಿತ್ತು. ಮುಖ ಕಳೆಗುಂದಿತು. ತಟಕ್ಕನೆ ತಪಸ್ವಿನಿಯಂತೆ ಎದ್ದು ಕುಳಿತು ಯೋಚನೆ ಮಾಡತೊಡಗಿದಳು. ಮತ್ತೆ ಎಚ್ಚರವಾದಾಗ ಯಾವ ನಿಲುವೂ ಅವಳಿಗೆ ಸಿಕ್ಕಲಿಲ್ಲವೆಂಬ ಭಾವ ಅವಳ ಕಣ್ಣುಗಳಿಂದಲೇ ವೇದ್ಯವಾಗಿತ್ತು. ಮುಖ ದೈನ್ಯತೆಯನ್ನು ಹೊಂದಿತು. ಆಗಿನ ಅವಳ ಸ್ಥಿತಿ ಅರ್ಧ ಬೆಳಕು ಅರ್ಧ ಕತ್ತಲನ್ನು ಕಂಡಂತಿತ್ತು. ಒಮ್ಮೆ ಆಶೆ ತಲೆದೋರಿದರೆ ಹಿಂದಿನ ನೆನಪು ಮತ್ತೊಮ್ಮೆ ಮರುಕಳಿಸಿ ನಿರಾಶಳಾಗುತ್ತಿದ್ದಳು. ಮತ್ತೊಮ್ಮೆ ಯಾರ ಗೋಜಿಗೂ ಹೋಗಬಾರದೆಂದು ಮನಸ್ಸು ಮಾಡಿದರೆ ಪರಿಸ್ಥಿತಿ ಅದಕ್ಕೆ ಎಡೆಗೊಡುತ್ತಿರಲಿಲ್ಲ. ಅದೂ ಅಲ್ಲದೆ ತಲೆಯಲ್ಲಿ ವಿರುದ್ಧ ಭಾವಗಳ ಹೊಡೆದಾಟ ನಡೆಯುತ್ತಿದ್ದರೂ ದೇಹದ ರೂಪು ಲಾವಣ್ಯ ಕುಗ್ಗದೆ ಮತ್ತಷ್ಟು ಕಾಂತಿಪೂರಿತವಾಗುತ್ತಿತ್ತು. ಸ್ವಾಭಾವಿಕ ಬೆಳವಣಿಗೆಗೆ ಯಾವ ತಡೆಯೂ ಇರಲಿಲ್ಲ.

ಪಕ್ಕದಲ್ಲಿದ್ದ ತರುಣನನ್ನು ನೋಡಿ, "ನೀನು ಹೇಳಿದ ಮಾತು ನಿನ್ನಂಥವರ ಬಾಯಿಂದ ಬರುವುದು ಸಹಜ. ಹಿಂದೆಯೂ ಇದೇ ರೀತಿ ಎಷ್ಟೋ ಜನ ನನಗೆ ಉಪದೇಶಿಸಿದ್ದರು. ನಿಜ; ಈ ಹೇಸಿಗೆಯ ಬಾಳುವೆ ನನಗೂ ಬೇಸರವಾಗಿದೆ. ಮೈ ಮನಸ್ಸೆರಡನ್ನೂ ಕೆಡಿಸಿಕೊಂಡು ಕ್ಷಣ ಕ್ಷಣಕ್ಕೂ ಏನಾಗುವುದೋ ಎಂಬ ಭಯ ಭೀತಿಯಿಂದ ಜೀವನ ಸಾಗಿಸಲು ಯಾರು ತಾನೇ ಬಯಸಿಯಾರು? ಆದರೆ ಹಿಂದೆ ನನಗಾದ ಅನುಭವಗಳನ್ನು ನೆನೆಸಿಕೊಂಡರೆ ಯಾರನ್ನೂ ನಂಬಲೂ ನನ್ನ ಮನಸ್ಸು ಹಿಂಜರಿಯುತ್ತಿದೆ. ಇಂದು 'ಬಾ' ಎಂದು ಸಡಗರದಿಂದ ಕೂಗಿದವರು ನಾಳೆ

ಅಷ್ಟೇ ಆತ್ಸಾರದಿಂದ ಹೋಗೆನ್ನಬಲ್ಲರು. ನೀನು ಆ ರೀತಿಯ ಮನುಷ್ಯ ನೆಂದು ಹೇಳುತ್ತಿಲ್ಲ. ಆದರೂ ನಾಳಿನ ಯೋಚನೆಯನ್ನು ಮಾಡಬೇಕಾ ದುದು ಅತ್ಯಗತ್ಯ. ಆದಕ್ಕಾಗಿ ನನ್ನ ಕಥೆಯನ್ನು ನಿನ್ನ ಬಳಿ ಹೇಳು ತ್ತೇನೆ.

ಈಗಿರುವ ಶಿಬಿರ ನನ್ನ ಮೂರನೆಯ ವಾಸಸ್ಥಾನ. ಇನ್ನು ನಾಲ್ಕ ನೆಯ ಸ್ಥಾನವನ್ನು ಹುಡಿಕಿಕೊಂಡು ಹೋದರೆ ನನ್ನ ವ್ಯಕ್ತಿತ್ವ ಪೂರ್ಣ ನಾಶವಾದೀತು. ಆ ಪರಿಸ್ಥಿತಿ ಬರದಿರಲೆಂದೇ ಒದ್ದಾಡುತ್ತಿರುವೆನು. ಒದ್ದಾಟಕ್ಕೆ ತಕ್ಕ ಪ್ರತಿಫಲ ದೊರೆತಿಲ್ಲ. ನಾನಿದ್ದ ಮೊದಲನೆಯ ಶಿಬಿರ ನನ್ನನ್ನು ಇಂದೂ ಹೀಯಾಳಿಸುತ್ತಿದೆ. ನಾನು ತಪ್ಪಿತಸ್ಥಳಲ್ಲದಿದ್ದರೂ ಅವರ ಕಣ್ಣಿನಲ್ಲಿ ಮಹಾ ಅಪರಾಧಿನಿಯಾಗಿದ್ದೇನೆ. ಅವರಿಗೆ ತಮ್ಮ ಆಶಾಪ್ರಪಂಚವೇ ನಿಜ ಪ್ರಪಂಚವಾಗಿ ಉಳಿದುದೆಲ್ಲವೂ ಮಿಥ್ಯವಾಗಿ ತೋರುತ್ತಿದೆ.

ನಾನು ದೆಹಲಿಗೆ ಬಂದೊಡನೆ ಆ ಶಿಬಿರ ನನ್ನನ್ನು ಸ್ವಾಗತಿಸಿತು. ಈಗಲೂ ಅದು ಬೇರೆಡೆಯಲ್ಲಿದೆ. ಆದರೂ ಅದರ ಹೆಸರನ್ನು ನಾ ಹೇಳ ಲಾರೆ. ಅಲ್ಲಿಯ ವ್ಯವಸ್ಥಾಪಕ ಇಂದಿಗೂ ಒಬ್ಬ ಗಣ್ಯ ವ್ಯಕ್ತಿಯಾಗಿ ದ್ದಾನೆ ನಾಳೆಯ ದಿನ ದೂರದಿಂದಲೇ ನಮಗೆ ಕೇಡು ಮಾಡಲೂ ಹೇಸುವುದಿಲ್ಲ. ಆದರಿಂದ ನಮಗೆ ತೊಂದರೆಯಾಗುವುದರ ಜೊತೆಗೆ ಇನ್ನೂ ಆತನ ಶಿಬಿರದಲ್ಲಿ ನರಳಾಡುತ್ತಿರುವ ಸ್ತ್ರೀಯರಿಗೆ ಮತ್ತಷ್ಟು ಕೆಡಕಾಗುವುದು. ನಾನಾದರೂ ಹೇಗೊ ಅವನ ಸಂಕಲೆಗಳನ್ನು ಕಿತ್ತೊಗೆದು ಬಂದೆ. ಮುಂದೆ ಇತರರಿಗೆ ಎಲ್ಲಿಗೂ ಹೋಗಲಾರದಂತೆ ದಿಗ್ಬಂಧನವನ್ನೇ ಹಾಕಿಬಿಟ್ಟಾನು. ಅದಿರಲಿ; ನನಗಿಂತ ಕಷ್ಟಪಡುತ್ತಿ ರುವ ಮಹಿಳೆಯರು ಇದ್ದಾರೆಂಬುದು ನನಗೆ ತಿಳಿದಿದೆ. ಆದರೂ ಗಂಡಸರ ದೌರ್ಜನ್ಯ ಸಾಕಷ್ಟು ನನಗೆ ಪೆಟ್ಟುಕೊಟ್ಟಿದೆ.

ಬಂದಾಗಿನಿಂದ ಅಲ್ಲಿಯ ವ್ಯವಸ್ಥಾಪಕ ನನ್ನ ಮೇಲೆ ದೃಷ್ಟಿ ಟ್ಟಿದ್ದ. ಎಲ್ಲರಿಗಿಂತಲೂ ನನ್ನನ್ನೇ ಮೊದಲು ವಿಚಾರಿಸಿಕೊಳ್ಳು

ತ್ತಿದ್ದನು. ಆಗ ನಿಜವಾಗಿಯೂ ನಾನು ನಿರ್ಭಾಗ್ಯಳಾಗಿದ್ದರೂ ಭಾಗ್ಯಶಾಲಿನಿ ಯಾಗಿದ್ದೆ. ಇತರರು ತಮ್ಮ ಭಾಗ್ಯೋದಯಕ್ಕೆ ನನ್ನನ್ನು ಬೇಡುವಂತಾ ಯಿತು. ಸ್ವಲ್ಪ ದಿನಗಳಲ್ಲೇ ನಾನು ಶಿಬಿರದ ವ್ಯವಸ್ಥಾಪಕನಷ್ಟೇ ಗೌರವ ಸಂಪಾದಿಸಿ ಬಿಟ್ಟೆ. ಆದರೆ ಅದರ ಹಿಂದೆ ಅಡಗಿದ್ದ ಹಾವು ನನಗೆ ಕಾಣಿ ಸಲೇ ಇಲ್ಲ. ಅದು ಹೊರಬಂದದ್ದು ಒಂದು ದಿನ ಆಗ ನಾನು ಅದನ್ನಡಗಿ ಸಲು ಅಸಮರ್ಥಳಾಗಿದ್ದೆ.

ಒಂದು ದಿನ ಭಾವಿಯ ಬಳಿ ನಾನು ನೀರು ಸೇದಿ ಸುತ್ತಲಿನ ಹೂವಿನ ಗಿಡಕ್ಕೆ ನೀರೆರೆಯುತ್ತಿದ್ದೆ. ಆಗ ನನ್ನ ಹಿಂದೆ ಇದ್ದಕ್ಕಿದ್ದಂತೆ ಒಂದು ನೆರಳು ಕಂಡಿತು. ಗಾಳಿಗೆ ಸಿಲುಕಿ ಗಿಡಗಳು ತೂಗಾಡುತ್ತಿದ್ದುದ ರಿಂದ ಅದರ ನೆರಳೂ ಕುಣಿದಾಡುತ್ತಿತ್ತು. ಆದರೆ ನಾನು ಕಂಡ ನೆರಳು ಅಲ್ಲಾಡದೆ ನಿಂತಿತ್ತು. ಭಯವಾಗಿ ಹಿಂತಿರುಗಿ ನೋಡಿದೆ. ನಮ್ಮ ಶಿಬಿರದ ವ್ಯವಸ್ಥಾಪಕ ಘೊಳ್ಳೆಂದು ನಕ್ಕ. ನನ್ನ ಜಡೆ ಹಿಡಿದೆಳೆದು "ಈಗೇನು ಮಾಡುವೆ" ಎಂದು ಅರ್ಭಟಿಸಿದ. ನನ್ನ ಮೈ ನಡುಗಿತು. ತಕ್ಷಣ ಯಾವ ಯೋಚನೆಯನ್ನೂ ಮಾಡದೆ ಅವನ ಕೆನ್ನೆಗೆ ಬಿಗಿದು ಬಿಟ್ಟೆ. ಮೊದಲೇ ಕುಡಿದವನಂತಿದ್ದವನು ನನಗೂ ಒಂದೇಸಮನೆ ಬಾರಿಸಿ ಬಿಟ್ಟ. ಪಕ್ಕದ ಗಿಡದ ಮೇಲೆ ಏಟು ಸಹಿಸಲಾರದೆ ಬಿದ್ದುಬಿಟ್ಟೆ. ಹಾಗೆ ಎಷ್ಟು ಹೊತ್ತು ಬಿದ್ದಿದ್ದೆನೋ ಹೇಳಲಾರೆ. ಅಂತೂ ನನಗೆ ಎಚ್ಚರ ಬಂದಾಗ ಸುತ್ತ ಐದು ಜನ ನಿಂತಿದ್ದರು. ನನ್ನನ್ನು ನೋಡಿ ಹಾಸ್ಯ ಮಾಡಿದರು. ಮೊದಲೇ ನಿಶ್ಶಕ್ತಳಾಗಿದ್ದ ನಾನು ಮೇಲೆದ್ದು ಭಾವಿಯ ಹತ್ತಿರ ಬಂದು ನಿಂತೆ. ಭಾವಿಯಲ್ಲಿ ಬಿದ್ದು ಪ್ರಾಣ ಕಳೆದುಕೊಳ್ಳಲು ಹವಣಿಸಿದೆ. ಭಾವಿಯಲ್ಲಿ ಬಗ್ಗಿ ನೋಡಿದೆ. ಇನ್ನೊಂದು ಕ್ಷಣ ನನ್ನನ್ನು ಯಾರೂ ಹಿಂದೆಳೆಯದಿದ್ದರೆ ನಾನು ಸುಖವಾಗಿ ಪ್ರಾಣ ಬಿಟ್ಟುಬಿಡುತ್ತಿದ್ದೆ. ಆದರೆ ಆ ಕ್ಷಣ ನನ್ನ ಹಿಂದಿದ್ದ ಐವರು ಯುವಕರೂ ನನ್ನ ರಟ್ಟೆಯನ್ನು ಹಿಡಿದೆಳೆದರು. ಆಗ ನನ್ನ ಸೆರಗನ್ನೂ ಭಾವಿಯ ಹಗ್ಗ ಎಳೆಯುವ ಹಾಗೆ ಸುರುಳಿ ಸುತ್ತಿದರು. ಆ ಸ್ಥಿತಿಯನ್ನು ವರ್ಣಿಸಲು ಎಂತಹ ಹೆಂಗಸಾ ದರೂ ಹಿಮ್ಮೆಟ್ಟುವಳು. ಅಂತೆಯೆ ಆಗ ನನ್ನನ್ನು ನಾನೇ ನೋಡಿ

ಕೊಳ್ಳಲು ಹಿಂಜರಿದೆ. ಅಷ್ಟರಲ್ಲಿ ನನಗಿಂತ ಸ್ವಲ್ಪ ದೂರದಲ್ಲೇ ಅವಿತು ನಿಂತಿದ್ದ ವ್ಯವಸ್ಥಾಪಕ ಹೊರಕ್ಕೆ ಬಂದು ನನ್ನ ಫೋಟೋ ತೆಗೆದುಕೊಂಡ.

ಮಾರನೆಯ ದಿನ ನಮ್ಮ ಶಿಬಿರದ ಮೇಲಧಿಕಾರಿಗಳಿಗೆ ಆ ಫೋಟೋ ಅರ್ಪಿಸಲ್ಪಟ್ಟಿತು. ಅವರು ಅದನ್ನು ನೋಡಿ, "ಶಿಬಿರದ ಹೆಂಗಸರು ಇಷ್ಟು ಕೆಟ್ಟಿದ್ದಾರೆಂದು ತಿಳಿದಿರಲಿಲ್ಲ ಇಲ್ಲಿ ನೋಡಿ, ಅಷ್ಟು ಜನರೆದುರಿಗೆ ಇವಳು ಎಷ್ಟು ಮಾನ ಮರ್ಯಾದೆ ಬಿಟ್ಟು ನಿಂತಿದ್ದಾಳೆ! ನಿಜವಾಗಿಯೂ ಇಂತಹವಳಿಂದ ನಮ್ಮ ಶಿಬಿರ ಹೇಗೆ ಮುಂದೆ ಬಂದೀತು? ನಾಳೆಯೆ ಇವಳನ್ನು ಶಿಬಿರದಿಂದ ತೆಗೆದುಹಾಕಬೇಕು. ಬೀದಿಯವರ ಮುಂದೆ ನಾಟ್ಯವಾಡಲು ಸರಿಯಾದ ಹೊಸಲು ದಾಟಿದ ಹೆಣ್ಣು ಇವಳು. ಇಂತಹವರನ್ನು ನಾವು ಇಟ್ಟುಕೊಂಡು ಸನ್ಮಾರ್ಗ ಬೋಧಿಸಲು ಸಾಧ್ಯವೇ? ಈ ರೀತಿಯವರನ್ನು ಕಂಡುಹಿಡಿದು ನೀವು ಬಹಳ ಸೇವೆ ಸಲ್ಲಿಸಿದ್ದೀರಿ. ಪಾಪ; ಮಾನಕ್ಕಾಗಿ ಹೊಡೆದಾಡುವ ನೀವು ಈ ಪರಿಸ್ಥಿತಿ ನೋಡಬೇಕಾಯಿತು. ಮನಸ್ಸಿಗೆ ಬೇಸರ ಪಟ್ಟುಕೊಳ್ಳಬೇಡಿ. ಪ್ರಪಂಚ ವಿಚಿತ್ರವಾಗಿದೆ" ಎಂದು ಅಧಿಕಾರಿಗಳು ವ್ಯವಸ್ಥಾಪಕರನ್ನೇ ಹೊಗಳಿ ಸಂತೈಸಿದರು.

ಅಂದೇ ಶಿಬಿರದಿಂದ ಹೊರಬಂದೆ. ವ್ಯವಸ್ಥಾಪಕ ತಿಳಿದಿದ್ದಂತೆ ಬೀದಿಯ ಹೆಣ್ಣೇನೂ ಆಗಲಿಲ್ಲ. ಬೀದಿಯ ಹೆಣ್ಣಾಗಲೆಂದೇ ವ್ಯವಸ್ಥಾಪಕ ಆ ರೀತಿ ಮಾಡಿದ್ದು. ತನ್ನ ಸೇಡಿಗೆ ತಕ್ಕ ಪ್ರತಿಫಲ ತಾನಾಗಿಯೆ ಆಗುವುದೆಂದು ಹವಣಿಸಿದ್ದ. ನಿಸ್ಸಹಾಯಳಾಗಿ ಮತ್ತೆ ತನ್ನ ಬಳಿಗೆ ಬಂದೇ ಬರುವಳೆಂದು ನಂಬಿದ್ದ. ಆಗ ಯಾರಿಗೂ ತಿಳಿಯದಂತೆ ನನ್ನನ್ನು ಯಾವ ರೀತಿಯಲ್ಲಿ ಬೇಕಾದರೂ ಉಪಯೋಗಿಸಿಕೊಳ್ಳಬಹುದೆಂದು ಕನಸು ಕಂಡಿದ್ದ. ಆದರೆ ಅವನ ಕನಸು ನನಸಾಗಲಿಲ್ಲ. ನಾನು ಶಿಬಿರದಿಂದ ಹೊರಬಂದೊಡನೆಯೆ ಮತ್ತೊಂದು ಖಾಸಗಿ ಶಿಬಿರ ನನ್ನನ್ನು ಸ್ವಾಗತಿಸಿತು. ಇರುವುದಕ್ಕೆ ಒಂದು ನೆಲೆ ಸಿಕ್ಕಿತಲ್ಲಾ ಎಂದು ತಕ್ಷಣ ಸೇರಿಕೊಂಡೆ.

ಅಲ್ಲಿಯೂ ಕೂಡ ಒಂದು ವರ್ಷವಿದ್ದೆ. ಅಲ್ಲಿಯ ವಾತಾವರಣ ಹಿಂದಿನದಕ್ಕಿಂತಲೂ ಹೊಲಸಾಗಿತ್ತು. ಇಲ್ಲಿ ಗಂಡಸಿನ ಪ್ರಭಾವಕ್ಕಿಂತಲೂ

ಹೆಂಗಸಿನ ವ್ಯವಹಾರವೇ ಜಾಸ್ತಿಯಾಗಿತ್ತು. ಬಂದು ಬಂದವರನ್ನು ತಮ್ಮದೇ ಆದ ಮಾಯಾಜಾಲದಲ್ಲಿ ಸಿಲುಕಿಸಿಕೊಂಡು ಅವರ ವ್ಯಕ್ತಿತ್ವ ವನ್ನು ಸ್ವಲ್ಪ ಸ್ವಲ್ಪವಾಗಿ ಇಳಿಮುಖ ಮಾಡತೊಡಗಿದ್ದರು. ಒಳಕ್ಕೆ ಮಿಸೆ ತಿರುವಿ ಬಂದ ಜನ ಹೊರಕ್ಕೆ ಬಂದಾಗ ತಮ್ಮ ಮಿಸೆಯನ್ನು ತಾವೇ ನೋಡಲು ನಾಚುತ್ತಿದ್ದರು. ಜೋಬಿನಲ್ಲಿ ಹಣದ ಥೈಲಿ ತಂದ ವನು ಹೊರಕ್ಕೆ ಬಂದಾಗ ಒಂದು ಬಿಡಿಗಾಸಿಗೆ ಜೋಬನ್ನೇ ತಿರುಗ ಮುರುಗ ಮಾಡುತ್ತಿದ್ದನು. ಹಾಸ್ಟಲಿನ ಹುಡುಗರು ಕಾಲೇಜಿಗೆ ಸಲ್ಲ ಬೇಕಾದ ಹಣವನ್ನು ಮೊಟಕು ಮಾಡಿ ಅದನ್ನು ನಮ್ಮ ಶಿಬಿರದ ಹೆಂಗಸ ರಿಗೆ ಅರ್ಪಿಸುತ್ತಿದ್ದರು.

ಒಮ್ಮೆ ಒಬ್ಬ ಹಾಸ್ಟಲಿನವನು ಅಷ್ಟಾಗಿ ವ್ಯವಹಾರ ತಿಳಿಯದ ನಮ್ಮ ಶಿಬಿರದ ಹೆಂಗಸೊಬ್ಬಳನ್ನು ಹಾಸ್ಟಲಿಗೇ ಕರೆದುಕೊಂಡು ಹೋಗಿ ದ್ದನಂತೆ. ಇದನ್ನು ಕಂಡ ಹಾಸ್ಟಲಿನ ವಾರ್ಡನ್‌ರವರು ಕೋಪಗೊಂಡು ಅಪರಾಧಿಗೆ ಹದಿನೈದು ದಿನ ರಾತ್ರಿಯ ಊಟ ಹಾಕುವುದಿಲ್ಲವೆಂದು ತೀರ್ಮಾನಿಸಿಬಿಟ್ಟರು. ಆದರೆ ಅಪರಾಧಿ ಮಾರನೆಯ ದಿನ ಶಿಬಿರಕ್ಕೆ ಬಂದಾಗ ತನ್ನ ಪ್ರೇಯಸಿಯನ್ನು ಕಂಡು, "ನೋಡಿದೆಯಾ ನೀನು ನನಗೆ ಎಷ್ಟು ಉಪಕಾರ ಮಾಡಿದೆ! ಇನ್ನು ಮೇಲೆ ರಾತ್ರಿಯ ವೇಳೆ ಹಸಿದು ಬಂದವನನ್ನು ಶಿಬಿರದಿಂದ ಹೊರಕ್ಕೆ ಹೇಗೆ ಕಳಿಸುವೆ? ಅತ್ತ ಹಾಸ್ಟಲಿನಲ್ಲಿ ಜಾಗವಿಲ್ಲದೆ ಬಂದವನಿಗೆ ಇಲ್ಲಿ ಸ್ವಲ್ಪ ಜಾಗವನ್ನೂ ಕೊಡಲಾರೆಯಾ?" ಎಂದು ನಕ್ಕು ಅವಳ ಭುಜವನ್ನೊಮ್ಮೆ ನೇವರಿಸಿದ. ಇಂತಹ ಪ್ರಸಂಗಗಳು ದಿನವೂ ನಡೆಯುತ್ತಿದ್ದವು.

ಶಿಬಿರದ ಮಾಡಿಯ ಮೆಟ್ಟಲು ಯಾವಾಗಲೂ ಶಬ್ದ ಮಾಡುತ್ತಲೇ ಇತ್ತು. ಅದರ ಮೇಲೆ ಎಲ್ಲ ತರಹದ ಗಂಡಸರೂ ಪಾದಧೂಳಿ ಹಾಕಿದ್ದರು. ಮೆಟ್ಟಲು ಹತ್ತುತ್ತಿದ್ದವರ ಮುಖ ಆಕಾಶವನ್ನೇರುವ ದೇವತೆಗಳ ಮುಖ ಭಾವದಂತಿತ್ತು. ಮೆಟ್ಟಲು ಇಳಿಯುತ್ತಿದ್ದವರು "ಇಳಿಯಲೋ ಬೇಡವೋ" ಎನ್ನುವ ಭಾವ ತಳೆದು ಅರ್ಧದಲ್ಲೇ ನಿಂತು ನೇತಾಡುವ ತ್ರಿಶಂಕುವಿನಂತೆ ಕಾಣುತ್ತಿದ್ದರು.

ಶಿಬಿರದ ಮನೆ ಅಷ್ಟೇನೂ ವಿಶಾಲವಾಗಿರಲಿಲ್ಲ. ಆ ಇಕ್ಕಟ್ಟಿ ನಲ್ಲಿ ಮುಚ್ಚು ಮರೆ ಇರಲಿಲ್ಲ. ಎಲ್ಲರೂ ಸಾಮೂಹಿಕವಾಗಿ ಒಂದೇ ದೋಣಿಯಲ್ಲಿ ತೇಲುತ್ತಿದ್ದರು. ಅವರ ಹಗುರು ಮನಸ್ಸನ್ನು ಕಂಡು ನನಗೆ ಎಷ್ಟೋ ಬಾರಿ ದುಃಖವಾಗುತ್ತಿತ್ತು. ಅದೂ ಅಲ್ಲದೆ ಅವರೆಲ್ಲ ಚಿಕ್ಕ ವಯಸ್ಸಿನ ಹುಡುಗಿಯರು. ಚಿಕ್ಕ ವಯಸ್ಸಿನ ಹುಡುಗರು ಹಗುರ ವಾಗಿ ವರ್ತಿಸಬಹುದು. ಆದರೆ ಅದೇ ವಯಸ್ಸಿನ ಹೆಂಗಸರು ಆ ರೀತಿ ವರ್ತಿಸಿದರೆ ಮುಂದಿನ ಜೀವನವೇ ಹಾಳಾಗುವ ಸಂಭವವುಂಟು. ಕೆಟ್ಟಿ ದ್ದನ್ನು ಮುಚ್ಚಿಡುವ ಶಕ್ತಿ ಗಂಡಸಿಗೆ ದೈವದತ್ತವಾಗಿದೆ. ಹೆಂಗಸಿಗೆ ಅದು ಶಾಪರೂಪವಾಗಿದೆ. ಶಾಪಕ್ಕೆ ತಕ್ಕ ಮೋಕ್ಷಮಾರ್ಗ ಇರುವುದಿಲ್ಲ. ಅಂತೆಯೆ ಇಹಜೀವನದಲ್ಲೂ ಪಾಪಕೂಪದಲ್ಲಿ ನರಳಿ ಮುಂದೆಯೂ ಏನಾ ಗುವುದೋ ಎಂಬ ಭಯದಿಂದ ಒಂದು ದಿನ ಕಣ್ಣು ಮುಚ್ಚಬೇಕು. ಆಗಲೂ ಜನ ತಮ್ಮ ಟೀಕೆಯನ್ನು ಮುಂದುವರಿಸುತ್ತಲೇ ಇರುತ್ತಾರೆ. ಅವರ ಬಾಯಿಗೆ ಬೀಗ ಹಾಕಲು ಯಾರಿಂದಲೂ ಸಾಧ್ಯವಿಲ್ಲ. ನಮ್ಮಂತ ಹವರು ಸುಖದಲ್ಲಿದ್ದರೆ ಅದಕ್ಕೇ ಒಂದು ಕಥೆಯನ್ನು ಕಟ್ಟುತ್ತಾರೆ; ಕಷ್ಟ ದಲ್ಲಿದ್ದರೆ ಮತ್ತೊಂದು ಕಥೆ ಲಂಗು ಲಗಾಮಿಲ್ಲದೆ ಬೆಳೆದುಬಿಡುತ್ತದೆ. ಕಾಯಿಲೆ ಬಂದರೆ ಅದು ಸ್ವಾಭಾವಿಕವಲ್ಲವೆಂದೂ, ಏನೋ ಅತ್ಯಾಚಾರ ನಡೆದಿದೆ ಎಂದು ನಮ್ಮ ನಡತೆಗೆ ಕಪ್ಪು ಬಣ್ಣ ಬಳಿಯುತ್ತಾರೆ; ಆರೋಗ್ಯ ವಾಗಿ ನೋಡಲು ಚೆನ್ನಾಗಿ ಕಂಡರೆ "ಅವನ ತರಪೇತೇ ಇರಬೇಕು" ಎಂದು ನಮ್ಮ ಬಳಿ ಸುಳಿದಾಡುವ ಒಬ್ಬ ವಿಷಯಲಂಪಟನನ್ನು ನೆಪ ಮಾಡಿ ಹೇಳುತ್ತಾರೆ; ಆದರೆ ಆ ಮಾತು ಆಡುವವರೂ ಅದೇ ಗುಂಪಿಗೆ ಸೇರಿರುತ್ತಾರೆ. ಇದು ಗಂಡಸಿನ ಪ್ರಪಂಚ ತನಗೆ ತಕ್ಕಂತೆ ತಾನು ನಡೆದುಕೊಂಡು ದುಷ್ಕೃತ್ಯಗಳನ್ನು ಅಲ್ಲಲ್ಲೆ ಕಾಣದಂತೆ ನೆಲಸಮ ಮಾಡುವ ಯೋಗ್ಯತೆ ಅವನಲ್ಲಿದೆ. ನೆಲಸಮವಾದ ದುಷ್ಕೃತ್ಯಗಳ ಮೇಲೆ ಜೋರಾದ ಬಂಗಲೆ ಕಟ್ಟುವ ಖ್ಯಾತಿಯೂ ಗಳಿಸಿಕೊಂಡಿದ್ದಾನೆ. ಆಮೇಲೆ ಸಮಾಜದ ಗೌರವ ವ್ಯಕ್ತಿಯಾಗಿಯೂ ಆತ ಬೆಳಗಬಲ್ಲ.

ಇನ್ನು ಕೆಲವರು ಸಾಹಿತಿಗಳೆಂಬ ಸೋಗು ಹಾಕಿಕೊಂಡು ಸಮಾಜ ವನ್ನು ಪ್ರತಿಬಿಂಬಿಸುತ್ತೇವೆಂದು ನಮ್ಮ ಬಳಿ ಬರುತ್ತಾರೆ ಆದರೆ ಅವರು

ನಮ್ಮಲ್ಲಿ ನೋಡುವುದು ನಾವು ಇಷ್ಟವಿಲ್ಲದೆ ಹೂಡಿಕೊಂಡ ಸಿಂಗಾರವನ್ನೇ ಹೊರತು ಮೂಲ ಸಮಸ್ಯೆಯನ್ನಲ್ಲ. ಸಮಾಜದ ರೋಗ ರುಜಿನಗಳನ್ನು ನಿವಾರಿಸುತ್ತೇವೆಂದು ಹೇಳುವವರು ತಾವಾಗಿಯೇ ದಿನದಿನವೂ ವಿಚಿತ್ರತರವಾದ ಕಾಯಿಲೆಗಳನ್ನು ಹಚ್ಚಿಸಿಕೊಳ್ಳುವರು. ಸಮತಾವಾದಿಗಳಂತೆ ತಮ್ಮ ಅನಿಷ್ಟವನ್ನು ನಮ್ಮಂತಹ ನಿರ್ಭಾಗ್ಯರಿಗೆ ಸಮವಾಗಿ ಹಂಚಿಬಿಡುವರು. ಹಿಂದೆ ಒಬ್ಬ ಸಾಹಿತಿಯೆನಿಸಿಕೊಂಡವನು ಇಲ್ಲಿಗೆ ಬಂದಿದ್ದ. ಮಧ್ಯಮ ವಯಸ್ಸಿನವನಾದರೂ ಚಿಕ್ಕ ಹುಡುಗನಂತೆ ಕಾಣುತ್ತಿದ್ದ. ತಲೆ ಕೆದರಿತ್ತು. ಭಾವನೆಗಳು ಸುಳಿದಂತೆಲ್ಲಾ ಅವನ ಮುಖ ಕಪ್ಪಾಗಿ, ಕೆಂಪಾಗಿ, ನೀಲಿಯಾಗಿ ತಿರುಗುತ್ತಿತ್ತು. ನಿರಾಶ್ರಿತ ಸಮಸ್ಯೆಗೆ ತಕ್ಕ ಉತ್ತರ ದೊರೆಕಿಸಿಕೊಳ್ಳಬೇಕೆಂದು ಪಣ ತೊಟ್ಟಿದ್ದ. ಬಂದ ಕೆಲವು ದಿನಗಳಲ್ಲೇ ಆರೋಗ್ಯ ಕೆಡಿಸಿಕೊಂಡು ಹಾಸಿಗೆ ಹಿಡಿದ. ಸ್ವಲ್ಪ ಸುಧಾರಿಸಿದ ಮೇಲೆ ಪುಸ್ತಕ ಬರೆಯಲು ಪ್ರಾರಂಭಿಸಿದ. ನಮ್ಮನ್ನು ವರ್ಣಿಸಲು ಬಹಳ ಪ್ರಯಾಸ ಪಟ್ಟ. ಮಧ್ಯೆ ಮಧ್ಯೆ ಬರೆಯುವುದನ್ನು ಬಿಟ್ಟು ಶಿಬಿರದ ಹುಡುಗಿಯರೊಡನೆ ಜೂಜಾಟವಾಡಲಾರಂಭಿಸಿಬಿಟ್ಟ. ತಾನು ಮಾಡುತ್ತಿದ್ದುದನ್ನೂ ತನ್ನ ಮನದಾಸೆಗಳನ್ನೂ ಪ್ರತಿಬಿಂಬಿಸಲು ಅವನ ಲೇಖನಿಗೆ ಕಷ್ಟವಾಯಿತು. ಬರೆಯುತ್ತಿದ್ದಂತೆಯೇ ಲೇಖನಿ ಕೆಳಗೆ ಬಿದ್ದುಹೋಯಿತು; ತನ್ನ ದೇಹವನ್ನು ತಾನೆ ಹಿಡಿಯಲು ಕಷ್ಟವಾಯಿತು. ಶಿಬಿರದ ಹೊರಗಡೆ ಸೊಗಸಾದ "ಟೈಗರ್ ನಾಯಿ" ಮಲಗಿತ್ತು. ಅದರ ಮೇಲೆಯೆ ಬಿದ್ದು ಹೊರಳಾಡಿದ. ತುಂಬ ಚೂಟಿಗೆ ಹೆಸರಾದ ನಾಯಿ ಅವನನ್ನು ಛಳಕ್ಕನೆ ಹಿಡಿದುಕೊಂಡು ಕೋಪದಿಂದ ಪರಚಿ ರಕ್ತ ಕಾರಿಸಿಬಿಟ್ಟಿತು. ಆಗ ಅವನನ್ನು ಬಿಡಿಸಿ ನಾವೆಲ್ಲ ಶುಶ್ರೂಷೆ ಮಾಡಿದೆವು. ಪುನಃ ಬರೆಯುವ ಹವ್ಯಾಸಕ್ಕೆ ತೊಡಗಲು ಅವನಿಗೆ ಶಕ್ತಿ ಬಂದಿರಲಿಲ್ಲ. ಆದರೂ ಜನ ಅವನ ಪುಸ್ತಕವನ್ನು ಓದಲು ಹಾತೊರೆಯುತ್ತಿದ್ದುದರಿಂದ ಬರೆದುದಷ್ಟನ್ನೇ ಪ್ರಥಮಭಾಗವಾಗಿ ಪ್ರಕಟಿಸಬೇಕಾಯಿತು. ಇನ್ನೂ ಮೂಲ ಸಮಸ್ಯೆಗೆ ಬಂದಿಲ್ಲವೆಂದೂ ಅದನ್ನು ಮುಂದಿನ ಭಾಗದಲ್ಲಿ ಚರ್ಚಿಸುತ್ತೇನೆಂದೂ ಮೊದಲ ಮಾತಲ್ಲಿ ಸೇರಿಸಿಬಿಟ್ಟ. ಮುಂದಿನ ಭಾಗ ಇನ್ನೂ ಬಂದಿಲ್ಲ.

ಅದಕ್ಕಾಗಿಯೆ ಕಾದು ಕುಳಿತು ತಪಸ್ಸು ಮಾಡುತ್ತಿರುವ ಜನ ಇನ್ನೂ ನಮ್ಮಲ್ಲಿದ್ದಾರೆ. ಇಂತಹ ವ್ಯಕ್ತಿಗಳಿಂದ ಸಮಾಜದಲ್ಲಿ ಕೊಳೆಯುತ್ತಿರುವ ನಮ್ಮ ಚಿತ್ರಣ ಹೇಗೆ ತಾನೆ ಮೂಡೀತು? "ಕ್ಷ" ಕಿರಣದಿಂದ ವಿಜ್ಞಾನಿ ನಮ್ಮ ದೇಹದ ಅಪಾಯಕರ ರೇಖೆಗಳನ್ನು ಕಂಡರೆ, ಇಂದಿನ ಸಾಹಿತಿಗೆ ಅದು ಬೇಡವಾಗಿದೆ. "ಯಾವ ರೇಖೆ ಹೇಗಿದ್ದರೇನು? ಅವುಗಳ ಮಧ್ಯೆ ಮಾಂಸಖಂಡಗಳಿದ್ದರೆ ಸಾಕು" ಎಂದು ನಿರಾಶ್ರಿತ ಸಮಸ್ಯೆಯ ನೆಪದಲ್ಲಿ ನಮ್ಮ ಜೀವವನ್ನೇ ಹಿಂಡುತ್ತಿರುವವರು ಇಂದು ನಮ್ಮ ಸುತ್ತ ತಿರುಗಾಡುತ್ತಿರುವ ವ್ಯಕ್ತಿಗಳು.

ಹೀಗೆ ನೂರೆಂಟು ಯೋಜನೆಗಳಿಗೆ ಬೇಸತ್ತು ಈ ಮೂರನೆಯ ಶಿಬಿರಕ್ಕೆ ಬಂದಿದ್ದೇನೆ. ಇಲ್ಲಿರುವ ವ್ಯವಸ್ಥಾಪಕ ಬಹಳ ಒಳ್ಳೆಯವನು. ಸ್ವತಃ ನಿರಾಶ್ರಿತನಾಗಿ ಕಷ್ಟಪಟ್ಟವನು ರಾಜಪುತ್ರಸ್ಥಾನದ ಕಡೆಯಿಂದ ಬಂದವನಂತೆ. ಆದರೆ ನಿನ್ನ ಜೊತೆಗೆ ಬರುವ ಇತರರನ್ನು ಕಂಡರೆ ನನಗೇಕೋ ಭಯವಾಗುತ್ತದೆ. ನನ್ನನ್ನೇ ದುರುಗುಟ್ಟಿ ನೋಡುತ್ತಿರುತ್ತಾರೆ. ನೀನು ಅವರ ಹಾಗೆ ಅಲ್ಲವೆಂದೇ ನನ್ನ ಕಥೆಯನ್ನು ಹೇಳಿರುವೆನು. ಇಲ್ಲಿಯ ತನಕವೂ ಯಾರೊಡನೆಯೂ ಬಾಯಿ ಬಿಡದ ನಾನು ನಿನ್ನ ಬಳಿ ಲೀಲಾಜಾಲವಾಗಿ ಮಾತನಾಡಿದ್ದೇನೆ. ಆದಕ್ಕಾಗಿಯೆ ನಿನ್ನಲ್ಲಿ ಏನೋ ಒಂದು ತೆರದ ಸೌಜನ್ಯ ಸಹಾನುಭೂತಿ ಇದೆಯೆಂದು ನಂಬಿದ್ದೇನೆ. ಆದರೂ ಒಮ್ಮೆ ಗಾಢವಾಗಿ ಆಲೋಚಿಸಿದರೆ ಯಾರನ್ನೂ ನಿನ್ನವನೆಂದು ತಿಳಿಯಬೇಡವೆಂದು ಮನಸ್ಸು ಹೇಳುತ್ತದೆ" ಎಂದು ಅವಳು ಕಣ್ಣೀರೊರೆಸಿಕೊಂಡಳು.

ಅವಳ ನಿರಾಶಾದಾಯಕವಾದ ಕಥೆಯನ್ನು ಕೇಳಿ ತರುಣನಿಗೆ ದುಃಖವಾಯಿತು. ಮತ್ತಷ್ಟು ಆವೇಶಪೂರಿತನಾದ. "ಇಲ್ಲಿಯ ತನಕ ನಿನ್ನ ಬಳಿ ಸುಳಿದಾಡಿದವರು ಕೇವಲ ಸಾಮಾನ್ಯಮನುಷ್ಯರು; ತಮ್ಮಲ್ಲಿ ತಾವೇ ನಂಬಿಕೆ ಇಡದವರು. ಮಾರ್ಕೆಟ್ಟಿಗೆ ಹೋದರೆ ಎಷ್ಟೋ ಜನ ಅರ್ಧ ಕೊಳೆತ ಹಣ್ಣುಗಳನ್ನೇ ಹುಡುಕುತ್ತಾರೆ. ಅದೇ ಹಣ್ಣುಗಳನ್ನು

ಮತ್ತೊಬ್ಬರಿಗೆ ಮಾರಿ ಲಾಭಗಳಿಸುತ್ತಾರೆ. ಅದರಿಂದ ದುಡ್ಡಿನ ಸಂಪಾದನೆ ಯಾದರೂ ಸ್ವತಃ ಅವರಿಗೆ ಹಣ್ಣಿನ ನಿಜ ಸವಿ ಹೇಗೆ ತಿಳಿಯಬೇಕು? ಹಾಗೆ ಮಾರಾಟಗಾರನ ದೃಷ್ಟಿಯನ್ನು ನಾನು ಹೊಂದಿಲ್ಲ. ನಿನಗಾಗಿ ಸರ್ವಸ್ವವನ್ನೂ ಅರ್ಪಿಸಬಲ್ಲೆ. ಸಮಾಜದಲ್ಲಿ ಗಣ್ಯರಾಗಿ ಬಾಳೋಣ. ಇಂದೇ ಯಾವುದಾದರೂ ನಿರ್ಧಾರಕ್ಕೆ ಯೋಚಿಸು ಈ ಪಾಪಕೂಪದಲ್ಲೇ ಬಿದ್ದು ನರಳಾಡುವುದು ನಿನಗೆ ಯೋಗ್ಯವಲ್ಲ. ಅದೂ ಅಲ್ಲದೆ ನಿನ್ನಂತಹ ಮನೋಭಾವದವರು ಸಂಸಾರಿಗರಾಗಿ ಬಾಳಿದರೇ ಅವರ ಮನಸ್ಸಿಗೆ ಶಾಂತಿ. ನೂರೆಂಟು ಯೋಚನೆಗಳ ಕಡೆ ಮನಸ್ಸು ತಿರುಗಿಸದೆ ತನ್ನ ಆಶಾಜೀವನಕ್ಕೆ ಒಂದೇ ನಿಲುವನ್ನು ಕಂಡುಕೊಳ್ಳಬೇಕು. ಆ ಜೀವನದ ಚೌಕಟ್ಟಿನಲ್ಲೇ ನಮ್ಮ ನಮ್ಮ ಶಕ್ತಿಗನುಸಾರವಾಗಿ ಸುಖದುಃಖಗಳನ್ನು ಅನುಭವಿಸಬೇಕು ಅಲ್ಲಿಂದಲೇ ನಮಗೆ ಮತ್ತೊಬ್ಬರನ್ನು ಅರ್ಥ ಮಾಡಿ ಕೊಳ್ಳುವ ಶಕ್ತಿ ಬರುತ್ತದೆ. ಆ ಕ್ಷಣ ಇತರ ಮಹತ್ವಪೂರ್ಣವಾದ ಸಮಸ್ಯೆಗಳನ್ನು ಎದುರಿಸುವ ಸಮರ್ಥರಾಗುತ್ತೇವೆ. ಅದಕ್ಕಾಗಿಯೆ ದೊಡ್ಡವರು ಮಾನವನ ಹೃದಯದಲ್ಲಿಯೇ ವಿಶ್ವತೆಯನ್ನು ಕಾಣಬಹು ದೆಂದು ಸಾರಿರುವರು. ಅಂತಹ ಯೋಗ್ಯತೆ ಗಳಿಸಲು ಪ್ರಯತ್ನ ಪಡು. ನಿನಗಾಗಿ ಬಳಲಿ ಬೆಂಡಾದ ನನ್ನನ್ನು ಮೋಸಗೊಳಿಸಬೇಡ" ಎಂದು ಆ ತರುಣ ತನ್ನ ಪ್ರೇಯಸಿಗೆ ಸಮಾಧಾನದ ಆಶ್ವಾಸನೆ ಕೊಟ್ಟನು.

"ಆಗಲಿ, ನೀ ಹೇಳಿದಂತೆಯೆ ನನ್ನ ಒಪ್ಪಿಗೆ. ಮೊದಲನೆಯದಾಗಿ ಈ ಸ್ಥಳವನ್ನು ಬಿಡುವ ಏರ್ಪಾಡು ಮಾಡಬೇಕು. ನಾಳೆಯೆ ವ್ಯವಸ್ಥಾ ಪಕರಿಗೆ ತಿಳಿಸುತ್ತೇನೆ. ನಿನ್ನಂತಹ ವ್ಯಕ್ತಿಯನ್ನು ಹಿಂದೆ ನಾನು ಭೇಟಿ ಮಾಡಿರಲಿಲ್ಲ. ನಿನ್ನಂತೆ ಎಷ್ಟೋ ಜನ ಮಾತನಾಡಿದರೂ ಅವೆಲ್ಲವು ನಟನೆಯ ಮಾತುಗಳೆಂಬುದು ಅವರ ಮುಖಭಾವದಲ್ಲೇ ಎದ್ದು ಕಾಣು ತ್ತಿತ್ತು. ಆದರೆ ನೀ ಆಡಿದ ಮಾತು ಹಾಗಲ್ಲವೆಂದು ನಂಬಿದ್ದೇನೆ. ದೇವ ರನ್ನು ನಂಬಿ ಕೆಟ್ಟವರಿಲ್ಲ. ಹಾಗೆಯೆ ನಿನ್ನಲ್ಲಿ ದೈವತ್ವವನ್ನು ಕಾಣ ಬಯಸುತ್ತೇನೆ. ಅದನ್ನುಳಿಸಿಕೊಳ್ಳುವುದು ನಿನ್ನ ಭಾರ" ಎಂದು ಆಕೆ ಅವನ ಕೈಮೇಲೆ ತನ್ನ ಕೈಯನ್ನಿಟ್ಟು ಕೇಳಿಕೊಂಡಳು.

ಪ್ರಾರ್ಥನಾಮಂದಿರದಿಂದ ಗಂಟೆಯ ಸದ್ದು ಕೇಳತೊಡಗಿತು. ಬೆಳಗಿನ ಝಾವ ಪ್ರಾಪ್ತವಾಯಿತೆಂದು ಸೂಚಿಸಿತು. ಎಲ್ಲರೂ ಪ್ರಾರ್ಥನಾ ಮಂದಿರದ ಕಡೆ ಹೊರಡಲು ಸಿದ್ಧರಾದರು. ಕೆಲವರು ಸ್ಫೂರ್ತಿಯುತ ವಾಗಿ ಕೆಲಸ ಮಾಡಲು ತಕ್ಕ ಶಕ್ತಿಯನ್ನು ಕರುಣಿಸೆಂದು ದೇವರಲ್ಲಿ ಪ್ರಾರ್ಥಿಸುತ್ತಿದ್ದರು. ಮತ್ತೆ ಕೆಲವರು ತಮ್ಮ ರಾತ್ರಿಯ ಹೇಯ ಕಾರ್ಯ ಗಳನ್ನು ನೆನೆಸಿಕೊಂಡು ಕಣ್ಣೀರಿಡುತ್ತಾ ಇನ್ನು ಮುಂದೆ ದುರ್ಬಲ ಮನಸ್ಸು ನಮಗೆ ಬರದಿರಲಿ ಎಂದು ಕೇಳಿಕೊಳ್ಳುತ್ತಿದ್ದರು. ಒಂದು ಹೆಂಗಸು ತನ್ನಲ್ಲಿ ತಾನೆ, "ಇನ್ನು ಮಕ್ಕಳನ್ನು ದೊಡ್ಡವರಾಗದಂತೆಯೆ ಇಡಪ್ಪ, ಸ್ವಾಮಿ. ನಾಳೆ ಅವರು ದೊಡ್ಡವರಾಗಿ ನನ್ನನ್ನು ಪ್ರಶ್ನೆ ಮಾಡಿದರೆ ಏನು ಉತ್ತರ ಹೇಳಲಿ? ಯಾವಾಗಲೂ ಅವರು ಚಿಕ್ಕವರಾ ಗಿಯೆ ಇರಲಿ ಆ ಒಂದು ವರವನ್ನು ಮಾತ್ರ ಕರುಣಿಸು" ಎಂದುಕೊ ಳ್ಳುತ್ತಿದ್ದಳು. ಅಂತೂ ಎಲ್ಲ ತರಹದ ಜನರೂ ಪ್ರಾರ್ಥನಾಮಂದಿರಕ್ಕೆ ಹೋಗಲೇಬೇಕಾಗಿತ್ತು.

ಇತ್ತ ನಾನು ನೋಡುತ್ತಿದ್ದ ಅವರಿಬ್ಬರ ಸಂಭಾಷಣೆ ಪ್ರಾರ್ಥನಾ ಮಂದಿರದ ಗಂಟೆ ಕೇಳಿದ ತಕ್ಷಣ ಕೊನೆಗೊಂಡಿತು. ಮುಂದಿನ ಯೋಚನೆ ಮಾಡಲು ಸಮಯ ಒದಗಲಿಲ್ಲ. ತರುಣಿ ಬೆಚ್ಚಿಬಿದ್ದು, "ಅಯ್ಯೋ, ಆಗಲೆ ಎಲ್ಲ ಎದ್ದುಬಿಟ್ಟಿದ್ದಾರೆ. ನಾಳೆ ಮುಂದಿನ ಮಾತನ್ನಾಡುವ" ಎಂದು ಮನಸ್ಸಿಲ್ಲದೆ ಎದ್ದುಬಿಟ್ಟಳು. ಅವನು ಕೂಡ, "ನಾಳೆ ಖಂಡಿತ ಬರುತ್ತೇನೆ. ಅಷ್ಟರೊಳಗೆ ನಾ ಹೇಳಿದ ಮಾತುಗಳು ಜ್ಞಾಪಕವಿರಲಿ. ಹೊರಡುವ ಏರ್ಪಾಡು ಮಾಡಿಕೊಂಡು ಸಿದ್ಧಳಾಗಿರಬೇಕು. ನನ್ನ ಕೈ ಬಿಡಬೇಡ" ಎಂದು ಅವಳನ್ನೇ ನೋಡುತ್ತ ನೋಡುತ್ತ ತನ್ನ ದಾರಿ ತಾನು ಹಿಡಿದನು.

ಎರಡು ದಿನಗಳಾದರೂ ಆಕೆ ನನ್ನನ್ನು ಆ ವಿಷಯ ಕೇಳಲಿಲ್ಲ. ನಾನು ಮಾತ್ರ ಆಕೆಯ ಮುಖಭಾವವನ್ನು ಪ್ರತಿದಿನವೂ ಪರೀಕ್ಷಿಸುತ್ತಿದ್ದೆ. ಏನೋ ನನ್ನ ಬಳಿ ಹೇಳಲು ಪ್ರಯತ್ನಿಸುತ್ತಿದ್ದಳು. ಆದರೆ ಅದನ್ನು ಪ್ರಕಟಿಸಲು ಹಿಂಜರಿಯುತ್ತಿದ್ದಳು. ಮನಸ್ಸಿನ ಆಶೆಯನ್ನು ಬಿಗಿ ಹಿಡಿ

ದಿದ್ದಳು. ಇದು ಅಂದು ರಾತ್ರಿ ನಾನು ಅವರಿಗೆ ತಿಳಿಯದಂತೆ ಅವರಿಬ್ಬರ ಸಂಭಾಷಣೆ ಕೇಳಿದ್ದರಿಂದ ಗೊತ್ತಾಗಿತ್ತು. ಆ ರೀತಿ ಇನ್ನೂ ಎಷ್ಟೋ ಸಂಭಾಷಣೆಗಳು ನಮ್ಮ ಶಿಬಿರದ ಇತರ ಯುವತಿಯರಲ್ಲಿಯೂ ನಡೆದಿರ ಬಹುದು. ತಮ್ಮ ತಮ್ಮ ಆಶೋತ್ತರಗಳನ್ನು ತಮ್ಮದೇ ಆದ ರೀತಿಯಲ್ಲಿ ರೂಪಿಸಿಕೊಂಡಿರಬಹುದು. ತಮಗೆ ಅನುರೂಪರಾದ ಗಂಡಸರಲ್ಲಿ ಪ್ರೀತಿ ಗಳಿಸಿರಬಹುದು. ಅವರೊಡನೆ ಸುಖಸಂಸಾರ ಸಾಗಿಸಲು ಹಾತೊರೆಯು ತ್ತಿರಬಹುದು. ಕಲ್ಪನೆಯ ಕಟ್ಟಡವನ್ನು ಕಟ್ಟಿ ಕುಣಿದಾಡಿದಂತೆ ಕನಸಿ ನಲ್ಲಿ ಕಂಡಿರಬಹುದು. ಆದರೆ "ಇದು ನಡೆಯಲಾರದು" ಎಂಬ ಶಂಕೆ ಸ್ವಲ್ಪ ತಲೆದೋರಿದಾಗ ಜೀವನದಲ್ಲೇ ಬೇಸರಪಟ್ಟಿರಬಹುದು. ಅಂತಹ ಹೆಂಗಸರು ನಮ್ಮ ಶಿಬಿರದಲ್ಲಿ ಎಷ್ಟು ಜನ ಇದ್ದಾರೋ! ಯಾರಿಗೆ ಗೊತ್ತು? ಎಂದು ನಾನು ತರ್ಕಿಸಿದೆ. ಆದರೆ ಸಮಸ್ಯೆಗೆ ತಕ್ಕ ಉತ್ತರ ಸಿಕ್ಕಲಿಲ್ಲ. ದೇವರು ಹೆಣ್ಣು ಗಂಡನ್ನು ಸೃಷ್ಟಿಸಿ ಅವರ ಹೊಂದಿಕೆಯಿಂದ ಜಗತ್ತು ಮುನ್ನಡೆಯುವಂತೆ ಏರ್ಪಾಡು ಮಾಡಿದ್ದಾನೆ. ಇದರಲ್ಲಿ ಗಂಡಸಿನ ಪಾತ್ರವೇ ಹೆಚ್ಚಿನದಾಗಿದೆ. ಗಂಡಸು ಎಷ್ಟು ಜನ ಹೆಂಡಿರನ್ನು ಕಟ್ಟಿಕೊಂಡರೂ ತಕ್ಕ ಸೌಲಭ್ಯವಿದೆ. ಮತ್ತೆ ಬೀದಿಯಲ್ಲಿ ಬಿದ್ದ ಹೆಂಗಸಿನ ಪಾಡೇನು! ಆಗ ಗಂಡಸು ಅವಳನ್ನು ಮನಬಂದಂತೆ ಕುಲಗೆಡಿಸಿದರೂ ಅಭ್ಯಂತರವಿಲ್ಲ. ಆದರೆ ಬೀದಿಯಲ್ಲಿ ಬಿದ್ದವಳಾದ ಮಾತ್ರಕ್ಕೆ ಅವಳಿಗೆ ಕುಲ ಗೋತ್ರಗಳಿಲ್ಲವೇ? ಅದೇ ಬಿದ್ದು ಹೋದ ಕುಲವನ್ನು ಮೇಲೆತ್ತುವ ಜವಾಬ್ದಾರಿಯೂ ಗಂಡಸಿಗಲ್ಲದೆ ಮತ್ತಾರಿಗಿದೆ? ಅದಕ್ಕಾಗಿಯೆ ಹೆಣ್ಣು ತನಗೆ ಎಷ್ಟೇ ಕಷ್ಟವಿದ್ದರೂ ಮನಸ್ಸಿನಲ್ಲಿ 'ನನಗೆ ಅನುರೂಪನಾದ ಗಂಡಸು ಸಿಕ್ಕಿದರೆ!' ಎಂದು ಕನಸು ಕಾಣುತ್ತಿರುತ್ತಾಳೆ. ಮದುವೆಯ ಹೆಣ್ಣಿಗೆ ಸ್ವಾಭಾವಿಕ ಲಜ್ಜೆಯಿದ್ದರೂ ಗಂಡನ ಸ್ವಭಾವವನ್ನೇ ಸೂಕ್ಷ್ಮ ವಾಗಿ ನೋಡುತ್ತಿರುತ್ತಾಳೆ. ತನ್ನ ಮುಂದಿನ ಜೀವನ ಎಂತಹದಾಗಿರ ಬೇಕೆಂದು ಸದಾ ಯೋಚಿಸುವಳು. ಒಂದು ವೇಳೆ ಗಂಡ ಕೆಟ್ಟವನಾಗಿ ಪರಿಣಮಿಸಿದರೂ ಆದಷ್ಟು ಬೇಗ ಆತನ ಬುದ್ಧಿ ತಿರುಗಿಸಲು ಹೆಂಡತಿ ಪ್ರಯತ್ನಿಸುವಳು. ಹಗಲಿರುಳೆನ್ನದೆ ಆತನ ಶುಶ್ರೂಷೆಯಲ್ಲಿ ಕಾಲಕಳೆ

ಯುವಳು. ಮನಸ್ಸಿನಲ್ಲಿ ದುಃಖವಡಗಿದ್ದರೂ ಹೆಣ್ಣು ಗಂಡಿನೆದುರಿಗೆ ನಕ್ಕು ನಗಿಸಬಲ್ಲುದು. ಆದರೆ ಆ ನಗುವಿನ ಆಳ ಗಂಡಸು ಅರ್ಥಮಾಡಿಕೊಳ್ಳುವನೇ? ಹೆಣ್ಣಿನಷ್ಟು ಜವಾಬ್ದಾರಿ ಗಂಡಸಿಗಿದೆಯೇ? ಅಂದು ಪ್ರಾರ್ಥನಾ ಮಂದಿರದಲ್ಲಿ ಒಬ್ಬ ಹೆಂಗಸು, "ಸ್ವಾಮಿ, ನನ್ನ ಮಕ್ಕಳಲ್ಲಿ ನನಗೆ ಬಲು ಪ್ರೀತಿ. ಆದರೆ ಅವರನ್ನು ಯಾವಾಗಲೂ ಚಿಕ್ಕ ಮಕ್ಕಳಸ್ಸಾಗಿಯೆ ಇಟ್ಟೆರು. ನಾಳೆಯ ದಿನ ಅವರು ದೊಡ್ಡವರಾಗಿ ಪ್ರಶ್ನೆಗಳನ್ನು ಕೇಳಲು ಶುರುಮಾಡಿದರೆ ನಾನು ಹೇಗೆ ಉತ್ತರಿಸಲಿ? ನನ್ನ ತಂದೆ ಯಾರು ಎಂದು ದೊಡ್ಡವಳಾದ ಮೇಲೆ ನನ್ನ ಮಗಳು ಕೇಳಿದರೆ ಏನೆಂದು ಹೇಳಲಿ? ಆದ್ದರಿಂದ ನನ್ನ ಮಕ್ಕಳು ಯಾವಾಗಲೂ ಮಗುವಿನಂತೆ ಮುಗ್ಧರಾಗಿರುವಂತೆ ಕರುಣಿಸು"ಎಂದಾಗ ಗಂಡಸಿನ ಜವಾಬ್ದಾರಿ ಏನಾದರೂ ಪ್ರತಿಬಿಂಬಿತವಾಗಿದೆಯೇ? ಗಂಡಸು ಹೆಂಗಸಿನೊಡನೆ ಬೇಜವಾಬ್ದಾರಿಯಿಂದ ಹಗುರವಾಗಿ ವರ್ತಿಸಬಹುದು. ಆದರೆ ಹೆಂಗಸಿಗೆ ಅದು ಕುಲನಾಶಕವಾಗಿ ಪರಿಣಮಿಸಬಹುದು. ಕಡೆಗೆ ವ್ಯೆ ಮನಸ್ಸೆರಡು ಕಲುಷಿತವಾಗಿ ಅಪಾಯಕ್ಕೀಡಾಗಬಹುದು. ಪ್ರಾಣಬಿಟ್ಟರೂ ಅವರ ಮಕ್ಕಳ ಮೇಲೆ ಸಮಾಜ ದುರುಗುಟ್ಟಿ ನೋಡಬಹುದು. ಇದಕ್ಕೆಲ್ಲ ಮೂಲ ಸಮಸ್ಯೆ ಯಾವುದು? ಒಂದೂ ಹೊಳೆಯುವುದಿಲ್ಲವಲ್ಲ!" ಎಂದು ನನ್ನ ಕೆದರಿದ ಕೂದಲನ್ನು ಮತ್ತಷ್ಟು ಕೆದರಿಕೊಂಡೆ.

ಎಷ್ಟೋ ಜನ ತಮ್ಮ ಜೀವನದ ಆಶಾಬೆಳಕನ್ನು ಕಂಡುಕೊಂಡರೂ ಅದನ್ನು ಪಡೆಯಲಾಗದೆ ಹುಚ್ಚರಾಗಿದ್ದಾರೆ. ಅದೇ ರೀತಿ ನಮ್ಮ ಶಿಬಿರದ ಹೆಂಗಸರೂ ಬುದ್ಧಿ ಕೆಡಿಸಿಕೊಂಡು ಪ್ರಾಣಬಿಟ್ಟರೆ ಯಾರು ಹೊಣೆ? ಮೇಲು ಮೇಲಿನ ಉಪಚಾರದಿಂದ ಮನಸ್ಸಿನ ರೋಗವನ್ನು ಗುಣಪಡಿಸಲಾಗುವುದೇ? ಇಷ್ಟೆಲ್ಲ ಮೇಲ್ವಿಚಾರಕನಾಗಿ ಕೆಲಸ ಮಾಡಿದಮೇಲೆ ಕೆಟ್ಟ ಹೆಸರು ಬಂದರೆ ಅದು ನನ್ನ ತಪ್ಪೋ ಅಥವಾ ಶಿಬಿರದ ಸ್ತ್ರೀಯರದೊ? ಇದು ಇಬ್ಬರ ತಪ್ಪೂ ಅಲ್ಲ; ಮನಸ್ಸಿನ ರೋಗವನ್ನು ಗುಣಪಡಿಸಲಾಗದೆ—ಅಲ್ಲ; ಅರ್ಥಮಾಡಿಕೊಳ್ಳಲಾಗದೆ—ಸುಮ್ಮನೆ ಒಂದು ದೇಹ ಸಿಕ್ಕಿದೆಯಲ್ಲಾ ಎಂದು ಶಸ್ತ್ರ ಚಿಕಿತ್ಸೆ ಮಾಡುವ ವೈದ್ಯನಿಗೆ ನಾನು ಹೋಲಬಲ್ಲೆ; ರೋಗ

ವನ್ನು ಮನಸ್ಸಿನಲ್ಲೇ ಇಟ್ಟುಕೊಂಡು ಅದನ್ನು ವೈದ್ಯನೆದುರಿಗೂ ಹೇಳಲು ಸಂಕೋಚಪಡುವ ರೋಗಿಯಂತೆ ನಮ್ಮ ಶಿಬಿರದ ಹೆಂಗಸರಿದ್ದಾರೆ.

ಯಾವುದೊ ಹೊಡೆದಾಟದ ನೆಪದಿಂದ ಇಲ್ಲಿಗೆ ಬಂದವರು ಎಲ್ಲವನ್ನೂ ಕಳೆದುಕೊಂಡು ಬಂದರೂ ತಮ್ಮ ಆಶೆ ಆಕಾಂಕ್ಷೆಗಳನ್ನು ಬಿಟ್ಟಿಲ್ಲ. ಇಲ್ಲಿ ತಕ್ಕ ಅವಕಾಶವಿಲ್ಲದಿದ್ದರೂ ನಿರಂತರ ಹೊಡೆದಾಟ ನಡೆಯುತ್ತಿದೆ. ಅಂತೆಯೆ ಇಂದು ರಾಜಕೀಯವಾಗಿ ಶುರುವಾದ ಸಮಸ್ಯೆ ಬೃಹದಾಕಾರ ವಾಗಿ ಬೆಳೆದು ಸಾಮಾಜಿಕ ಸಮಸ್ಯೆಯಾಗಿ ನಿಂತಿದೆ. ಕ್ಷಣಕಾಲ ನಡೆದು ಹೋದ ರಾಜಕೀಯ ಘಟನೆ ಸಮಾಜದಲ್ಲಿ ಬೆರೆತುಹೋಗಿ ಮತ್ತೊಮ್ಮೆ ಎಷ್ಟೊ ವರ್ಷದ ನಂತರ ಆಂದೋಲನಕಾರಿಯಾಗಬಹುದು. ಆಗ ಅದು ಹೇಗೆ ಉದ್ಭವಿಸಿತು ಎಂಬುದೇ ಸಂಶಯಕ್ಕೆ ಕಾರಣವಾಗುತ್ತದೆ. ಕೆಲವರು ಕಂಡೂ ಕಾಣದಂತೆ ಮೂಲ ತಿಳಿದಿದ್ದರೂ ಸುಮ್ಮನಿದ್ದು ಬಿಡುವರು ಮತ್ತೆ ಕೆಲವರು ದೂರ ನಿಂತು ಫಲಿತಾಂಶ ಹೊರಬಿದ್ದ ಮೇಲೆ 'ಇದೇ ನಮ್ಮ ಭಾವನೆಯೂ ಆಗಿದ್ದಿತು' ಎಂದು ಗುಂಪೊಳಗೆ ನುಸುಳಿಕೊಳ್ಳುವರು. ಹೇಗಾದರೂ ಇರಲಿ; ಅಂತೂ ಮೇಲ್ವಿಚಾರಕನೆಂದು ಹೇಳಿಕೊಂಡ ನನಗೆ ಶಿಬಿರದ ವಿಷಯಗಳನ್ನು ಒಳಹೊಕ್ಕು ನೋಡಲಾಗಲಿಲ್ಲ. ಹೆಸರಿಗೆ ತಕ್ಕಂತೆ ಮೇಲು ವಿಚಾರಕನಾಗಿ ಉಳಿದೆನೇ ಹೊರತು ಒಳ ವಿಚಾರಗಳ ಅಂತರಾಳವನ್ನರಿಯಲು ಅಷ್ಟಾಗಿ ಸಾಮರ್ಥ್ಯ ಗಳಿಸಲಾಗಲಿಲ್ಲ. / ಇನ್ನು ಮೇಲೆ ಯಾರಿಗೂ ತಿಳಿಯದಂತೆ ಗೂಢಚಾರನಾಗಿ ವರ್ತಿಸಿದರೇ ಹೆಚ್ಚು ವಿಷಯಗಳನ್ನು ಗ್ರಹಿಸಬಹುದೆಂದು ಊಹಿಸಿದೆ. ಅದೇ ರೀತಿ ವೇಷ ಹಾಕಲು ಪ್ರಾರಂಭಿಸಿದೆ. ಇದು ನನಗೇನೂ ಹೊಸದಾಗಿರಲಿಲ್ಲ. ಹಿಂದೆ ಎಷ್ಟೋ ಬಾರಿ ವೇಷ, ದೇಹ ಎರಡನ್ನೂ ಮರೆಸಿಕೊಂಡು ಸಾಯುವ ಸನ್ನಿವೇಶ ಒದಗಿದ್ದರೂ ತಪ್ಪಿಸಿಕೊಂಡಿದ್ದೆ. ಆಗ ಸಾಮಾನ್ಯ ಮನುಷ್ಯ ನಾಗಿದ್ದ ನಾನು ಸಾಮಾನ್ಯ ರೀತಿಯಿಂದಲೇ ಪಾರಾಗಬಹುದಿತ್ತು. ಆದರೆ ಈಗ ಅದಕ್ಕೆ ಅವಕಾಶವಿರಲಿಲ್ಲ. ಎಲ್ಲರಿಗೂ ಚಿರಪರಿಚಿತನಾದ ನಾನು ವೇಷ ಮರೆಸಲು ಸ್ವಲ್ಪ ಪ್ರಯಾಸಪಡಬೇಕಾಯಿತು. ನಿಜ ವಾಗಿಯೂ ಅಧಿಕಾರದಲ್ಲಿರುವವರು ಸಾಮಾನ್ಯರಂತೆ ವರ್ತಿಸಬೇಕಾದರೆ

ಕಷ್ಟತರವಾಗುತ್ತದೆ. ಮೊದಲಿನಿಂದಲೂ ಅಧಿಕಾರದಲ್ಲೇ ದರ್ಪ ನಡೆಸು ವವರಿಗೆ ಸಾಧಾರಣ ಮನುಷ್ಯರಂತೆ ನಡೆಯಲು ಸಾಧ್ಯವಾಗುವುದೇ ಇಲ್ಲ. ಅದರಲ್ಲೂ ಎಲ್ಲಕ್ಕೂ ಸಿದ್ಧರಾಗಿ ಗೂಢಚಾರರಾಗಬೇಕಾದರೆ ಬಲವಾಗಿ ಹಿಂಜರಿಯದ ಮನಸ್ಸು ಇರಬೇಕು.

ಆದರೆ ನನ್ನ ವಿಷಯದಲ್ಲಿ ಆ ಮನಸ್ಸು ಹೇರಳವಾಗಿದೆ. ಮೊದಲು ಗೂಢಚಾರನಾಗಿಯೆ ದೇಶಸಂಚಾರ ಮಾಡಿದವನಿಗೆ ಈ ಸನ್ನಿವೇಶ ಅಷ್ಟಾಗಿ ಹೆದರಿಸಲಿಲ್ಲ. ಅಂತೆಯೆ ಮೇಲ್ವಿಚಾರಕನೆಂಬ ದರ್ಪವನ್ನು ಬದಿಗೊತ್ತಿ ಗೂಢವಾಗಿ ಮನಸ್ಸಿನಲ್ಲೇ ಗೂಢಚಾರನಾದೆ.

ಶಿಬಿರದ ಕಾರ್ಯಕಲಾಪಗಳು ಎಂದಿನಂತೆ ಭರವಾಗಿ ನಡೆಯು ತ್ತಿತ್ತು. ಹುಡುಗಿಯರ ಮುಖದಲ್ಲಿ ಹೊಸ ಗೆಲುವು ಪ್ರಾಪ್ತವಾಗಿತ್ತು. ಶಿಬಿರದ ಒಂದೊಂದು ಕೊಠಡಿಯೂ ಥಳಥಳಿಸುತ್ತಿತ್ತು. ಪ್ರತಿಯೊಂದು ಕೊಠಡಿಯ ಬಾಗಿಲ ಮೇಲೂ ಒಂದೊಂದು ಹೆಸರು ಬರೆಸಬೇಕೆಂದು ಒಬ್ಬಳು ಸೂಚಿಸಿದಳು. ಮತ್ತೊಬ್ಬಳು ಕುಚೋದ್ಯ ಮಾಡುತ್ತ ಪ್ರತಿ ಯೊಂದಕ್ಕೂ ಯಾವುದೋ ಹೆಸರಿಡುವ ಬದಲು ತಮ್ಮ ತಮ್ಮ ಹೆಸರು ಗಳನ್ನೇ ಇಟ್ಟುಬಿಟ್ಟರಾಯಿತೆಂದು ಸುತ್ತಲಿದ್ದವರನ್ನು ನಗಿಸಿದಳು. "ಅದು ಚನ್ನಾಗಿರುವುದಿಲ್ಲವಮ್ಮ; ನಾಳೆ ಸಮಾಜ ನೋಡಲು ಬಂದವರು ನಮ್ಮ ಹೆಸರನ್ನೇ ಜಪ ಮಾಡಲು ಪ್ರಾರಂಭಿಸಿಬಿಟ್ಟರೆ!" ಎಂದು ಕೋಪ ಗೊಂಡವಳಂತೆ ತನ್ನ ನೀಳವಾದ ಜಡೆಯನ್ನು ಸುರುಳಿ ಸುತ್ತುತ್ತಾ ಮೊದಲ ಬಾರಿ ಗಂಡನನ್ನು ನೋಡಿ ನಾಚುವ ಚಿಕ್ಕ ಹುಡುಗಿಯಂತೆ ಗುಂಪಿನ ಮಧ್ಯದಲ್ಲಿದ್ದ ಹುಡುಗಿ ರಕ್ತ ಚಿಮ್ಮುತ್ತಿದೆಯೋ ಎನ್ನುವಂತೆ ಕೆಂಪು ಮುಖ ಮಾಡಿಕೊಂಡಳು. ಅದಕ್ಕೆ ಇನ್ನೊಬ್ಬಳು, "ಹಾಗೋ: ನಾವೇನೂ ನಿಮ್ಮ ತಂಟೆಗೆ ಬರೋಲ್ಲಾಮ್ಮ. ನಿನ್ನ ಜಾಗಕ್ಕೆ ಬರುವವ ರನ್ನ ನಾವೇಕೆ ಹಿಡಿದುಹಾಕೋಣ? ನಿಜವಾಗಿಯೂ ಆ ಎದುರಿನ ರೂಮನ್ನು ನಿನಗೆ ಕೊಟ್ಟುಬಿಡುತ್ತೇವೆ ಸುತ್ತಲೂ ಕನ್ನಡಿಯಿದೆ. ಅದರಲ್ಲೂ ಒಂದೊಂದು ಕನ್ನಡಿ ಒಂದೊಂದು ಶೃಂಗಾರಕ್ಕೆ ಹೆಸರುವಾಸಿ ಯಾಗಿದೆ. ಕಡೆಗೆಲ್ಲ ಆದಮೇಲೆ ಆ ಮಧ್ಯದಲ್ಲಿರುವ ನಿಲುಗನ್ನಡಿಯ

ಮುಂದೆ ನಿಂತೆ ಅಂದರೆ ಸಾಕು, ನಿನ್ನ ಮುದ್ದು ರೂಪವನ್ನು ನೋಡಿದವರು ಒಂದೇ ಸಮನೆ ನಿನ್ನ ರೂಮಿಗೆ ನುಗ್ಗಿಬಿಡುತ್ತಾರೆ. ನಿನ್ನನ್ನು ಹಿಡಿದುಕೊಳ್ಳುವ ಬದಲು ನಾಲ್ಕು ಕನ್ನಡಿಯಲ್ಲಿ ಕಾಣುವ ನಿನ್ನ ಪ್ರತಿಬಿಂಬವನ್ನು ಹಿಡಿಯಲೋಡುತ್ತಾರೆ. ಆಗ ಪಾಪ; ಕನ್ನಡಿಗೆ ತಲೆ ಒಡೆದುಕೊಳ್ಳಬೇಕು. ಅಂತೂ ಒಳ್ಳೆ ಕಿಲಾಡಿಯಮ್ಮ ನೀನು" ಎಂದು ಮತ್ತಷ್ಟು ಅವಳನ್ನು ರೇಗಿಸಿಬಿಟ್ಟಳು. ಅವಳು ಅಲ್ಲಿ ನಿಲ್ಲಲಾರದೆ ಓಡಿಬಿಟ್ಟಳು. ಆದರೂ ಬಿಡಬೆ ಹಿಂದೆಯೇ ಇತರರೂ ಓಡಿದರು. ನಿಜವಾಗಿಯೂ ಆ ದೃಶ್ಯ ಮರೆಯುವಂತಿಲ್ಲ. ನಾನೊಬ್ಬ ಕವಿಯಾಗಿದ್ದಿದ್ದರೆ ಎಷ್ಟೋ ಸುಂದರ ಭಾವಕುಸುಮಗಳನ್ನು ಹೆಣೆದುಬಿಡುತ್ತಿದ್ದೆ. ಜೂಟಾಟವಾಡುತ್ತಿದ್ದ ಅವರು ನೀಲಿಯಾಕಾಶದಲ್ಲಿ ನೃತ್ಯಮಾಡುವ ಅಪ್ಸರೆಯರಂತೆ ಕಂಡರು. ಬಿಳಿಯ ಮೋಡದ ಬೆಳಕಲ್ಲೂ ಕಪ್ಪು ಮೋಡದ ನೆರಳಲ್ಲೂ ಹಾದು ಹೋಗುವವರಂತೆ ಅವರ ಮುಖಭಾವ ಕ್ಷಣಕ್ಷಣಕ್ಕೂ ತನ್ನದೇ ಆದ ಸೌಂದರ್ಯದಿಂದ ಮಿನುಗುತ್ತಿತ್ತು. ಮರುಕ್ಷಣ ನನಗೆ ದುಃಖವಾಯಿತು. ಕಡೆಯ ತನಕವೂ ಅವರು ಹಾಗೆಯೆ ಇದ್ದುಬಿಟ್ಟರೆ ಎಷ್ಟೋ ಚೆನ್ನು ಎಂದುಕೊಂಡೆ. ಆದರೆ ಹಾಗೆ ಇರಲು ಸಾಧ್ಯವೇ ಎಂದು ಸಂದೇಹಪಟ್ಟೆ. ಅವರು ಅಪ್ಸರೆಯರಂತಿದ್ದರೂ ಆಕಾಶದ ವ್ಯಕ್ತಿಗಳಲ್ಲವಲ್ಲ! ಮಣ್ಣಿನ ಮಕ್ಕಳಾಗಿ ಬಂದವರು ಮಣ್ಣಿನ ವಾಸನೆಯನ್ನು ಅನುಭವಿಸಲೇ ಬೇಕು. ಅಂತೂ ನನ್ನ ಶಿಬಿರದವರನ್ನು ದೇವತೆಗಳನ್ನಾಗಿ ಕಂಡ ನನ್ನ ಕಣ್ಣು ಮರುಕ್ಷಣ ಭೂಮಿಗಿಳಿಯಿತು.

ದಿನಗಳು ಉರುಳಿದವು. ಸಂಜೆಯ ಹೊತ್ತು ಗಾಳಿ ಸೇವನೆಗೆಂದು ನಮ್ಮ ಕಟ್ಟಡದ ಸುತ್ತಲೂ ವಿಶಾಲವಾಗಿದ್ದ ಉದ್ಯಾನವನದಲ್ಲಿ ಕುಳಿತುಕೊಳ್ಳುತ್ತಿದ್ದೆ. ಎಲ್ಲೆಲ್ಲಿ ನೋಡಿದರೂ ಘಮಘಮಿಸುವ ಹೂವುಗಳು. ಬಳ್ಳಿಯ ಹೂವುಗಳಂತೂ ಗಾಳಿಗೆ ಸಿಲುಕಿ ನಮ್ಮ ಕೈಗೆ ಸಿಕ್ಕದಂತೆ ಕುಣಿದಾಡುತ್ತಿದ್ದವು. ಮಧ್ಯದಲ್ಲಿ ತಿಳಿನೀರಿನ ಕೊಳ ನಿರ್ಮಲವಾಗಿತ್ತು. ಸುತ್ತಲೂ ಕಲ್ಲಿನ ಮೆಟ್ಟಲುಗಳು ಅಂದವಾಗಿದ್ದವು. ಅದರ ಮೇಲೆ ಸದಾ ಪಾರಿಜಾತ ಗಿಡದ ಹೂವುಗಳು ಉದುರುತ್ತಿದ್ದವು. ಮತ್ತೆ ನಮ್ಮ ಶಿಬಿರದ

ಹೆಂಗಸರು ಅವುಗಳನ್ನಾಯ್ದುಕೊಳ್ಳುವಾಗ ಎಷ್ಟೋ ವೇಳೆ ತಮ್ಮ ಕೈಯ ಲ್ಲಿದ್ದ ಮಲ್ಲಿಗೆ ಜಾಜಿ ಹೂಗಳನ್ನು ಬೀಳಿಸಿಕೊಳ್ಳುತ್ತಿದ್ದರು. ಅಂತೂ ಆ ಕೊಳ ಪ್ರತಿದಿನವೂ ಅವರು ಆಯ್ದುಕೊಳ್ಳುತ್ತಿದ್ದ ಪಾರಿಜಾತವನ್ನೂ, ತಿಳಿಯದೆ ಬೀಳಿಸಿಕೊಳ್ಳುತ್ತಿದ್ದ ಮಲ್ಲಿಗೆ ಜಾಜಿ ಹೂಗಳನ್ನೂ ಪ್ರತಿಬಿಂಬಿ ಸುತ್ತಿತ್ತು. ಪ್ರತಿದಿನ ಸಾಯಂಕಾಲವೂ ಶಿಬಿರದ ಹೆಂಗಸರು ಮೆಟ್ಟಲಿನ ಸುತ್ತಲೂ ಹರಟೆ ಹೊಡೆಯುತ್ತಾ ಕುಳಿತುಕೊಳ್ಳುತ್ತಿದ್ದರು. ಏನೇನೋ ಮಾತನಾಡಿ ತಮ್ಮಲ್ಲಿ ತಾವೇ ನಗುತ್ತಿದ್ದರು. ಕಡೆಗೆ "ಅವನು ಹಾಗೆ, ಇವನು ಹೀಗೆ" ಎಂದು ವರ್ಣನೆ ಮಾಡುತ್ತಾ ಗೇಲಿಯೆಬ್ಬಿಸುತ್ತಿದ್ದರು. ಒಬ್ಬಳು ಇನ್ನೊಬ್ಬಳ ಜಡೆಯನ್ನು ಹಿಡಿದೆಳೆದು ಹಾಸ್ಯಮಾಡುತ್ತಿದ್ದಳು. ಆಗ ಮತ್ತೊಬ್ಬಳು ಹೆದರಿ ತನ್ನ ಜಡೆಯನ್ನು ಮುಂದಕ್ಕೆ ಹಾಕಿಕೊಳ್ಳು ತ್ತಿದ್ದಳು. ಬಿಳಿಯ ಮುಖಕ್ಕೆ ನೀಳವಾದ ಕಪ್ಪುಜಡೆ ಗಲ್ಲಕ್ಕೆ ಒತ್ತರಿಸಿ ಕೊಂಡು ಮತ್ತಷ್ಟು ಶೋಭಾಯಮಾನವಾಗಿತ್ತು. ಕೆಲವರು ಕೋಪ ಬಂದಾಗ ಜಡೆಯನ್ನು ತಕ್ಷಣ ಹಿಂದಕ್ಕೆ ಹಾಕಿಕೊಂಡು ಬಿಡುತ್ತಿದ್ದರು. ಮರುಕ್ಷಣ ನಕ್ಕು ಸೀರೆಯ ಸೆರಗನ್ನು ಸರಿಮಾಡಿಕೊಳ್ಳುತ್ತಿದ್ದರು. ಇನ್ನೊಬ್ಬಳು ಸೂರ್ಯನನ್ನೇ ನೋಡುತ್ತ ಏನೋ ಬೇಜಾರುಪಟ್ಟವಳಂತೆ ನಟಿಸಿ ಸೂರ್ಯ ಮುಳುಗಿದ ಮೇಲೆ ನಿಟ್ಟುಸಿರು ಬಿಡುತ್ತಿದ್ದಳು. ಹಿಂದಿ ನಿಂದ ಕಿಲಾಡಿ ಗೆಳತಿಯೊಬ್ಬಳು ಬಂದು, "ಪಾಪ, ಸೂರ್ಯ ಮುಳು ಗಿಯೇ ಬಿಟ್ಟ. ಇಷ್ಟು ಬೇಗ ಎಷ್ಟು ಕತ್ತಲಾಗಿ ಹೋಯಿತು" ಎಂದು ಕಣ್ಣು ಮುಚ್ಚುತ್ತಿದ್ದಳು. ಆಗ ಕಣ್ಣು ಬಿಡಿಸಿಕೊಳ್ಳಲು ಪ್ರಯಾಸ ಪಡ ಬೇಕಾಗಿತ್ತು. ಆ ನೋಟ ಎಂತಹವನನ್ನಾದರೂ ಕರಗಿಸಿಬಿಡುತ್ತಿತ್ತು. ಇವೇ ಮುಂತಾದ ಹಗುರವಾದ ಆಟಪಾಟಗಳು ಶಿಬಿರದ ಯುವತಿಯರಿಗೆ ಕಾಲ ಕಳೆಯಲು ಸಾಧನವಾಗಿತ್ತು. ಆದರೆ ಇಷ್ಟರಲ್ಲೇ ತೃಪ್ತಿಹೊಂದಲು ಅವರ ಮನಸ್ಸು ಎಡೆಗೊಡುತ್ತಿರಲಿಲ್ಲ. ಅವರಾಡುವ ಲಘುಮಾತಿನ ಹಿಂದೆ ಎಷ್ಟೋ ಗೂಡಾರ್ಥವಿರುತ್ತಿತ್ತು. ವಯೋಧರ್ಮಕ್ಕನುಗುಣವಾಗಿ ಅವರಲ್ಲಿ ಪೂರ್ಣ ಯೌವನದ ಸುಂದರ ಚಿಹ್ನೆಗಳು ಎದ್ದುಕಾಣುತ್ತಿದ್ದವು.

ಒಂದುದಿನ ಸಾಯಂಕಾಲ ನಾನು ಹೊರಹೊರಟಿದ್ದೆ. ಮಧ್ಯಾಹ್ನದ ಬಿಸಿಲಿನ ತಾಪ ಕಡಿಮೆಯಾಗಿತ್ತು. ತಣ್ಣನೆಯ ಗಾಳಿ ಬೀಸುತ್ತಿತ್ತು.

ಸ್ವಲ್ಪ ದೂರದಲ್ಲೇ ಮಳೆಯಾಗುತ್ತಿರಬಹುದೆಂದು ಊಹಿಸಿದೆ. ನಮ್ಮ ಜಾಗಕ್ಕೆ ಮಳೆ ಬರದೆ ತಣ್ಣನೆಯ ಗಾಳಿಯೇ ಬೀಸುತ್ತಿದ್ದರೆ ಚೆನ್ನ ಎಂದುಕೊಂಡೆ. ಬೆಳಗಿನ ಬೇಗೆಗೆ ಬೇಸತ್ತ ಶಿಬಿರದವರೂ ಕೂಡ ಸಾಯಂಕಾಲ ಕಾಲ ಕಳೆಯಲು ಹೊರಟಿದ್ದರು. ಅವರು ಯಾವ ದಾರಿ ಹಿಡಿದರೋ ನನಗೆ ಗೊತ್ತಿಲ್ಲ. ನನ್ನ ದಾರಿಯ ಬಳಿಯಂತೂ ಯಾರೂ ಬರಲಿಲ್ಲ. ಕಾರುಗಳ ಓಡಾಟ ಬಿಟ್ಟು ಮತ್ತಾವ ಗಲಾಟೆಯೂ ಇರಲಿಲ್ಲ. ಕೆಲವು ವೇಳೆ ಪಕ್ಕದಲ್ಲೇ ಕಾರುಗಳು ವೇಗವಾಗಿ ಓಡುತ್ತಿದ್ದರೂ ಚಲಿಸುವ ಶಬ್ದವೇ ಕೇಳಿಸುತ್ತಿರಲಿಲ್ಲ. ಹಾಗೆಯೇ ಬಹಳ ಗಲಭೆಯ ಸ್ಥಳವಾದ ಚಾಂದೀ ಚೌಕದ ಬಳಿ ಬಂದೆ. ತಕ್ಷಣ ಎರಡು ಕಾರುಗಳು ಎದುರುಬದುರಾಗಿ ಬಂದವು. ಹಾದುಹೋಗುವ ಬದಲು ಸ್ವಲ್ಪಹೊತ್ತು ಸುಮ್ಮನೇ ನಿಂತುಬಿಟ್ಟವು. ಅಷ್ಟು ರಭಸವಾಗಿ ಬಂದ ಕಾರು ತಕ್ಷಣ ನಿಂತುಬಿಡಲು ಕಾರಣ ತಿಳಿಯಲಿಲ್ಲ. ಎಂಜಿನ್ನಿನ ಶಬ್ಧ ಕೇಳಿಸುತ್ತಲೇ ಇತ್ತು. ಕಾರು ಕೆಟ್ಟಿರಲಿಲ್ಲ. ನನಗೆ ಆಶ್ಚರ್ಯವಾಗಿ ಬೇಗ ಬೇಗ ಕಾರಿದ್ದೆಡೆಗೆ ಬಂದೆ. ಸ್ವಲ್ಪ ದೂರದಲ್ಲೇ ಕಾರಿನಲ್ಲಿದ್ದ ಸ್ತ್ರೀ ವ್ಯಕ್ತಿ ನಮ್ಮ ಶಿಬಿರದವಳೇ ಎಂದು ತಿಳಿದುಕೊಂಡೆ. ಪಕ್ಕದ ಕಾರಿನಲ್ಲಿ ಕುಳಿತಿದ್ದವನು ಶುದ್ಧ ಆಂಗ್ಲ ಉಡುಪುಗಳನ್ನು ಧರಿಸಿದ್ದ. ಮುಖ ಕೋಪಗೊಂಡಂತೆ ಭಾಸವಾಯಿತು. ಇನ್ನೊಂದು ಕಾರಿನಲ್ಲಿ ಕುಳಿತಿದ್ದ ಶಿಬಿರದವಳನ್ನೇ ದಿಟ್ಟಿಸಿ ನೋಡುತ್ತಿದ್ದ. ಮತ್ತೆ ಅವಳು ಕೂಡ ಬೆದರಿದವಳಂತೆ ಕಂಡಳು. ಇದರ ಜೊತೆಗೆ ಅವಳ ಪಕ್ಕದಲ್ಲಿ ಕುಳಿತಿದ್ದಾತ ಎದುರು ಕಾರಿನಲ್ಲಿ ಕುಳಿತಿದ್ದವಳನ್ನು ನೋಡಿ ಹೆದರಿ ತಲೆ ತಗ್ಗಿಸಿದ. ಈ ವಿಚಿತ್ರ ಸನ್ನಿವೇಶವನ್ನು ನೋಡಿ ನನಗೊಮ್ಮೆ ನಗು ಬಂದಿತು. ಹೆಂಗಸರು ತಮ್ಮ ಕಡೆಯವರಿಗೆ ತಿಳಿಯದಂತೆ ಮತ್ತೊಬ್ಬರೊಡನೆ ನಲಿದಾಡಲು ಹೇಗೆ ಹವಣಿಸುವರೋ ಹಾಗೆಯೆ ಗಂಡಸರೂ ಕೂಡ ತಮ್ಮವಳಿಗೆ ಕಾಣದಂತೆ ಇನ್ನೊಬ್ಬಳೊಡನೆ ತಿರುಗಾಡಲು ಅಪೇಕ್ಷಿಸುತ್ತಾರೆ. ಆದರೆ ಈಗ ಎರಡು ಕಡೆಯವರೂ ಅಕಸ್ಮಾತ್ ಭೇಟಿಯಾಗಿ ಏನೂ ಹೇಳಲು ತೋಚದೆ ಸುಮ್ಮನಿದ್ದು ಬಿಟ್ಟರು. ಒಬ್ಬರನ್ನೊಬ್ಬರು ಅನ್ನುವ ಹಾಗಿರಲಿಲ್ಲ. ಅದಕ್ಕಾಗಿಯೆ

ಎರಡು ಕಾರುಗಳೂ ಐದು ನಿಮಿಷ ತಟಕ್ಕನೆ ನಿಂತು ಮರುಕ್ಷಣ ಮುಂದೋಡಿತು. ಒಂದು ಹಿಂದಿನ ದಾರಿಯನ್ನೂ ಇನ್ನೊಂದು ಮುಂದಿನ ದಾರಿಯನ್ನೂ ಹಿಡಿಯಿತು. ಆದರೆ ಮುಂದಿನ ದಾರಿ ಹಿಡಿದ ಕಾರು ಕಣ್ಮರೆಯಾದ ಮೇಲೆ ಶಿಬಿರದವಳಿದ್ದ ಕಾರು ಅಲ್ಲೇ ನಿಂತಿತು. ಕಾರಿ ನಿಂದಿಳಿದು ಇಬ್ಬರೂ ಪಾರ್ಕಿನ ಕಲ್ಲುಬೆಂಚಿನ ಮೇಲೆ ಕುಳಿತರು. ಅವನು ಶಿಬಿರದವಳನ್ನು ಅತಿ ಹತ್ತಿರ ಕುಳ್ಳಿರಿಸಿಕೊಂಡು, "ನೋಡಿದೆಯಾ, ಈಗ ನೀನು ನನ್ನ ಕಾರಿನಲ್ಲಿದ್ದದ್ದನ್ನು ಅವನಂತೂ ನೋಡಿ ಆಗಿಹೋಯಿತು. ನಾಳೆ ನಿನ್ನನ್ನು ಹತ್ತಿರ ಸೇರಿಸುತ್ತಾನೋ ಇಲ್ಲವೋ. ಅದೂ ಅಲ್ಲದೆ ಈಗಾಗಲೇ ಕಾರಿನಲ್ಲಿ ಬೇರೆಯವಳ ಜತೆ ತಿರುಗಾಡುತ್ತಿದ್ದಾನೆ. ಆದ್ದರಿಂದ ಸುಖವಾಗಿ ನನ್ನ ಬಳಿ ಇದ್ದು ಬಿಡು. ಯಾವ ಯೋಚನೆಯೂ ಬೇಡ. ಶಿಬಿರವನ್ನು ಬಿಡಲು ಇಷ್ಟವಿಲ್ಲದಿದ್ದರೆ ಸ್ವಲ್ಪ ದಿವಸ ನಾನೇ ಅಲ್ಲಿಗೆ ಬರುತ್ತಿರುತ್ತೇನೆ. ಒಳಗಿನ ನಿನ್ನ ರೂಮಿಗೆ ಯಾರೂ ಬರದಂತೆ ನೋಡಿಕೊಳ್ಳಬೇಕು. ಇಷ್ಟರಮೇಲೆ ಯಾರಾದರೂ ಕುಚೋದ್ಯ ಮಾಡಿ ದರೆ ಶಿಬಿರವನ್ನೇ ಬಿಟ್ಟು ಬಿಟ್ಟರಾಯಿತು...." ಎಂದು ಎದುರಿಗಿದ್ದ ಹೂವನ್ನು ಕಿತ್ತು ಅವಳ ಕೈಗೆ ಕೊಟ್ಟನು. ಇವಳು ಮತ್ತೊಂದು ಹೂವನ್ನು ಕಿತ್ತು ಅವನ ಕೋಟಿಗೆ ಸಿಕ್ಕಿಸಿದಳು. ಮಾತಿಲ್ಲದ ಹೂವಿನಾಟ ದಿಂದಲೇ ಸಮ್ಮತಿ ಸೂಚಿಸಿದಳು. ಸ್ವಲ್ಪ ಹೊತ್ತು ಅಲ್ಲೇ ಗಾಳಿ ಸೇವನೆ ಮಾಡಿದರು. ತಂಗಾಳಿ ಬೀಸುತ್ತಿತ್ತು. ಇನ್ನು ಕತ್ತಲಾಯಿತೆಂದು ಹೊರಡಲನುವಾದರು. ಇಬ್ಬರೂ ಕಾರು ಹತ್ತಿದರು. ಪಕ್ಕ ಪಕ್ಕದಲ್ಲಿ ಕುಳಿತುಕೊಂಡ ತಕ್ಷಣ ಅವನು ಕಾರನ್ನು ವೇಗವಾಗಿ ಓಡಿಸಿದನು. ಜೋರಾದ ಗಾಳಿಗೆ ಸಿಲುಕಿ ಅವಳ ಮುಂಗುರುಳು ಇವನ ಗಲ್ಲದ ಮೇಲೆ ಆಟವಾಡುತ್ತಿತ್ತು. ಅದನ್ನು ಸರಿಪಡಿಸಿಕೊಳ್ಳಲು ತನ್ನ ಕೈಯನ್ನು ಅವನ ಗಲ್ಲಕ್ಕೆ ತಾಗಿಸುತ್ತಿದ್ದಳು. ಅಷ್ಟರಲ್ಲೇ ಇಬ್ಬರಲ್ಲೂ ವಿದ್ಯುತ್ಸಂಚಾರವಾಗು ತ್ತಿತ್ತು. ಅದಕ್ಕಿಂತಲೂ ವೇಗವಾಗಿ ಕಾರು ಓಡುತ್ತಿರುವಂತೆ ನನಗೆ ಕಂಡಿತು.

ನಿಜ; ಪ್ರತಿಯೊಬ್ಬರೂ ತಮ್ಮ ಮನಸ್ಸಿನಳುಕನ್ನು ಮುಚ್ಚಿಡಲು ಪ್ರಯತ್ನ ಮಾಡುವರು. ಆದರೂ ಗುಟ್ಟು ರಟ್ಟಾದರೆ ಮನಸ್ಸು ಕಲ್ಲಿನಂತಾ

ಗುವುದು. ಆಗ ಹಿಂದಿದ್ದ ಅವಮಾನ ಪ್ರವೃತ್ತಿಯೂ ಅಳಿಸಿಹೋಗು ವುದು. ಪಾಲಿಗೆ ಬಂದದ್ದೇ ಪಂಚಾಮೃತವೆನ್ನುವಂತೆ ಕೈಗೆ ಸಿಕ್ಕಿದವನ ಮಾತಿಗೇ ಬೆಲೆ ಕೊಟ್ಟು ಅವನ ಹಿಂದೆ ಓಡುವರು. ಅಂತೆಯೆ ನಮ್ಮ ಶಿಬಿರದವಳೂ ಆ ಮಾಯಾಜಾಲಕ್ಕೆ ಸಿಕ್ಕಿರಬೇಕು. ಅವಳು ಇಬ್ಬರನ್ನೂ ಒಂದೇ ಸಮನೆ ಪ್ರೀತಿಸಿರಬಹುದು. ಆದರೆ ಆ ಇಬ್ಬರಲ್ಲೇ ಪೈಪೋಟಿ ಪ್ರಾರಂಭವಾಗಿ ಒಬ್ಬಾತ ಇನ್ನೊಬ್ಬನಿಗಿಂತಲೂ ಬೇಗ ಬಂದು ಅವಳನ್ನು ಕರೆದುಕೊಂಡು ಹೋಗಿರಬಹುದು. ನಡೆದು ಬರುವವನಿಗಿಂತ ಕುದುರೆಯ ಮೇಲೆ ಬರುವವನು ತನ್ನ ಪ್ರೇಯಸಿಯನ್ನು ಬೇಗ ಭೇಟಿಯಾಗುವನು. ಅವನಿಗಿಂತಲೂ ಕಾರಿನಲ್ಲಿ ಬರುವವನು ಇನ್ನೂ ಬೇಗ ತನ್ನ ಪ್ರೇಯಸಿ ಯನ್ನು ಥಂಗನೆ ಹಿಡಿದೆಬ್ಬಿಸಿ ನಾಗಾಲೋಟದಲ್ಲಿ ಕರೆದುಕೊಂಡು ಹೋಗುವನು. ಹಾಗಿರುವಾಗ ನಾಲ್ಕು ಜನರನ್ನು ಪ್ರೀತಿಸುವ ಹುಡುಗಿಯ ಪಾಡೇನು! ಒಮ್ಮೆ ಆ ನಾಲ್ಕು ಜನರೂ ಒಟ್ಟಿಗೆ ಬಂದು ತಮ್ಮಲ್ಲಿ ತಾವೇ ಹೊಡೆದಾಟ ಆರಂಭಿಸಿಬಿಟ್ಟರೆ ಒಂಟಿಯಾಗಿ ಒಳಗಿರು ವವಳ ಸ್ಥಿತಿಯೇನು! ಅಂತೂ ನಮ್ಮ ಶಿಬಿರದವರು ಅಪಾಯಕರವಾದ ಜೀವನ ನಡೆಸುತ್ತಿದ್ದಾರೆನ್ನುವುದರಲ್ಲಿ ಸಂಶಯವಿಲ್ಲ.

ಹೀಗೆ ಕೆಲಕಾಲ ಕಳೆದಮೇಲೆ ಶಿಬಿರದವರಲ್ಲಿ ಏನೊ ಒಂದು ಸಂಶಯದ ವಲಯ ಏರ್ಪಟ್ಟಿತು. ಯಾವ ಕೆಲಸ ಮಾಡಿದರೂ ಮನಸ್ಸಿ ಲ್ಲದೆ ಮಾಡುತ್ತಿರುವಂತೆ ಕಂಡಿತು. ಒಂದೊಂದು ದಿನ ಅತಿಯಾಗಿ ಶೃಂಗರಿಸಿಕೊಂಡು ಮಾರನೆಯ ದಿನ ತಲೆ ಕೆದರಿ ಕುಳಿತುಬಿಡುತ್ತಿದ್ದರು. ಕೆಲವು ದಿನ ಸಾಯಂಕಾಲ ಯಾರನ್ನೋ ಕಾಯುವಂತೆ ಗಲ್ಲದ ಮೇಲೆ ಕೈಯಿಟ್ಟು ಯೋಚಿಸುತ್ತಿದ್ದರು. ದೂರದಿಂದ ನೋಡುವವರಿಗೆ ಚಲನೆಯೇ ಇಲ್ಲದ ಅವರ ಆ ಭಂಗಿ ಶಿಲಾಬಾಲಕಿಯರನ್ನು ಹೋಲುತ್ತಿತ್ತು. ಮತ್ತೆ ಇದ್ದಕಿದ್ದಂತೆ ಎಚ್ಚೆತ್ತು ತಮ್ಮ ರೂಮಿಗೆ ಹೋಗಿ ಹಾಸಿಗೆಯ ಮೇಲೆ ಬಿದ್ದುಬಿಡುತ್ತಿದ್ದರು. ಕೆಲವರಂತೂ ದಿಂಬಿನ ಮರೆಯಲ್ಲಿ ಬಿಕ್ಕಿ ಬಿಕ್ಕಿ ಅಳತೊಡಗಿದ್ದರು. ಅಂತೂ ಶಿಬಿರದ ವಾತಾವರಣ ಬಲು ವ್ಯತ್ಯಾಸ ವಾದಂತೆ ನನಗೆ ಕಂಡಿತು.

ಒಂದು ದಿನ ಸಾಯಂಕಾಲ ನಾನು ಹಳೆ ದೆಹಲಿಯಲ್ಲಿ ತಿರುಗಾಡಲು ಹೊರಟೆ. ಮೊಗಲ್ ಸಾಮ್ರಾಜ್ಯದ ಪೀಠಗಳು ಮೌನ ತಾಳಿ ಶತಮಾನಗಳ ನೆನಪು ತರುತ್ತಿತ್ತು. ಎಷ್ಟು ದೂರ ಹಾಗೆಯೆ ನಡೆದೆನೊ ಗೊತ್ತಿಲ್ಲ. ಇನ್ನೂ ದೂರದಿಂದ ಯಾವುದೊ ಒಂದು ಕೀರಲು ಧ್ವನಿ ಕೇಳಿಸಿತು. ಅದು ಅಳುವ ಧ್ವನಿಯೇ ಇರಬೇಕೆಂದು ನಿಶ್ಚಯಿಸಿದೆ. ಹತ್ತಿರ ಬರ ಬರುತ್ತಾ ಧ್ವನಿಯ ಏರಿಳಿತ ಮತ್ತಷ್ಟು ಜೋರಾಗಿ ಕೇಳಿಸತೊಡಗಿತು. ಅಷ್ಟಾಗಿ ಜನಸಂಚಾರವಿಲ್ಲದ ಆ ಸ್ಥಳದಲ್ಲಿ ಅಳುವ ವ್ಯಕ್ತಿ ಯಾರಿರಬಹುದೆಂದು ತಿಳಿಯಲು ಕಷ್ಟವಾಯಿತು. ಮತ್ತೆ ಆ ಧ್ವನಿ ಸ್ತ್ರೀಯ ಧ್ವನಿಯನ್ನೇ ಹೋಲುತ್ತಿತ್ತು. ನನಗೆ ಹಿಂದಿನ ಜ್ಞಾಪಕ ಬಂದಿತು. ಅಂದು ಕಂಡ ಆ ಮುಸ್ಲಿಮ್ ಮಹಿಳೆಯ ದೃಶ್ಯ ಎದುರಿಗೆ ನಿಂತಂತಾಯಿತು. ಅವಳು ಇಲ್ಲಿಗೆ ಬರಲು ಹೇಗೆ ಸಾಧ್ಯ? ಪಾಪ; ಅಲ್ಲೇ ಇರಬೇಕು. ತನ್ನ ಕಥೆಗೆ ಮರುಗಿದ ವ್ಯಕ್ತಿಯೂ ಕೈ ಬಿಟ್ಟನಲ್ಲಾ ಎಂದುಕೊಳ್ಳುತ್ತಿರಬಹುದು. ಒಂದು ಪಕ್ಷ ನಾನು ಅಲ್ಲೇ ಉಳಿದುಕೊಂಡಿದ್ದರೂ ಏನು ತಾನೆ ಮಾಡಲು ಸಾಧ್ಯವಾಗುತ್ತಿತ್ತು? ಪಟೇಲರ ಮಗನನ್ನು ಎದುರಿಸುವ ಶಕ್ತಿ ನನ್ನಲ್ಲಿದ್ದಿತೆ? ಆ ಶಕ್ತಿ ಇದ್ದರೂ ಒಬ್ಬಂಟಿಗನಾದ ನನಗೆ ಅವನನ್ನೇ ಕಾಯ್ದುಕೊಂಡಿರಲು ಕಾಲವಿರಲಿಲ್ಲ. ಅವಳ ಬಳಿ ಹೋಗಲು ನಾನಿಲ್ಲದ ಸಮಯವನ್ನೇ ಅವನು ಹೊಂಚುಕಾಯುತ್ತಿದ್ದನು. ಅದಕ್ಕೆ ತಕ್ಕಂತೆ ನನಗೆ ನಿಮಿಷವೆಣಿಸುವಷ್ಟು ಕೆಲಸವಿರುತ್ತಿತ್ತು. ಒಂದು ವೇಳೆ ಪಟೇಲರ ಮಗ ಅವಳನ್ನು ಪೀಡಿಸಿ ಅತ್ಯಾಚಾರ ನಡೆಸಿದ್ದರೂ ಅದು ಆ ಮುಸ್ಲಿಮ್ ಮಹಿಳೆಯ ತಪ್ಪಲ್ಲ. ಇಂದಿಗೂ ಅವಳ ಮೇಲೆ ನಾನು ಅಚ್ಚಳಿಯದ ವಿಶ್ವಾಸವಿಟ್ಟಿದ್ದೇನೆ. ಅವಳಿಗೆ ಒಳ್ಳೆಯದಾಗಲಿ ಎಂದು ಪ್ರತಿದಿನ ಪ್ರಾರ್ಥಿಸುತ್ತೇನೆ. ಆದರಿಂದ ಅಕಸ್ಮಾತ್ ಪಟೇಲರ ಮಗ ಒಳ್ಳೆಯವನಾಗಿ ಅವಳ ತಂಟೆಗೆ ಬರದಿರಬಹುದು. ಆದರೂ ಅವಳ ಜೀವನ ಹೇಗೆ ತಾನೆ ಸುಗಮವಾದೀತು? ಅತ್ತ ತನ್ನ ದೇಶಕ್ಕೆ ಹೋಗವರೆ ತನ್ನನ್ನು ಪ್ರೀತಿಸುತ್ತಿದ್ದ ವ್ಯಕ್ತಿ ಎಂದೋ ಕಾಲವಾಗಿ ಹೋಗಿದ್ದಾನೆ. ಒಂದು ವೇಳೆ ಆತನ ಗೋರಿಯನ್ನಾದರೂ ನೋಡಿ ತೃಪ್ತಿಪಡೋಣವೆಂದರೆ ಆತ ಎಲ್ಲೋ

ಯಾರಿಗೂ ಕಾಣದ ಸ್ಥಳದಲ್ಲಿ ಬಿದ್ದು ಪ್ರಾಣಬಿಟ್ಟಿದ್ದಾನೆ. ಅಂತೂ ಅವಳ ಮನಸ್ಸಿಗೆ ಸ್ವಲ್ಪವಾದರೂ ಶಾಂತಿ ಸಿಕ್ಕಿ ಭಗ್ನಹೃದಯ ಒಡೆಯದಿರಲೆಂದೇ ನನ್ನ ಪ್ರಾರ್ಥನೆ. ಎಷ್ಟೋ ಬಾರಿ ಈ ಹಳೆಯ ನೆನಪುಗಳು ನನ್ನ ಸ್ಮೃತಿ ಪಟಲದಲ್ಲಿ ಹಾದುಹೋಗಿ ಯೋಗ್ಯ ಉತ್ತರ ದೊರಕಿಸದೆ ಪೇಚಾಟ ಕ್ಕೀಡುಮಾಡಿದೆ. ಹಾಗೆಯೆ ಮತ್ತೊಂದು ನೆನಪಾಗಲು ಕಾದಿದೆಯೋ ಏನೊ ಅಂದುಕೊಂಡು ಮುನ್ನಡೆದೆ.

ಹೌದು; ಅಳುತ್ತಿದ್ದುದು ಸ್ತ್ರೀ ವ್ಯಕ್ತಿಯೇ ಆಗಿತ್ತು. ಅಳುವಿನ ಮಧ್ಯೆ ಯಾವ ಮಾತೂ ಇರಲಿಲ್ಲ. ಮರೆಯಾಗಿ ನಿಂತು ಎಷ್ಟು ಹೊತ್ತು ಕಾದರೂ ಬರಿಯ ಅಳು ಮಾತ್ರ ಕೇಳಿಸುತ್ತಿತ್ತು. ವಿಷಯ ತಿಳಿದು ಕೊಳ್ಳಲು ಯಾವ ಸಾಧನವೂ ಸಿಗದಿದ್ದುದರಿಂದ ಅವಳನ್ನೇ ನೇರವಾಗಿ ಪ್ರಶ್ನಿಸಿಬಿಡೋಣವೆಂದು ಮುಂದೆ ಬಂದೆ.

ತಕ್ಷಣ, "ನಿನ್ನ ಹೆಸರೇನಮ್ಮ?" ಎಂದು ಕೇಳಿದೆ. ಹಿಂದೆ ನಾನು ಯಾರನ್ನೂ ಹೆಸರು ಕೇಳುವ ಗೋಜಿಗೆ ಹೋಗಿರಲಿಲ್ಲ. ಅಂದು ರಾಜ ಪುತ್ರಸ್ಥಾನದ ಶಿಬಿರದಲ್ಲಿ ನನ್ನ ಮನಸ್ಸು ಕರಗಿಸಿದ ಆ ಮುಸ್ಲಿಮ್ ಮಹಿಳೆಯ ಹೆಸರೂ ನನಗೆ ತಿಳಿಯದು. ಮೊದಲಿನಿಂದಲೂ ವ್ಯಕ್ತಿಯ ಹೆಸರಿಗಿಂತಲೂ ವ್ಯಕ್ತಿತ್ವಕ್ಕೆ ಹೆಚ್ಚು ಬೆಲೆ ಕೊಡುತ್ತಿದ್ದೆ. ಅಂತೆಯೆ ಅವರ ಕಷ್ಟ ಸುಖಗಳನ್ನು ನೇರವಾಗಿ ವಿಚಾರಿಸಿಬಿಡುತ್ತಿದೆ. ಆದರೆ ಇಂದೇಕೋ ಅಳುತ್ತಿದ್ದವಳನ್ನು ಕಂಡ ತಕ್ಷಣ ಹೆಸರೇನೆಂದು ಕೇಳಿಬಿಟ್ಟೆ. ಅದಕ್ಕೆ ಕಾರಣ ಆಮೇಲೆ ತಿಳಿಯಿತು. ಆಕೆ ನಿಜವಾಗಿಯೂ ನನ್ನ ಹೆಂಡತಿ ಯಂತೆಯೆ ಕಂಡಳು. ನೆಲದ ಮೇಲೆ ಆಯಾಸಗೊಂಡು ಬಿದ್ದುಬಿಟ್ಟಿದ್ದಳು. ಕಾಲಿಗೆ ಬಲವಾದ ಪೆಟ್ಟು ಬಿದ್ದಿತ್ತು. ಮೊಣಕಾಲ ಮೇಲೆ ಗಾಯ ಉಬ್ಬಿತ್ತು. ಸೀರೆಯ ಅಂಚು ಹರಿದಿತ್ತು. ಕೈಕಾಲು ಚಾಚಿಕೊಂಡು ಆಕಾಶವನ್ನೇ ದಿಟ್ಟಿಸಿ ನೋಡುತ್ತ ಅವ್ಯವಸ್ಥಿತವಾಗಿ ಮಲಗಿದ್ದಳು. ಹೃದಯದ ಮೂಲೆಯಲ್ಲಿ ಮಾಯವಾಗಿದ್ದ ನನ್ನವಳ ಚಿತ್ರ ಎದುರಿಗೇ ಮಲಗಿದ್ದಂತೆ ಭಾಸವಾಯಿತು. ಅವಳು ಅಳುತ್ತಿದ್ದರೂ ಅವಳ ಮುಖ

ಕಂಡೊಡನೆ ಮನಸ್ಸಿನಲ್ಲಿ ವಿಶ್ವಾಸ ಉಕ್ಕಿ ಬಂದಿತು. ಬಹಳ ದಿನ ಗಳಿಂದಲೂ ಅಡಗಿಹೋಗಿದ್ದ ನನ್ನವಳ ನೆನವು ಬಂದು ಆತ್ಮೀಯತೆ ಯಿಂದ ಅವಳನ್ನು ಪ್ರಶ್ನಿಸಿದೆ.

ಆಗಲೇ ಸೂರ್ಯ ಮುಳುಗುತ್ತಲಿದ್ದ. ಪಶ್ಚಿಮ ದಿಕ್ಕಿನಲ್ಲಿ ಕೆಂಪು ಬಣ್ಣವು ಆವರಿಸಿತ್ತು. ನೆಲದ ಮೇಲೆ ಮಲಗಿದ್ದಾಕೆ ಅದಕ್ಕಿಂತಲೂ ಕೆಂಪಗೆ ಕಂಡಳು. ಚಂದ್ರ ಉದಯಿಸಿಬಿಟ್ಟಿದ್ದಾನೆಂದು ಹೆದರಿ ಸೂರ್ಯ ಬೇಗನೆ ಮುಳುಗಿಬಿಟ್ಟ!

"ನನ್ನ ಹೆಸರು ಆಶಾ. ಹೆಸರಿಗೆ ತಕ್ಕಂತೆ ಎಲ್ಲರೂ ನನಗಾಗಿ ಆಶೆಪಡುತ್ತಾರೆ. ಅದಕ್ಕಾಗಿಯೆ ಈ ಪಾಡು ಬಂತು" ಎಂದಳು. ಪಾಪ; ಗಾಯದಿಂದ ರಕ್ತ ಒಂದೇ ಸಮನೆ ಹರಿಯುತ್ತಿತ್ತು. ರಕ್ತ ನಿಲ್ಲುವಂತೆ ಶುಶ್ರೂಷೆ ಮಾಡಿ ಎತ್ತಿ ಕೂಡಿಸಿದೆ ಕುಳಿತುಕೊಂಡರೂ ನಿಶ್ಶಕ್ತಿಯಿಂದ ಬೀಳುವಂತಾಗುತ್ತಿತ್ತು. ಕಡೆಗೆ ನನ್ನ ಎದೆಗೆ ಒರಗಿಸಿಕೊಂಡು ಕೂಡಿಸಿದೆ. ಅವಳ ದೈನ್ಯಭಾವ ನನ್ನ ಮುಖವನ್ನು ಕಳೆಗುಂದಿಸಿತು. ದೈನ್ಯತೆಯಿಂದ ಅವಳ ಮುಖ ಮತ್ತಷ್ಟು ಸುಂದರವಾಗಿ ಕಂಡಿತು. ಕಣ್ಣಿಗೆ ಬಿದ್ದ ಕೂದಲನ್ನು ಮೇಲಕ್ಕೆ ಮಾಡಿದೆ. ಮತ್ತೊಮ್ಮೆ ಕಣ್ಣಗಲಿಸಿ, "ಹೌದು; ನನ್ನ ಹೆಸರು ಆಶಾ"ಎಂದಳು. "ಈ ರಾತ್ರಿಯಲ್ಲಿ ಒಬ್ಬಳೇ ಹೀಗೆ ಬಿದ್ದಿರಲು ಕಾರಣವೇನು? ನೀನಾಗಿಯೇ ಎಡವಿ ಗಾಯ ಮಾಡಿ ಕೊಂಡೆಯೋ ಅಥವಾ ಯಾರಾದರೂ ನಿನ್ನ ಮೇಲೆ ಕೈ ಮಾಡಲು ಬಂದು ಹಿಂಸಿಸಿದರೇ? ಊರಿಗೆ ದೂರವಾದ ಈ ಪ್ರದೇಶದಲ್ಲಿ ನಿನ್ನೊಬ್ಬಳನ್ನೇ ದೂಡಿ ಓಡಿರುವ ಪಾಪಿ ಯಾರು?...."ಎಂದು ನಾನಾಗಿಯೇ ಕೇಳಿದೆ. "ಅಯ್ಯೊ, ಆ ಮಾತನ್ನೇಕಾಡುವಿರಿ? ಆದದ್ದು ಆಗಿಹೋಯಿತು"ಎಂದು ಗಟ್ಟಿಯಾಗಿ ನನ್ನ ಕೈಗಳೆರಡನ್ನೂ ಹಿಡಿದುಕೊಂಡಳು. "ಏಕೆ ಇಷ್ಟು ಹೆದರುವೆ? ನಿನ್ನ ದ್ವೇಷಿಗಳು ಹತ್ತಿರದಲ್ಲೇ ಇರಬಹುದೆಂದು ಭಯಪಡು ತ್ತಿರುವೆಯಾ? ಅಥವಾ ನಡೆದು ಹೋದ ಸಂಗತಿಯನ್ನು ಹೇಳಲು ಅವಮಾನವೇ? ಹಾಗಿದ್ದರೆ ನಮ್ಮ ಶಿಬಿರದ ಬಳಿ ಹೋಗುವ, ಬಾ,

ಅಲ್ಲೇ ಹೇಳುವಿಯಂತೆ." ಎಂದಾಗ ಆಶಾ ಹುಚ್ಚಿಯಂತೆ ನಕ್ಕು ಕೈಗಳನ್ನು ಬಿಡಿಸಿಕೊಂಡು ಎದುರಿನ ಬಂಡೆಯ ಮೇಲೆ ಕುಳಿತಳು. ಈಗ ವೀರ ಯುವತಿಯಂತೆ ಕಂಡಳು. ಮೈ ಮೇಲಿನ ಗಾಯಗಳು ನೋವನ್ನುಂಟು ಮಾಡುತ್ತಿದ್ದರೂ ಲಕ್ಷಿಸದೆ ನನ್ನ ಮುಖವನ್ನು ನೋಡಿ ನಕ್ಕಳು. ಏಕೆ ನಕ್ಕಳೋ ನನಗೆ ತಿಳಿಯದು. ಮೂರು ನಿಮಿಷದ ಹಿಂದೆ ಅಳುತ್ತಿದ್ದ ವಳು ಈಗ ಇದ್ದಕಿದ್ದಂತೆ ನಗುವುದಕ್ಕೆ ಕಾರಣವೇನು ?

ಹೆಂಗಸರ ಸ್ವಭಾವವೇ ಹಾಗೆ. ದುಃಖ ಬಂದಾಗ ಒಂದೇ ಸಮನೆ ಅಳುವರು. ಅಕಸ್ಮಾತ್ ಒಂದು ಆಶಾಕಿರಣ ಕಂಡರೆ ಹಿಂದಿನದೆಲ್ಲ ಮರೆತು ನಕ್ಕುಬಿಡುವರು. ತಕ್ಷಣ ಎದುರಿಗಿದ್ದವರನ್ನು ಪೂರ್ಣವಾಗಿ ನಂಬಿ ಬಿಡುವರು. ಇಂದಿನ ಸುಖ ಘಳಿಗೆಯಲ್ಲಿ ನಾಳೆಯ ದುಃಖವನ್ನು ಮರೆತುಬಿಡುವಳು. ಸ್ವಲ್ಪ ನಿಮಿಷಗಳ ನಂತರ ಆಶಾ ನಗುವನ್ನು ನಿಲ್ಲಿಸಿ ನನ್ನ ಮುಖವನ್ನೇ ದಿಟ್ಟಿಸಿ ನೋಡುತ್ತಾ, "ನಿಮ್ಮ ಪರಿಚಯ ನನಗಿದೆ. ಶಿಬಿರದ ಹೆಸರು ಜ್ಞಾಪಕವಿಲ್ಲ. ಆ ಶಿಬಿರದ ಮುಖ್ಯಸ್ಥರಲ್ಲವೇ ನೀವು? ಇರಲಿ; ನನ್ನ ಪರಿಚಯವಿರಲು ನಿಮಗೆ ಅವಕಾಶವಿದ್ದಿರಲಾರದು" ಎಂದಳು. "ಅದಕ್ಕಾಗಿಯೆ ನಿನ್ನನ್ನು ನಾನು ಪ್ರಶ್ನಿಸುತ್ತಿದ್ದೇನೆ. ಕೆಲವು ನಿಮಿಷಗಳ ಹಿಂದೆ ನಿನ್ನ ಮೇಲೆ ಏನೊ ಅಪಘಾತ ನಡೆದಿದೆ. ಅದನ್ನು ಹೇಳಲೇ ಇಲ್ಲವಲ್ಲ " ಎಂದು ನಾನು ಆಶಾಳನ್ನು ಎಚ್ಚರಿಸಿದೆ.

"ನನ್ನ ಕಥೆ ಹೇಳಲು ಏನೂ ಅಭ್ಯಂತರವಿಲ್ಲ. ಈಗತಾನೆ ನನ್ನನ್ನು ಒದ್ದು ಹೊರಟವನು ಹತ್ತಿರದಲ್ಲೆಲ್ಲೂ ಇಲ್ಲವೆಂಬುದು ಚನ್ನಾಗಿ ಗೊತ್ತಿದೆ. ನನ್ನ ಮೇಲೆ ಅವನು ಬಲು ಬೇಸರಪಟ್ಟು ಹೊರಟುಹೋಗಿರಬೇಕು.

ಮೊನ್ನೆಯ ದಿನ ನಾನು ಮಸೀದಿ ಬಳಿ ಹೋಗುತ್ತಿದ್ದಾಗ ಮಹಮದ್ ನನ್ನನ್ನು ಭೇಟಿಯಾದ. ನಾನು ಮೊದಲ ಬಾರಿ ಈ ಊರಿಗೆ ಬಂದಾಗ ನನಗೆ ಅತ್ಯಂತ ಸಹಾಯ ಮಾಡಿದವನೆಂದರೆ ಮಹಮದ್ ಒಬ್ಬನೇ. ಅವನು ಮಸೀದಿಯಲ್ಲಿ ಚಿಕ್ಕ ಕೆಲಸಗಾರನಾಗಿದ್ದ. ಹೇಗಿದ್ದರೂ ಒಂಟಿಯಾಗಿ ಜೀವನ ನಡೆಸುತ್ತಿರುವವನಿಗೆ ಬೇರೆಯ

ಯೋಚನೆ ಏಕೆಂದು ದೇವರ ಸನ್ನಿಧಿಯಲ್ಲೇ ಕಾಲಕಳೆಯಲು ಪಣ ತೊಟ್ಟಿದ್ದ. ಬರುವ ಸ್ವಲ್ಪ ಸಂಪಾದನೆಯಲ್ಲೇ ತೃಪ್ತಿಹೊಂದಿದ್ದ. ಯುವಕ ನಾಗಿದ್ದರೂ ದುಡುಕುತನವಿರಲಿಲ್ಲ. ಆದಷ್ಟು ಮತ್ತೊಬ್ಬರಿಗೆ ಸಹಾಯ ಮಾಡಬೇಕೆಂಬುದೇ ಅವನ ದಿನಚರಿಯಾಗಿತ್ತು. ತನ್ನ ಕಡೆಯವರು ಎಲ್ಲಿಯಾದರೂ ಗಲಭೆಮಾಡಿದರೆ ಮರುಕಪಟ್ಟು ಅದನ್ನು ತಡೆಯಲು ಪ್ರಯತ್ನಿಸುತ್ತಿದ್ದನು. ಎಷ್ಟೋ ವೇಳೆ ಮಧ್ಯರಾತ್ರಿಯಲ್ಲೆದ್ದು ಬೆಳ ಗಾಗುವ ದುರಂತವನ್ನು ನಿಲ್ಲಿಸಿಬಿಡುತ್ತಿದ್ದನು. ಹಿಂದೂಗಳು ಮುಸ್ಲಿಮ ರೊಡನೆ ಜಗಳವಾಡುವುದನ್ನು ಬಿಟ್ಟರೆ ಸಾಲದು; ತಮ್ಮ ತಮ್ಮಲ್ಲಿಯೆ ಪ್ರತಿದಿನವೂ ನಡೆಯುತ್ತಿರುವ ಕಚ್ಚಾಟವನ್ನು ಪೂರ್ಣ ತ್ಯಜಿಸಬೇಕೆಂದು ಮಹಮುದ್ ಅಭಿಪ್ರಾಯ ಪಡುತ್ತಿದ್ದನು. ಅಂತೆಯೆ ನನ್ನನ್ನು ನಿರ್ಮ ಲಾಂತಃಕರಣದಿಂದ ನೋಡುತ್ತಿದ್ದನು. ತಾನಾಗಿಯೆ ನನ್ನನ್ನು ಅನಾ ಥಾಲಯವೊಂದರಲ್ಲಿ ಕೆಲಸಮಾಡಲು ಏರ್ಪಡಿಸಿದ್ದನು. ಸಮಾಜದಲ್ಲಿ ಮರ್ಯಾದೆಯಾಗಿ ಜೀವನ ನಡೆಸಲು ದಾರಿ ತೋರಿಸಿದ್ದನು. ನಿರಾಶ್ರಿತ ಳಾಗಿ ಬಂದರೂ ನಿರಾಶ್ರಿತಳಾಗದಂತೆ ಸಹಾಯ ಮಾಡಿದನು. ಆ ಉಪ ಕಾರವನ್ನು ನಾನು ಕೂಡ ಮರೆತಿರಲಿಲ್ಲ. ಪ್ರತಿದಿನವೂ ಅವನನ್ನು ಭೇಟಿಯಾಗಿ ಮಾತನಾಡುತ್ತಿದ್ದೆ. ಅವನು ಕೂಡ ನನ್ನನ್ನೇ ಕಾಯು ತ್ತಿದ್ದು ಕ್ಷೇಮ ಸಮಾಚಾರವನ್ನು ವಿಚಾರಿಸುತ್ತಿದ್ದ. ಇಬ್ಬರಲ್ಲೂ ವಿಶ್ವಾಸ ಬೆಳೆಯಿತು. ಅದೇ ಅನುರಾಗವಾಗಿ ಪರಿಣಮಿಸಿತು. ದೇವರೇ ತನಗೆ ವರ ಕರುಣಿಸಿದ್ದಾನೆಂದು ಮಹಮುದ್ ಮನಸ್ಸಿನಲ್ಲೇ ಸಂತೋಷಪಟ್ಟನು. ನನಗೂ ಅದೇ ರೀತಿಯ ಭಾವನೆಯಿದ್ದಿತು.

ಕಾಲ ಕಳೆದಂತೆ ನಾನಿದ್ದ ಅನಾಥಾಲಯ ದೊಡ್ಡದಾಗುತ್ತ ಬಂತು. ಎಲ್ಲೆಲ್ಲಿ ನೋಡಿದರೂ ಅನಾಥಮಕ್ಕಳ ತಂಡವೇರ್ಪಟ್ಟಿತು. ತಾಯಿತಂದೆ ಗಳನ್ನು ಕಾಣದ ಆ ಮಕ್ಕಳಿಗೆ ನಾವೇ ಮಾತೆಯರಾದೆವು. ನಾಲ್ಕು ಐದು ವರ್ಷದ ಮಕ್ಕಳಂತೂ ನನ್ನನ್ನು ಬಿಟ್ಟು ಕದಲುತ್ತಿರಲಿಲ್ಲ. ಸುತ್ತಲೂ ಕೂಡಿಸಿಕೊಂಡು ಎಷ್ಟೋ ಕಥೆಗಳನ್ನು ಹೇಳುತ್ತಿದ್ದೆ. ಮಕ್ಕಳೊಡನೆ ಮಕ್ಕಳಾಗಿ ವರ್ತಿಸುತ್ತಿದ್ದೆ. ಪ್ರತಿದಿನವೂ ಅವುಗಳನ್ನೆತ್ತಿಕೊಂಡು

ಮುದ್ದಾಡುವುದರಲ್ಲೇ ಕಾಲ ಕಳೆದುಹೋಗುತ್ತಿತ್ತು. ಒಂದೊಂದು ವೇಳೆ ನನ್ನ ಮನಸ್ಸು ಬಿಗಿ ಹಿಡಿಯುತ್ತಿತ್ತು. ಸುಂದರ ಯುವತಿಯಾದ ನನಗೂ ಆ ತೆರದ ಮುದ್ದುಮಗುವಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದುಕೊಳ್ಳುತ್ತಿದ್ದೆ. ಮರುಕ್ಷಣ ಅದು ಸಾಧ್ಯವಿಲ್ಲ ಎಂದು ಒಳಮನಸ್ಸು ಹೇಳಿತು. ನಿಜ; ನಾನಿದ್ದ ಆ ಸಣ್ಣಕೆಲಸದಲ್ಲಿ ದೊಡ್ಡಮನುಷ್ಯನ ಕೈಹಿಡಿಯುವ ಯೋಗ ಎಲ್ಲಿ ಬರೆದಿತ್ತು!

ಮೂರು ನಾಲ್ಕು ವರ್ಷಗಳು ಕಳೆದ ಮೇಲೆ ಅನಾಥಾಲಯದ ಮಕ್ಕಳು ನನ್ನ ಬಳಿ ಅಷ್ಟಾಗಿ ಬರುತ್ತಿರಲಿಲ್ಲ. ತಮ್ಮ ಆಟಪಾಟಗಳಲ್ಲೇ ಕಾಲ ಕಳೆಯುತ್ತಿದ್ದರು. ಒಂದು ದಿನ ಹನ್ನೆರಡು ವರ್ಷದ ದಿನೇಶ್ ಸ್ಕೂಲಿಗೆ ಹೋಗಿದ್ದಾಗ ಯಾರೋ ನಾಲ್ಕುಜನ ಯುವಕರು ನಮ್ಮ ಆಲಯದ ವಿಳಾಸ ತಿಳಿದುಕೊಂಡರಂತೆ. ಮತ್ತೆ ನನ್ನ ವಿಷಯವನ್ನೂ ವಿಚಾರಿಸಿದರಂತೆ. ಏನೂ ತಿಳಿಯದ ದಿನೇಶ್ ತನಗೆ ತಿಳಿದಮಟ್ಟಿಗೆ ಉತ್ತರಕೊಟ್ಟಿದ್ದನು.

ಮಾರನೆಯ ದಿನವೇ ಆ ನಾಲ್ಕುಜನರು ನನ್ನ ಬಳಿ ಬಂದರು. ಏನಾದರೂ ಮಾಡಿ ನನ್ನನ್ನು ಅವರ ಬಲೆಗೆಳೆದುಕೊಳ್ಳಲು ಪ್ರಯತ್ನಪಟ್ಟರು. ನೋಡುವುದಕ್ಕೆ ದೊಡ್ಡಮನುಷ್ಯರ ಮಕ್ಕಳಂತಿದ್ದರು. ಒಮ್ಮೆ ಒಪ್ಪಿಬಿಡೋಣವೇ ಎಂದು ಮನಸ್ಸು ಕೇಳಿತು ತಕ್ಷಣ ಮಹಮದ್‌ನ ನೆನಪು ಬಂದಿತು. ಮಹಮದ್ ಒಳ್ಳೆಯವನಾದರೂ ಬಡವ. ಆದರೆ ಇಂದು ನನ್ನ ಕಾಲಿಗೆ ಬೀಳುತ್ತಿರುವ ವ್ಯಕ್ತಿಗಳು ದೊಡ್ಡಮನುಷ್ಯರು. ಅವರಲ್ಲಿ ಯಾರನ್ನಾದರೂ ವರಿಸಿ ಸುಖಬಾಳುವೆ ಸಾಗಿಸಿದರೆ ಎಷ್ಟು ಚೆನ್ನಾಗಿರುತ್ತದೆ! ನಾಳೆಯ ದಿನ ನನ್ನ ಮಕ್ಕಳು ಸುಂದರವಾದ ಉಡುವು ಧರಿಸಿ ನಲಿದಾಡಿದರೆ ಎಷ್ಟು ಆನಂದ!! ಅದರ ಬದಲು ಬಡವನ ಕೈ ಹಿಡಿದರೆ ಕಡೆಯ ತನಕವೂ ದುಃಖದಲ್ಲೇ ಮುಳುಗಿರಬೇಕು. ಈ ಪ್ರಶ್ನೆ ಬಂದದ್ದು ಮಹಮದನಿಗಾಗಿಯೇ ಅಲ್ಲವೇ? ಮಹಮದ್ ನನಗೆ ನಿಜವಾಗಿಯೂ ಮೊದಲು ಸಹಾಯ ಮಾಡದಿದ್ದರೆ ನಾನು ಮನುಷ್ಯಳಾಗುವು

ದಕ್ಕೇ ಆಸ್ಪದವಿರಲಿಲ್ಲ. ಆದರೆ ಅದಕ್ಕಾಗಿ ಅವನ ಕೈ ಹಿಡಿಯಲೇ ಬೇಕೇ? ಅವನನ್ನು ಕೈ ಹಿಡಿಯದ ಮಾತ್ರಕ್ಕೆ ಮರೆತುಬಿಡುವುದಿಲ್ಲ. ನಾಳೆ ದೊಡ್ಡಮನುಷ್ಯನ ಹೆಂಡತಿಯಾದರೆ ಬಡತನದಲ್ಲೇ ನರಳುತ್ತಿರುವ ಮಹಮದನಿಗೆ ಬೇಕಾದ ಹಾಗೆ ಧನಸಹಾಯ ಮಾಡಬಹುದು.

ಹೀಗೆ ಯೋಚಿಸುತ್ತಿರಲು ಮನಸ್ಸು ಸುಖದ ಕಡೆಗೇ ವಾಲಿತು. ಹೃದಯ ದುರ್ಬಲವಾಯಿತು. ದೇಹ ಕಂಪಿಸತೊಡಗಿತು. ಆ ಯುವಕರಲ್ಲಿ ಅತ್ಯಂತ ಸಲಿಗೆ ಬೆಳೆಸತೊಡಗಿದೆ. ಪ್ರತಿದಿನವೂ ಅವರೊಡನೆ ಚಕ್ಕಂದವಾಡುತ್ತಿದ್ದ ನನಗೆ ಮಹಮದನನ್ನು ನೋಡಲು ಅವಕಾಶವೇ ಸಿಗುತ್ತಿರಲಿಲ್ಲ. ಕೈ ತುಂಬ ಹಣ ಒದಗುತ್ತಿತ್ತು.

ಇದೇ ಸಮಯವೆಂದು ಪುಂಡರ ತಂಡವೊಂದು ನನ್ನನ್ನೇ ಹೊಂಚು ಕಾಯಲಾರಂಭಿಸಿತು. ಮೊನ್ನೆಯ ದಿನ ನಾನು ಮಹಮದನನ್ನು ನೋಡಲು ಹೊರಟೆ. ನನಗೆ ಅತ್ಯಂತ ಮೆಚ್ಚುಗೆಯ ಸಣ್ಣ ನಾಯಿಯನ್ನೂ ಕರೆದುಕೊಂಡು ಹೋಗಿದ್ದೆ. ಪುಂಡರ ತಂಡ ಹಿಂದೆಯೆ ಬರುತ್ತಿತ್ತು. ಹಿಂದಿನಿಂದ ನಾಯಿಯನ್ನು ರೇಗಿಸುವಂತೆ ಮಾಡಿ ನನ್ನನ್ನು ಅಲ್ಲಲ್ಲೆ ನಿಲ್ಲುವ ಹಾಗೆ ಮಾಡುತ್ತಿದ್ದರು. ಇದನ್ನು ಮಸೀದೆಯ ಮೇಲೆ ನಿಂತಿದ್ದ ಮಹಮದ್ ನೋಡಿ ಕೆಳಗಿಳಿದು ಬಂದನು. ನನ್ನನ್ನು ಗೇಲಿಯೆಬ್ಬಿಸುತ್ತಿದ್ದ ಪುಂಡರನ್ನು ತಡೆಗಟ್ಟಲು ಯತ್ನಿಸಿದನು. ಉದ್ರೇಕಗೊಂಡ ಪುಂಡರ ಮುಖಂಡ ಸಿಳ್ಳೆ ಹೊಡೆದು ಸುತ್ತಲಿದ್ದವರನ್ನೆಲ್ಲಾ ಸೇರಿಸಿಬಿಟ್ಟ. ಹಿಂದೂ ಜನಗಳ ಈ ಗುಂಪನ್ನು ನೋಡಿದ ಗಾಡಿ ಹೊಡೆಯುವ ಮುಸ್ಲಿಮರು ಕೆರಳಿದರು. ತಮ್ಮ ಕಡೆಯವನೊಬ್ಬನ ಮೇಲೆ ಹಿಂದೂಗಳು ಕೈ ಮಾಡುತ್ತಿದ್ದಾರೆಂದು ಗಾಡಿಯ ಸ್ಟ್ಯಾಂಡಿಗೆ ಹೋಗಿ ಎಲ್ಲರಿಗೂ ಹೇಳಿಬಿಟ್ಟರು. ಸ್ಟ್ಯಾಂಡಿನಲ್ಲಿಯೇ ಗಾಡಿಗಳನ್ನು ಬಿಟ್ಟು ಎಲ್ಲರೂ ನಮ್ಮೆಡೆಗೆ ಓಡಿಬಂದರು. ಅಷ್ಟು ಹೊತ್ತಿಗೆ ದೊಡ್ಡ ಗಲಭೆಯೇ ಆರಂಭವಾಗಿತ್ತು. ಎಷ್ಟೋ ಹಿಂದೂಗಳೂ ಮುಸ್ಲಿಮರೂ ಕಾರಣ ತಿಳಿಯದೆಯೆ ಬಂದು ಬಂದವರೇ ಜಗಳಕ್ಕಾರಂಭಿಸುತ್ತಿದ್ದರು. ತಕ್ಷಣ

ಪೋಲೀಸ್ ವ್ಯಾನ್ ಸ್ಥಳಕ್ಕೆ ಬಂದಿತು. ಸಾಲುಸಾಲಾಗಿ ನಿಂತ ಪೋಲೀಸರು ಲಾಠಿಗಳನ್ನು ಸರಿಪಡಿಸಿಕೊಂಡರು. ತಕ್ಷಣ ಲಾಠಿಗಳನ್ನು ಮೇಲೆತ್ತಿ ಗುಂಪೊಳಗೆ ನುಗ್ಗಿದರು. ಲಘು ಲಾಠೀ ಪ್ರಹಾರವಾಯಿತು. ಈ ಸಮಯವನ್ನೇ ಕಾಯುತ್ತಿದ್ದ ಪುಂಡರ ಮುಖಂಡ ಚೆದರಿದ ನನ್ನನ್ನು ಎತ್ತಿಕೊಂಡು ಓಡಿಬಿಟ್ಟ. ಗಲಾಟೆ ಸ್ವಲ್ಪ ಕಡಿಮೆಯಾಗಿತ್ತು. ಪೋಲೀಸ್ ವ್ಯಾನ್ ಹೊರಟುಬಿಟ್ಟಿತ್ತು. ಮಹಮ್ಮದ್ ರಕ್ತ ಸುರಿಯುತ್ತಿದ್ದ ಹಣೆಯನ್ನು ಒಂದು ಕೈಯಲ್ಲಿ ಒತ್ತಿಟ್ಟುಕೊಂಡ. ಮತ್ತೊಂದು ಕೈಯಿಂದ ನನ್ನನ್ನೇ ಸೂಚಿಸುತ್ತಾ ಕೂಗಿಕೊಂಡನು. ಆಮೇಲೆ ಮೂರ್ಛೆ ಹೋದನಂತೆ.

ಇಂದು ಅವನು ಹೇಗಿದ್ದಾನೆಂದು ತಿಳಿಯುವುದಕ್ಕೇ ಬಂದೆ. ನನ್ನನ್ನು ನೋಡಿದೊಡನೆ ಮಹಮದ್ ಕೋಪಗೊಂಡು ಬೈಯ್ದುಬಿಟ್ಟ. ಅದೇ ಮಾತಿನಲ್ಲೇ ಇಷ್ಟು ದೂರ ನಡೆದು ಬಂದೆವು. ನಾನು ಅತ್ಯುತ್ತಮವಾಗಿ ಸಿಂಗರಿಸಿಕೊಂಡು ಬಂದಿದ್ದೆ. ಕೆಲವು ವೇಳೆ ಬೀದಿಯವರೆಲ್ಲ ನನ್ನನ್ನೇ ನೋಡುತ್ತಿದ್ದರೆ ನನಗೊಂದು ಹೆಮ್ಮೆ ಇತ್ತು. ಈ ಒಳಮನೋಭಾವವನ್ನು ಮಹಮದ್ ಹೇಗೆ ತಿಳಿದುಕೊಂಡನೋ ಗೊತ್ತಿಲ್ಲ. ನನ್ನನ್ನೇ ದಿಟ್ಟಿಸಿ ನೋಡುತ್ತ ಮೊದಲೇ ಹರಿದಿದ್ದ ಜುಬ್ಬವನ್ನು ಮತ್ತಷ್ಟು ಚೂರು ಚೂರಾಗಿ ಹರಿದು, "ಈಗ ನಾನು ಹಿಂದಿಗಿಂತಲೂ ಬಡವನಾಗಿಲ್ಲವೇ! ಹೌದು; ಬಡತನವಿದ್ದರೆ ಹಿಂದಿನ ಉಪಕಾರವೂ ಮರೆತುಹೋದೀತು !! ನನ್ನ ಸಂಕಟವನ್ನು ಕೇಳಿದವರು ನಕ್ಕುಬಿಟ್ಟಾರು. ಮನುಷ್ಯರು ಮನುಷ್ಯರೊಡನೆ ಮಾತನಾಡುವುದು ತುಂಬ ಕಷ್ಟವೇ ಸರಿ. ಅದಕ್ಕಾಗಿಯೆ ಹಿಂದಿನಿಂದಲೂ ನಂಬಿರುವ ಮಸೀದಿಯ ದೇವರ ಬಳಿ ಹೋಗುತ್ತೇನೆ" ಎಂದು ನನ್ನನ್ನು ಜಾಡಿಸಿ ಒದ್ದು ಹೊರಟುಹೋದನು. "ಅಯ್ಯೋ, ಎಂಥ ಕೆಲಸ ಮಾಡಿದೆ? ದೇವರೇ, ಇನ್ನು ಮೇಲೆ ಆಶಾ ಮೇಲಿನ ಆಸೆಯಿಲ್ಲದಂತೆ ಮಾಡಿಬಿಡು. ಪಾಪ; ಅವಳಿಗೆ ಬಲವಾದ ಪೆಟ್ಟು ಬಿದ್ದಿರಬೇಕು" ಎಂದುಕೊಂಡು ಮಸೀದಿಯ ಕಡೆ ಓಡಿಬಿಟ್ಟನು.

ಪುನಃ ಅವನು ಇಲ್ಲಿಗೆ ಬರಲಾರ. ನಾನು ಮಾಡಿದ್ದು ಸರಿಯೋ ತಪ್ಪೋ ತಿಳಿಯಲಾರೆ. ಆದರೂ ನನ್ನಿಂದ ದೊಡ್ಡ ಗಲಭೆಯೇ ನಡೆಯಿತು. "ಆಶಾ" ಎಂದರೆ ಬಾಯಿಬಿಡುವ ಜನ ಬಲವಾಗಿ ಲಾಠಿ ಏಟು ತಿಂದರು. ಆದರೆ ಆ ಗುಂಪಿನಲ್ಲಿ ಏಟು ತಿಂದರೂ ನನ್ನ ಕಡೆ ಕೈ ತೋರಿ ಎಚ್ಚರಿಸಿದವನೆಂದರೆ ಮಹಮುದ್ ಒಬ್ಬನೇ. ಅದೇ ಇತರರು ಇವಳಿಗಾಗಿ ಏಟೇಕೆ ತಿನ್ನಬೇಕೆಂದು ನಿರಾಶರಾಗಿ ಹೊರಟುಹೋದರು. ಮತ್ತಿತರರು ಇದೇ ಸಮಯವೆಂದು ನನ್ನನ್ನೇ ಎತ್ತಿಕೊಂಡು ಓಡಿಬಿಟ್ಟರು. ಆಗ ಏಕೋ ನನ್ನ ಮನಸ್ಸು ಪ್ರತಿಭಟಿಸಲೇ ಇಲ್ಲ. ಮಹಮುದ್ ದೂರದಿಂದ ಕೂಗಿಕೊಳ್ಳುತ್ತಿದ್ದರೂ ಕಿವಿಯ ಮೇಲೆಯೆ ಹಾಕಿಕೊಳ್ಳಲಿಲ್ಲ ಅದಕ್ಕಾಗಿಯೆ ಮಹಮುದ್ ಆ ದೃಶ್ಯವನ್ನೇ ನೆನಪಿನಲ್ಲಿಟ್ಟು ಇಂದು ಅನಿರೀಕ್ಷಿತವಾಗಿ ಒದ್ದುಬಿಟ್ಟನು. ಆದರಿಂದ ಪೆಟ್ಟಾದರೂ ನನಗೆ ದುಃಖವಿಲ್ಲ, ಮನಸ್ಸು ನಿರ್ಮಲವಾಗಿದೆ" ಎಂದು ಆಶಾ ಸೂಕ್ಷ್ಮವಾಗಿ ಪರಿಸ್ಥಿತಿಯನ್ನು ವಿವರಿಸಿದಳು.

ಇಬ್ಬರೂ ಒಟ್ಟಿಗೆ ಮಹಮುದನನ್ನು ಹುಡುಕಿಕೊಂಡು ಹೊರಟೆವು. ಮಸೀದಿಯ ಮೆಟ್ಟಿಲ ಬಳಿ ಒಬ್ಬಾತ ಕೈಕಾಲು ಚಾಚಿ ನಿಶ್ಚೇಷ್ಟಿತನಾಗಿ ಮಲಗಿಬಿಟ್ಟಿದ್ದ. ಮಸೀದಿಯೊಳಗಿದ್ದವರು ನಿದ್ರೆ ಮಾಡುತ್ತಿರಬಹುದೆಂದು ಯೋಚಿಸಿದೆವು. ಅದಕ್ಕಾಗಿಯೆ ಬಾಗಿಲ ಬಳಿ ಬಿದ್ದಿದ್ದ ವ್ಯಕ್ತಿಗೆ ಯಾವ ಅಡಚಣೆಯೂ ಇರಲಿಲ್ಲ. ಹತ್ತಿರ ಸರಿದು ಹೋಗಿ ನೋಡಿದೆವು. ಶ್ವಾಸ ನಿಂತುಹೋಗಿತ್ತು. ಮುಖ ತಿರುಗಿಸಿ ನೋಡಿದಾಗ ಪ್ರಾಣ ಬಿಟ್ಟಿದ್ದ ವ್ಯಕ್ತಿ ಮಹಮುದನೆಂದೇ ತಿಳಿಯಿತು. ಆಶಾ ತನಗಾಗಿ ಸತ್ತ ಆ ಮುಸ್ಲಿಮ ಆತ್ಮವನ್ನು ನೋಡಿ ಬಹಳವಾಗಿ ಮರುಗಿದಳು. ಜಾತಿ ಮತಗಳ ಎಲ್ಲೆ ಕಟ್ಟನ್ನು ಮೀರಿ ಬಡವ ಬಲ್ಲಿದನೆಂಬ ಭೇದವಿಲ್ಲದ ಆ ಹೃದಯದ ಅನುರಾಗವನ್ನು ಮತ್ತೊಮ್ಮೆ ನೆನೆದಳು. ಆಶಾ ಈಗ ಮರುಗುತ್ತಿದ್ದಂತೆಯೇ ನಾನು ಕೂಡ ಹಿಂದೆ ನನ್ನ ಹಿಂದೂಸೇವಕ ನನಗಾಗಿ ಪ್ರಾಣಬಿಟ್ಟಿದ್ದ ಚಿತ್ರವನ್ನು ನೆನೆಸಿಕೊಂಡೆ. ಒಂದೇ ರೀತಿಯ ಹಿಂದೂ ಮುಸ್ಲಿಮ ವ್ಯಕ್ತಿಗಳು ನನ್ನ ಮುಂದೆ ನಿಂತಂತಾಯಿತು. ಹೃದಯದ ಮನೋಭಾವ

ಜಾತಿಯನ್ನೇ ಪೂರ್ಣವಾಗಿ ಅವಲಂಬಿಸಿರುವುದಿಲ್ಲ. ಅದು ಅವರವರ ವೈಯಕ್ತಿಕ ಆಯಕಟ್ಟಿನಲ್ಲೇ ರೂಪುಗೊಳ್ಳುತ್ತದೆ. ಅಂತೆಯೇ ಮಹಮುದ್ ತನ್ನದೇ ಆದ ಭಾವನೆಯನ್ನೇ ಮನಸ್ಸಿನಲ್ಲಿಟ್ಟು ಅದು ಫಲಿಸದಿದ್ದಾಗ ತಾನಾಗಿಯೆ ಪ್ರಾಣ ಬಿಟ್ಟಿದ್ದ. ಆಶಾ ಮತ್ತೊಬ್ಬರ ಬಳಿ ಹೋಗುತ್ತಿದ್ದಾಳೆನ್ನುವುದು ಮಹಮುದನಿಗೆ ದುಃಖದ ವಿಷಯವಾಗಿರಲಿಲ್ಲ. ಆದರೆ ಅದರಿಂದ ಆಶಾಳ ಜೀವನವೇ ಹಾಳಾಗಿ ಹೋಗುವುದಲ್ಲಾ ಎಂದು ವಿಪರೀತವಾಗಿ ಯೋಚಿಸಿಬಿಟ್ಟ. ಆ ಸಮಯದಲ್ಲಿ ಆಶಾ ಅವನ ಮನಸ್ಥಿತಿಯನ್ನು ತಿಳಿಯದೆ ಹಗುರವಾಗಿ ವರ್ತಿಸಿಬಿಟ್ಟಳು. ಅದೇ ಮಹಮುದನಿಗೆ ಕೊನೆಯಾಯಿತು. ಈಗ ಆಶಾ ನಿಜವಾಗಿಯೂ ದುಃಖಪಡುತ್ತಿದ್ದಾಳೆ. ಆದರೇನು ಮಾಡುವುದು? ಮನಸ್ಸಿನಲ್ಲೇ ಪುಂಡರ ಮುಖಂಡನನ್ನು ನಿಂದಿಸುತ್ತಾ ತಾನು ಮಾಡಿದ ಕಾರ್ಯ ತಪ್ಪೆಂದು ಒಪ್ಪಿಕೊಳ್ಳುತ್ತಿದ್ದಾಳೆ. ಇನ್ನು ಮೇಲೆ ಆ ಪುಂಡರೊಡನೆ ಸಡಿಲವಾಗಿ ವರ್ತಿಸುವುದಿಲ್ಲವೆಂದು ಪ್ರತಿಜ್ಞೆ ಮಾಡುತ್ತಿದ್ದಾಳೆ. ಅವಳಲ್ಲಿ ಹಣದಾಸೆ ಅಳಿಸಿಹೋಗಿದೆ.

ಹಿಂದೂ ಸೇವಕ ಸತ್ತಾಗ ನಾನು ಕೂಡ ಇದೇ ರೀತಿ ದುಃಖಪಟ್ಟೆ. ಅದಕ್ಕಾಗಿ ಎದುರಾಳಿಗಳ ಒಳಜೀವನವನ್ನೇ ನೋಡಲು ಪ್ರಯತ್ನಪಟ್ಟು ಸಫಲನಾದೆ. ಆದರೆ ಅಂತಹ ಕಾರ್ಯ ನಡೆಸಲು ಹೆಂಗಸಾದ ಆಶಾಗೆ ಸಾಧ್ಯವೇ? ಒಮ್ಮೆ ಸಾಧ್ಯವಾದರೂ ಪುಂಡರೊಡನೆ ಹೊಡೆದಾಡಬೇಕು. ಈಚೀಚಿಗೆ ಹಿಂದೂಯುವಕರ ದುಡುಕತನ ವಿಪರೀತವಾಗಿದೆ. ಅವಳ ಕೈಗೆ ಸಿಕ್ಕಿ ಆಶಾ ಉಳಿಯಲು ಸಾಧ್ಯವೇ? ಆಶಾಗೆ ಮನೆ ಮಠವಿಲ್ಲವೆಂಬುದು ಎಲ್ಲರಿಗೂ ತಿಳಿದಿದೆ. ಅಂತೆಯೆ ಅವಳೊಡನೆ ಸಡಿಲವಾಗಿ ವರ್ತಿಸಿದರೂ ತಪ್ಪನ್ನು ಅವಳ ಮೇಲೆಯೆ ಹೊರೆಸುವ ಉಪಾಯವನ್ನು ಹುಡುಕಿಕೊಂಡಿದ್ದಾರೆ. ಬಲಾತ್ಕಾರವಾಗಿ ಅವಳನ್ನು ಹಿಂಸಿಸುತ್ತಾರೆ. ಕಡೆಗೊಂದು ದಿನ ತಮ್ಮ ತೃಪ್ತಿ ತೀರಿದ ಮೇಲೆ ಅವಳನ್ನು ಕತ್ತು ಹಿಸುಕಿ ಸಾಯಿಸುವುದಕ್ಕೂ ಅವರಿಗೆ ಧೈರ್ಯವಿದೆ ಪಾಪ; ಆಶಾ ತುಂಬ ಬುದ್ಧಿವಂತಳು. ದೇವರು ಅವಳಿಗೆ ಸಮಾಜದಲ್ಲಿ ಸರಿಯಾದ ಸ್ಥಾನ ಕಲ್ಪಿಸಿಕೊಟ್ಟಿಲ್ಲ. ಎಲ್ಲಕ್ಕೂ ದೇವರನ್ನು ಹಳಿಯುವುದೇಕೆ? ನಮ್ಮ ನಮ್ಮ

ಭವಿಷ್ಯವನ್ನು ನಾವೇ ರೂಪಿಸಬೇಕು. ಹಾಗೆಯೆ ಮತ್ತೊಬ್ಬರ ಭವಿಷ್ಯ ವನ್ನು ರೂಪಿಸುವುದೂ ನಮ್ಮ ಕೈಯಲ್ಲಿದೆ. ಆಗಲಿ; ಆಶಾ ಉತ್ತಮ ಜೀವನ ನಡೆಸುವಂತೆ ನಾನು ಏರ್ಪಾಡು ಮಾಡುತ್ತೇನೆ. ಅವರನ್ನು ಕಂಡಾಗಿನಿಂದ ನನಗೂ ಅವಳಿಗೂ ಏನೋ ಒಂದು ಸಾಮರಸ್ಯವಿರುವುದು ಸಿದ್ಧವಾಗಿದೆ.

ಆದದ್ದು ಆಗಿಹೋಯಿತು; ಮಸೀದಿಯೊಳಗಿಂದ ಮೂರು ಜನರು ಬಂದರು. ತಮ್ಮ ಗೆಳೆಯ ಮಹಮದ್ ಇದ್ದಕ್ಕಿದ್ದಂತೆ ಹೃದಯ ಒಡೆದು ಪ್ರಾಣ ಬಿಟ್ಟಿದ್ದನ್ನು ಕಂಡು ಕಣ್ಣೀರು ಹಾಕಿದರು. ಗೋರಿ ಮಾಡಲು ಸೂಕ್ತ ಏರ್ಪಾಡು ಮಾಡಿಕೊಂಡರು. ಶವ ಸಾಗಿಸಲು ಎಲ್ಲರೂ ಸಿದ್ಧ ರಾದರು. ಪಕ್ಕದಲ್ಲೇ ಗೆಳೆಯರು ಖುರಾನ್ ಪಠನ ಮಾಡಿದರು.

ನಾವುಗಳಿಬ್ಬರೂ ಗೋರಿಯ ತನಕ ಬರಬೇಕಾಗಿಲ್ಲವೆಂದು ಅವರೆ ಲ್ಲರೂ ಸೂಚನೆ ಕೊಟ್ಟರು. ಅಲ್ಲೇ ಉಳಿದುಕೊಂಡೆವು. ಸ್ವಲ್ಪಹೊತ್ತಿನ ನಂತರ ಶಿಬಿರಕ್ಕೆ ಹೋಗೋಣವೆಂದು ಆಶಾಗೆ ಹೇಳಿದೆ. ಆಶಾ ಮನಸ್ಸಿ ನಲ್ಲಿ ವಿಚಿತ್ರಭಾವನೆಗಳು ಹೊಡೆದಾಟವಾಡುತ್ತಿದ್ದವು. ಒಂದು ಹಗುರ ವಾದ ಪ್ರಸಂಗ ನಂಬಿದ ಮನುಷ್ಯನನ್ನು ಹೇಗೆ ತೀರಿಸಿಬಿಟ್ಟಿತು! ಎಂದು ಪದೇ ಪದೇ ಯೋಚಿಸಿ ಕಡೆಗೆ ಜವಾಬ್ದಾರಿಯುತವಾಗಿ ನನ್ನ ಮಾತಿಗೆ ಹೂಗುಟ್ಟಿದಳು. ಇಬ್ಬರೂ ಶಿಬಿರದ ಕಡೆ ನಡೆದೆವು.

ಆಶಾ ಬಂದ ಮೇಲೆ ಶಿಬಿರಕ್ಕೆ ಹೊಸ ಕಾಂತಿ ಬಂದಂತಾಯಿತು. ಕಾಲ ಕಳೆಯಲು ಬೇಜಾರು ಪಡುತ್ತಿದ್ದ ಶಿಬಿರದ ಯುವತಿಯರಿಗೆ ಆಶಾ ಕಾಲ ಕಳೆಸುವ ಉತ್ತಮ ಗೆಳತಿಯಾದಳು. ತನ್ನಂತೆ ಪ್ರೇಮಪಥದಲ್ಲಿ ಎಡವಿ ಬಿದ್ದ ಎಷ್ಟೋ ಜನ ಶಿಬಿರದಲ್ಲಿದ್ದಾರೆಂದು ಆಕೆಗೆ ತಿಳಿಯಿತು. ಅಂಥವರಿಗೆ ಸರಿಯಾದ ದಾರಿ ತೋರಿಸಿ ಸಂಸಾರವಂತರಾಗುವಂತೆ ಪ್ರೇರೇಪಿಸಬೇಕೆಂದು ಪಣತೊಟ್ಟಳು. ತನ್ನ ಜೀವಮಾನವನ್ನೇ ಅವಳ ಉದ್ಧಾರಕ್ಕಾಗಿ ಸವೆಸಬೇಕೆಂದು ತೀರ್ಮಾನಿಸಿದಳು. "ಆದರೆ ಎಷ್ಟಾ ದರೂ ನಾನು ಹೆಂಗಸು; ಕಷ್ಟ ನಿಷ್ಠೂರಗಳಿಗೆ ಹೆದರದೆ ಕೆಲಸ ಮಾಡಿ

ದರೂ ಜನ ಕತೆ ಕಟ್ಟಬಹುದು. ಅದಕ್ಕಾಗಿಯೆ ನನ್ನಂತೆಯೆ ಮನೋ ಭಾವ ಹೊಂದಿರುವ ವ್ಯವಸ್ಥಾಪಕನ ಆಶ್ರಯದಲ್ಲಿ ದುಡಿಯುವುದೇ ಶ್ರೇಯಸ್ಸು" ಎಂದು ಆಶಾ ಮನಗಂಡು ನನಗಿಂತಲೂ ಹೆಚ್ಚಿಗೆ ಶಿಬಿರದ ಕಾರ್ಯ ಚಟುವಟಿಕೆಗಳಲ್ಲಿ ಭಾಗವಹಿಸಿದಳು. ನಾನು ಮಾಡಬೇಕೆಂದಿದ್ದ ಕಾರ್ಯವನ್ನು ಹೇಗೋ ತಿಳಿದುಕೊಂಡು ಮೊದಲೇ ಪೂರೈಸಿಬಿಡುತ್ತಿ ದ್ದಳು. ಅಂತಹ ಕಾರ್ಯಕರ್ತಳನ್ನು ಪಡೆದದ್ದು ನನ್ನ ಭಾಗ್ಯವೆಂದು ಕೊಂಡೆ. ನನ್ನ ಹೆಂಡತಿಯನ್ನೇ ಹೋಲುತ್ತಿದ್ದ ಆಶಾ ನನ್ನ ಮನಸ್ಸಿಗೆ ಆಹ್ಲಾದಕರಳಾಗಿದ್ದರು. ದಿನವೂ ಸಂಜೆ ಇಬ್ಬರೂ ಊರೊಳಗೆ ಹೋಗಿ ವಿವಿಧ ರೀತಿಯ ಜನರನ್ನು ಭೇಟಿಯಾಗುತ್ತಿದ್ದೆವು. ಅವರ ವಿಷಯವಾಗಿ ಇಬ್ಬರೂ ಚರ್ಚೆ ಮಾಡುತ್ತಿದ್ದೆವು. ಕೆಲವು ವೇಳೆ ಆಶಾ ಬಹು ಚತುರ ವಾದ ಉತ್ತರ ಕೊಡುತ್ತಿದ್ದಳು. ಮನಸ್ಸಿನಲ್ಲೇ ನಾನು ಮೆಚ್ಚುತ್ತಿದ್ದೆ. ಆಗಲೇ ದೇಶಸೇವೆಗೆ ನಿರಾತಂಕವಾಗಿ ನಿಲ್ಲುವ ಧೈರ್ಯವನ್ನು ಆಶಾ ಗಳಿಸಿಕೊಂಡಿದ್ದಳು. ಅದಕ್ಕೆ ತಕ್ಕ ವಾತಾವರಣವೂ ಸಿದ್ಧವಾಗಿತ್ತು. ಈಗ ಯಾವ ಪುಂಡರ ಗುಂಪಿಗೂ ಅವಳನ್ನು ಹಿಂಬಾಲಿಸುವ ಧೈರ್ಯ ವಿರಲಿಲ್ಲ. ಗಲಭೆಯಾದ ದಿನದಿಂದ ಎಲ್ಲರೂ ಹೆದರಿದ್ದರು. ಹೆಣ್ಣಿಗೆ ಹಾತೊರೆದು ತಲೆಯ ಮೇಲೆ ಲಾಠೀ ಪ್ರಹಾರ ಹೊಂದಲು ಯಾರಿಗೂ ಬೇಡವಾಗಿತ್ತು.

ಒಂದು ದಿನ ಸಂಜೆ ಇತಿಹಾಸಪ್ರಸಿದ್ಧವಾದ ಕೆಂಪುಕೋಟೆಯ ಬಳಿ ಹೋಗುತ್ತಿದ್ದೆವು. ಅದರ ತಿರುವೊಂದರಲ್ಲಿ ಎರಡು ಕಾರುಗಳು ಒಂದ ಕ್ಕೊಂದು ಡಿಕ್ಕಿ ಹೊಡೆದು ಅದರಲ್ಲಿರುವವರೇ ಗೊತ್ತಾಗದಂತಿತ್ತು. ಹತ್ತಿರ ಹೋಗಿ ನೋಡಿದಲ್ಲಿ ಒಬ್ಬ ಮಿಲಿಟರಿಯವನಿಗೆ ಬಲವಾದ ಅಪಘಾತ ಸಂಭವಿಸಿತ್ತು. ಪಕ್ಕದಲ್ಲಿ ಒಬ್ಬ ಮಹಿಳೆಯೂ ಇದ್ದಳು. ಡಿಕ್ಕಿ ಹೊಡೆದ ಕಾರಿನಲ್ಲಿ ಡ್ರೈವರ್ ಒಬ್ಬನೇ ಇದ್ದನಂತೆ. ತಾನಾಗಿಯೆ ಎದುರಿನ ಕಾರಿಗೆ ಡಿಕ್ಕಿ ಹೊಡೆದನೆಂದು ಅಲ್ಲಿದ್ದವರೆಲ್ಲ ಹೇಳುತ್ತಿದ್ದರು. ಬಹುಶಃ ಡ್ರೈವರ್ ಕುಡಿತದ ಅಮಲಿನಲ್ಲಿ ಆ ಕೆಲಸ ಮಾಡಿರಬಹುದೆಂದೂ ಹೇಳು ತ್ತಿದ್ದರು. ಅಂತೂ ಮೂರು ಜನಕ್ಕೂ ಪೆಟ್ಟು ಬಿದ್ದಿತ್ತು. ವ್ಯಾನಿನಲ್ಲಿ

ಆಸ್ಪತ್ರೆಗೆ ಸಾಗಿಸಿದರು ಅಪಘಾತಕ್ಕೀಡಾದ ಮಿಲಿಟರಿಯವನನ್ನು ಎಲ್ಲೋ ನೋಡಿದ ಜ್ಞಾಪಕವಿತ್ತು. ತಕ್ಷಣ ಹೊಳೆಯಿತು. ನಾನಿದ್ದ ಮೊದಲ ಶಿಬಿರಕ್ಕೆ ಆತ ಒಬ್ಬಳ ಜೊತೆಯಲ್ಲಿ ಒಂದು ದಿನ ಬಂದು ಸ್ತ್ರೀಯರಿಗಾಗಿ ಪ್ರತ್ಯೇಕ ಶಿಬಿರವೇರ್ಪಡಿಸಬೇಕೆಂದು ವಾದಿಸಿದ್ದ. ಅಲ್ಲಿಂದಲೇ ಅವನು ದೆಹಲಿಗೆ ವರ್ಗಾಯಿಸಲ್ಪಟ್ಟಿದ್ದ. ನಿರಾಶ್ರಿತರಲ್ಲಿ ಆಸಕ್ತಿ ತೋರಿಸುತ್ತಿದ್ದವನಿಗೆ ಈ ರೀತಿಯಾಯಿತಲ್ಲ ಎಂದು ದುಃಖಪಟ್ಟೆ.

ಮಾರನೆಯ ದಿನ ಪೇಪರಿನಲ್ಲಿ ಸಮಾಚಾರ ಓದಿದೆ. ಮಿಲಿಟರಿಯವನ ಸ್ಥಿತಿ ಚಿಂತಾಜನಕವಾಗಿದೆಯೆಂದೂ ಹೆಂಗಸು ಉತ್ತಮಗೊಂಡಿದ್ದಾಳೆಂದೂ ತಿಳಿದುಬಂತು. ಅಲ್ಲೇ ಸೇರಿಸಲ್ಪಟ್ಟಿದ್ದ ಡ್ರೈವರಿಗೆ ಪ್ರಾಣಾಪಾಯವಿಲ್ಲದಿದ್ದರೂ ತಲೆ ಕೆಟ್ಟಿರುವಂತೆ ಒಂದೇ ಸಮನೆ ಮಾತನಾಡುತ್ತಿದ್ದಾನೆಂದೂ ಸುದ್ದಿ ಬಂದಿತ್ತು. ಮಿಲಿಟರಿಯವನಿಗಾಗಿ ಮರುಗಿ ಆಶಾಗೆ ಸುದ್ದಿ ತಿಳಿಸಿದೆ. ಅವಳು ನಕ್ಕು, "ಮರುಗುವ ಪ್ರಸಂಗವು ಏನೂ ಇಲ್ಲವಲ್ಲ! ಎಂದೋ ಅವನಾಡಿದ ಮೇಲು ಮಾತಿಗೆ ಬೆಲೆಕೊಟ್ಟು ಅವನು ಒಳ್ಳೆಯವನೆಂದು ನಿರ್ಧರಿಸುವಿರಾ? ಪಕ್ಕದಲ್ಲಿದ್ದ ಹೆಂಗಸೂ ಕೂಡ ಅವನ ಹಾಗೆಯೆ. ಅವರ ವಿಷಯ ನಿಮಗೆ ತಿಳಿದಿಲ್ಲವೆಂದು ಕಾಣುತ್ತದೆ" ಎಂದಳು. "ನಿರಾಶ್ರಿತ ಹೆಂಗಸರ ನಾಲ್ಕಾರು ಕಥೆ ಕೇಳಿದ್ದಾಯಿತು. ಇನ್ನು ಅವಳ ಕಥೆ ಎಂತಹುದು?" ಎಂದು ಕುತೂಹಲದಿಂದ ಕೇಳಿದೆ.

"ಅವಳು ಕೂಡ ನಿರಾಶ್ರಿತಳೆ; ದೆಹಲಿಯಲ್ಲಿ ಪ್ರಾರಂಭವಾದ ಮೊದಲ ಶಿಬಿರಕ್ಕೇ ಬಂದು ಸೇರಿದವಳು. ಆಗ ನಮ್ಮ ಶಿಬಿರವು ಹುಟ್ಟೇ ಇರಲಿಲ್ಲ. ಅವಳಿದ್ದ ಶಿಬಿರದಲ್ಲಿ ಎಲ್ಲರೂ ಅನುಭವವಿಲ್ಲದವರಾಗಿದ್ದರು. ಅಂದ ಮೇಲೆ ಶಿಬಿರದ ಹೆಂಗಸರು ಯಾವ ಅಡ್ಡಿ ಆತಂಕಗಳೂ ಇಲ್ಲದೆ ಹೆದರಿಕೆಯಿಲ್ಲದ ಜೀವನ ನಡೆಸುತ್ತಿದ್ದರು. ಆ ಸಮಯದಲ್ಲೇ ನಿನ್ನೆ ಕಾರು ಅಪಘಾತಮಾಡಿದ ಡ್ರೈವರ್ ಅವಳ ಮೋಹಪಾಶಕ್ಕೆ ಸಿಲುಕಿದ. ಆಗ ಅವನು ಡ್ರೈವರಾಗಿರಲಿಲ್ಲ. ಕಾರುಗಳನ್ನಿಟ್ಟಿದ್ದ ಶ್ರೀಮಂತನಾಗಿದ್ದನು. ಎಳೆಯ ಮಗುವನ್ನು ಸಮಾಧಾನಪಡಿಸುವಂತೆ ಅವಳಿಗೆ ಪ್ರತಿ

ದಿನವೂ ಏನಾದರೂ ಅಮೂಲ್ಯವಾದ ಬಟ್ಟೆ ಬರೆಗಳನ್ನು ಕಾಣಿಕೆಯಾಗಿ ಅರ್ಪಿಸುತ್ತಿದ್ದನು. ಈ ಸದವಕಾಶವನ್ನೇ ಉಪಯೋಗಿಸಿಕೊಂಡು ಅವಳು ಅವನಲ್ಲಿದ್ದುದನ್ನೆಲ್ಲಾ ಕೀಳಲಾರಂಭಿಸಿದಳು. ಅವನಂತೂ ಯಾವುದಕ್ಕೂ ಹೆದರದೆ ತನ್ನ ಪ್ರೇಯಸಿಗಾಗಿ ತಾನಾಗಿ ಸಂಪಾದಿಸಿದ್ದ ಭಾಗ್ಯವನ್ನೆಲ್ಲಾ ಅರ್ಪಿಸಿದ. ಎಲ್ಲಕ್ಕಿಂತಲೂ ಅವಳ ವಿಶ್ವಾಸವೇ ದೊಡ್ಡ ದೆಂದು ನಂಬಿದ್ದ. ಆದರೆ ದಿನಗಳು ಕಳೆದಂತೆ ಅವಳು ಹಿಂದಿನಂತೆ ಅವ ನೊಡನೆ ಸರಸವಾಡಲು ಹಿಂಜರಿದಳು. ಏನೊ ಕೆಲಸವಿದ್ದಂತೆ ನಟಿಸಿ ಇನ್ನೆಲ್ಲಿಗೋ ಹೊರಟು ಹೋಗುತ್ತಿದ್ದಳು. ಹೊಸಬರೊಡನೆ ತಿರುಗಾಡ ಲಾರಂಭಿಸಿದಳು. ಆದರೂ ಅವನು ನಿರಾಶನಾಗದೆ ತನ್ನ ಕಾರುಗಳನ್ನೇ ಮಾರಿ ಬಂದ ಹಣವನ್ನು ಅವಳಿಗರ್ಪಿಸಿದನು. ಅದರಿಂದಲೂ ವಿಶ್ವಾಸ ಗಳಿಸಲಾಗಲಿಲ್ಲ. ಅದರ ಬದಲು ಅವನ ಹಣ ಮತ್ತಿತರನ್ನು ಆಕರ್ಷಿಸು ವುದಕ್ಕೆ ಅವಕಾಶಕೊಟ್ಟಿತು. ಈಗ ಅವಳು ಹಿಂದಿಗಿಂತಲೂ ಚೆನ್ನಾಗಿ ಸಿಂಗರಿಸಿಕೊಳ್ಳುತ್ತಿದ್ದಳು. ಇತ್ತ ದಿವಾಳಿಯಂತಾದವನು ಡ್ರೈವರ್ ಕೆಲಸಕ್ಕೆ ಸೇರಿದ. ಕಾರಿನ ಮಾಲೀಕ ಮತ್ತೊಬ್ಬರ ಕೂಲಿಯಾಳಾಗ ಬೇಕಾಯಿತು. ಹೆಂಗಸರ ಚಂಚಲತೆ ಅವನಿಗೆ ಜೀವನದಲ್ಲೇ ಬೇಸರ ತಂದಿತು. ಹೆಂಗಸರೆಲ್ಲರೂ ನಂಬಿದವರನ್ನು ಕೈ ಬಿಡುವವರೇ ಎಂದು ತೀರ್ಮಾನಿಸಿಬಿಟ್ಟನು. ಕಣ್ಣು ಕೆಂಪಗೆ ಮಾಡಿಕೊಂಡು ಕಾರನ್ನೋಡಿಸು ತ್ತಿದ್ದವನನ್ನು ಕಂಡ ಎಲ್ಲರೂ ಹೆದರುತ್ತಿದ್ದರು.

ಒಂದು ದಿನ ಮಿಲಿಟರಿ ಪೆರೇಡ್ ನಡೆದಾಗ ಆ ಹೆಂಗಸು ಎಲ್ಲರ ಮನಸ್ಸನ್ನೂ ಸೆರೆಹಿಡಿಯುವಂತೆ ಶೃಂಗಾರ ಮಾಡಿಕೊಂಡು ಹೊರಟಿದ್ದಳು. ಅವಳಂದುಕೊಂಡಿದ್ದಂತೆಯೇ ಅಲ್ಲಿರುವವರು ತಮ್ಮ ಗಮನವನ್ನು ಇವಳ ಕಡೆ ಕೇಂದ್ರೀಕರಿಸಿದರು. ಆ ಸಮಯದಲ್ಲೇ ಆ ಮಿಲಿಟರಿಯವನು ಇವಳನ್ನು ತನ್ನ ಕಡೆಗೆಳೆದುಕೊಂಡನು. ಅಂದಿನಿಂದ ಮಿಲಿಟರಿಯವ ನೊಡನೆ ನಿರಾತಂಕವಾಗಿ ಓಡಾಡುತ್ತಿದ್ದಳು ಶಿಸ್ತಿಗೆ ಹೆಸರಾದ ಮಿಲಿ ಟರಿಯವನು ತನ್ನ ಖಾತೆಯನ್ನು ಸರಿಯಾಗಿ ನೋಡಿಕೊಳ್ಳಲಾರದೆ ಕೆಟ್ಟ ಹೆಸರು ತಂದುಕೊಡನು. ಪಕ್ಕದಲ್ಲಿರುವವಳೇ ಸರ್ವಸ್ವವೆಂದು ತಿಳಿದು

ಅವಳೊಡನೆ ಕಾಲಕಳೆಯುತ್ತಿದ್ದನು. ಯಾರಾದರೂ ಕಂಡಾರೆಂಬ ಭೀತಿ ಯಿಂದ ಕಾರಿನಲ್ಲೇ ವೇಗವಾಗಿ ಸುತ್ತಾಡುತ್ತಿದ್ದರು.

ಇದು ಡ್ರೈವರಿಗೆ ಹೇಗೊ ತಿಳಿದುಹೋಯಿತು. ತಕ್ಷಣ ಅವ ರಿಬ್ಬರ ಮೇಲೂ ಕಿಡಿ ಕಾರುತ್ತ ಭಯಂಕರವಾಗಿ ಯೋಚಿಸತೊಡಗಿದನು. ಹೇಗಾದರೂ ಮಾಡಿ ಅವರಿಬ್ಬರನ್ನೂ ತೀರಿಸಿಬಿಡಬೇಕೆಂದು ಪರದಾಡಿ ದನು. ಆಗ ತನ್ನ ಕೈಯಲ್ಲಿದ್ದ ಸಾಧನವೆಂದರೆ ಕಾರು. ಅತ್ಯುತ್ತಮ ವಾದ ಸಲಕರಣೆ ಎದುರಿಗಿರುವಾಗ ಕಾರ್ಯ ಮಾಡೇಬಿಡಬೇಕೆಂದು ಹೊರಟನು. ಅದರಿಂದಲೇ ತಾನಾಗಿಯೆ ಅವರ ಕಾರಿಗೆ ನಿನ್ನೆಯ ದಿನ ಡಿಕ್ಕಿ ಹೊಡೆಸಿದನು ಆಗ ಅವನಿಗೆ ತಾಳ್ಮೆಯಿರಲಿಲ್ಲ ಜೀವದ ಭಯ ವಿಲ್ಲದೆ ಮುನ್ನುಗ್ಗಿದನು. ಆದರೆ ದೈವವಶಾತ್ ತಾನು ಉಳಿದು ಕೊಂಡನು. ಆದರೂ ಹಿಂದಿನಂತೆ ಅವನು ಇರಲಾರ. ಹೆಣ್ಣೆಂದರೆ ಉರಿದು ಬೀಳುವ ಭಾವವನ್ನು ಹೊಂದಿರವಾತ ಜೀವನ ನಡೆಸಲು ಸಾಧ್ಯವೇ ? ಅದ ಕ್ಕಾಗಿಯೆ ಅವನಿಗೆ ಈಗ ತಲೆ ಕೆಟ್ಟಿರಬೇಕು." ಎಂದು ಆಶಾ ಡ್ರೈವರಿಗಾಗಿ ಮರುಗಿದಳು ಹಿಂದೆ ತಾನು ಕೂಡ ಮುಹಮುದನನ್ನು ಅಲಕ್ಷಿಸಿ ಬೇರೊಬ್ಬ ರೊಡನೆ ಹಗುರವಾಗಿ ವರ್ತಿಸುತ್ತಿದ್ದುದನ್ನು ಜ್ಞಾಪಿಸಿಕೊಂಡು ನಕ್ಕಳು. ಹೆಣ್ಣನ್ನು ಹೆಣ್ಣಿನ ಹೃದಯವೇ ಅರ್ಥಮಾಡಿಕೊಳ್ಳಬಲ್ಲದು ಎಂದು ಕೊಂಡಳು.

ಹೌದು, ಹೆಣ್ಣನ್ನು ಹೆಣ್ಣಿನ ಹೃದಯವೇ ಅರ್ಥಮಾಡಿಕೊಳ್ಳ ಬಲ್ಲದು. ಅದು ಗಂಡಸರಿಗೆ ಅಸಾಧ್ಯ. ಹೆಣ್ಣು ನಕ್ಕಾಗ ಅತ್ತಾಗ ಅದೇ ನಿಜವೆಂದು ನಂಬುವುದು ಗಂಡಸಿನ ಸ್ವಭಾವ. ಆ ಸಮಯವನ್ನೇ ಹೆಣ್ಣು ಕಾಯುತ್ತಿರುತ್ತದೆ. ಆಗಲೇ ಅದು ಗಂಡಸನ್ನು ಸೂತ್ರದ ಬೊಂಬೆಯಂತೆ ತಿರುಗಿಸಬಲ್ಲದು. ಕೆಲವರಿಗೆ ಅತಿ ಕೆಟ್ಟ ಗಂಡಸರನ್ನೂ ಸ್ವಲ್ಪ ಕಾಲ ದಲ್ಲೇ ಒಳ್ಳೆಯವರನ್ನಾಗಿ ಮಾಡುವ ಶಕ್ತಿಯಿರುತ್ತದೆ. ಹಾಗೆಯೆ ಮತ್ತೆ ಕೆಲವರಿಗೆ ತುಂಬ ಒಳ್ಳೆ ವ್ಯಕ್ತಿಗಳನ್ನು ಕೇವಲ ನಿಮಿಷದಲ್ಲೇ ಅತಿ ಕಾಮುಕರನ್ನಾಗಿ ಪರಿವರ್ತಿಸುವ ಮೋಹಪಾಶವಿರತ್ತದೆ. ಅಂತೂ

ಹೆಂಗಸಿನ ಮನಸ್ಸು ನೂರಾರು ಭಾವನೆಗಳ ವಾಸಸ್ಥಾನವಾಗಿದೆಯೆಂದು ಹೊಳೆಯಿತು. ನಾನು ಅನೇಕ ಸ್ತ್ರೀಯರನ್ನು ಭೇಟಿಮಾಡಿ ಅವರ ಕತೆಯಲ್ಲಿ ಸಮಭಾಗಿಯಾಗಿದ್ದರೂ ಅವರಿಗಿಂತ ಭಿನ್ನವಾದ ಸ್ತ್ರೀಯರ ಸಂಖ್ಯೆ ಇನ್ನೂ ಹೆಚ್ಚಿನದಾಗಿಯೆ ಇದೆಯೆಂದು ತೀರ್ಮಾನಿಸಿದೆ.

ಕೆಲವು ದಿನಗಳ ನಂತರ ನಿರಾಶ್ರಿತರಿಗಾಗಿ ಹಣ ಶೇಖರಣೆ ಮಾಡಬೇಕೆಂದು ಎಲ್ಲ ಶಿಬಿರದವರಿಗೂ ಸೂಚನೆ ಬಂದಿತು. ಬೇರೆ ಊರುಗಳಿಂದಲೂ ಕೇಂದ್ರ ಕಛೇರಿಗೆ ಹಣ ಕಳಿಸಲು ಏರ್ಪಾಡು ಮಾಡಲಾಗಿತ್ತು. ನಿರಾಶ್ರಿತರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಲೇ ಇತ್ತು. ಕೇವಲ ವಸತಿಗಳನ್ನೊದಗಿಸುವುದೇ ಕಷ್ಟವಾಯಿತು. ಎಲ್ಲೆಲ್ಲಿ ನೋಡಿದರೂ ಆರ್ಥಿಕ ದುಃಸ್ಥಿತಿ ಪ್ರಾಪ್ತವಾಯಿತು. ಆಹಾರ ಸಾಮಾಗ್ರಿಗಳು ಕಣ್ಣಿಗೆ ಕಾಣದಂತೆ ಮಾಯವಾದವು. ಆದರೂ ಒಟ್ಟೊಟ್ಟಿಗೆ ಧಾನ್ಯಸಂಗ್ರಹಣೆಯನ್ನು ವರ್ತಕರು ತಮ್ಮಲ್ಲಿ ತಾವೇ ಮಾಡಿಕೊಳ್ಳುತ್ತಿದ್ದಾರೆಂಬ ಸುದ್ದಿ ಹಬ್ಬಿತು. ಮಾರ್ಕೆಟ್ಟಿನಲ್ಲಿ ಮಾತ್ರ ಎಲ್ಲಿ ನೋಡಿದರೂ 'ಇಲ್ಲ' ವೆಂಬ ಶಬ್ದ ಸಾಮಾನ್ಯ ಮಾತಾಗಿತ್ತು. ಅದಕ್ಕೆ ತಕ್ಕಂತೆ ಸರಿಯಾದ ಮಳೆಯಾಗದೆ ಫಲವತ್ತಾದ ಭೂಪ್ರದೇಶದಿಂದಲೂ ಬೆಳೆಯಾಗಲಿಲ್ಲ. ಎಲ್ಲ ದೇಶದಲ್ಲೂ ಒಂದೊಂದು ರೀತಿಯ ಕ್ಷಾಮ ತಲೆದೋರಿತು. ಅಲ್ಲೆಲ್ಲ ಕೂಗಾಟ ಪ್ರಾರಂಭವಾಯಿತು. ಎಲ್ಲರಿಗೂ ಉತ್ತರ ಹೇಳುವ ಪ್ರಸಂಗ ಸರ್ಕಾರಕ್ಕೆ ವಿಚಿತ್ರ ಸನ್ನಿವೇಶವನ್ನು ಮುಂದೊಡ್ಡಿತು. ನಿರಾಶ್ರಿತರ ವಸತಿ ಸೌಕರ್ಯಗಳಿಗಾಗಿ ಹಣ ಶೇಖರಣೆಯಾಗಲೇ ಬೇಕೆಂದು ತೀರ್ಮಾನವಾಯಿತು. ಅದಕ್ಕಾಗಿ ಎಲ್ಲೆಡೆಯಲ್ಲೂ ಪ್ರಚಾರ ನಡೆಯಿತು.

ಮುಂಬಯಿಯಲ್ಲಿ ಮನರಂಜನೆಯ ಮೂಲಕ ಹಣ ಶೇಖರಿಸಲು ಸಾಧ್ಯವಿತ್ತು. ನಿರಾಶ್ರಿತರಿಗಾಗಿ ಹಣ ಕೊಡಿ ಎಂದರೆ ಜನ ತಮ್ಮ ತಮ್ಮ ಕಷ್ಟಗಳನ್ನೇ ಹೇಳಿಬಿಟ್ಟು ತಪ್ಪಿಸಿಕೊಳ್ಳುತ್ತಿದ್ದರು. ನಾಟಕವಿದೆ; ನೃತ್ಯವಿದೆ ಎಂದರೆ ಅವರ ಜೇಬಿನಿಂದ ಹೇಗೊ ಹಣ ಹೊರಕ್ಕೆ ಬರುತ್ತಿತ್ತು. ಅದರಲ್ಲೂ ಕುಮಾರಿಯವರ ನೃತ್ಯವೆಂದರೆ ಜನದ ಕಣ್ಣು ತೆರೆಯು

ತ್ತಿತ್ತು. ಹಾಗೆಯೆ ಹಣದ ಥೈಲಿಯ ಗಂಟೂ ಅನಾಯಾಸವಾಗಿ ಬಿಚ್ಚು ತ್ತಿತ್ತು. ಹದಿನೈದು ದಿನಗಳ ಮುಂಚಿನಿಂದಲೂ ಅವಳ ನೃತ್ಯಕ್ಕೆ ಹೋಗು ತ್ತೇನೆಂಬ ಹೆಮ್ಮೆ ಪ್ರತಿಯೊಬ್ಬರಲ್ಲೂ ಎದ್ದು ಕಾಣುತ್ತಿತ್ತು. ಸಾವಿರ ರೂಪಾಯಿ ಸಂಬಳದವನು ತಾನು ಕಲೆಗಾಗಿ ಸಹಾಯ ಮಾಡುತ್ತಿದ್ದೇ ನೆಂಬ ಭಾವದಿಂದ ಮುಂದೆ ಹೋಗಿ ಕುಳಿತುಕೊಳ್ಳುತ್ತಿದ್ದನು ಮಧ್ಯಮ ರೀತಿಯ ಜನ ಮನಸ್ಸಿಗೆ ನೆಮ್ಮದಿಯನ್ನಾದರೂ ಕೊಡುವ ದೃಶ್ಯವನ್ನು ನೋಡೋಣವೆಂದು ಬರುತ್ತಿದ್ದರು. ಇನ್ನು ಕೆಳದರ್ಜೆಯ ಜನ ತಮ್ಮದೇ ಆದ ಭಾಷೆಯಲ್ಲಿ ನೃತ್ಯಕ್ಕಿಂತಲೂ ನೃತ್ಯ ಮಾಡಿದವಳ ಮೇಲೆ ಹೆಚ್ಚಿಗೆ ಚರ್ಚೆ ನಡೆಸುತ್ತಿದ್ದರು. ದುಡ್ಡು ಕೊಟ್ಟಿದ್ದೇವೆಂಬ ಹೆಮ್ಮೆ ಅವರಲ್ಲಿ ಮರುಕಳಿಸಿ ಎದ್ದು ಎದ್ದು ಕುಣಿಸುತ್ತಿತ್ತು. ಅಂತೂ ಹಣ ಶೇಖರಣೆಗೆ ಮನರಂಜನೆಯ ಕಾರ್ಯಕ್ರಮ ಪೋಷಕವಾಗಿತ್ತು.

ಒಂದು ವಾರ ತಾವೇ ನಿರ್ಮಿಸಿದ ಭವ್ಯವಾದ ಕಲಾಮಂಟಪದಲ್ಲಿ ಉತ್ಸವ ನಡೆಸುತ್ತೇವೆಂದೂ, ಬಂದ ಹಣವನ್ನು ನಿರಾಶ್ರಿತರಿಗಾಗಿ ಅರ್ಪಿಸ ಲಾಗುವುದೆಂದೂ ಮುಂಬಯಿಯ ಗಣ್ಯವ್ಯಕ್ತಿಗಳಲ್ಲಿ ಕೆಲವರು ಡೆಲ್ಲಿಯ ಅಧಿಕಾರಿಗಳಿಗೆ ತಿಳಿಸಿದರು. ಮರು ಟಪಾಲಿನಲ್ಲೇ ಡೆಲ್ಲಿಯಿಂದ, "ತಾವು ನಿಶ್ಚಯಿಸಿರುವ ಕಾರ್ಯ ಪ್ರಶಂಸನೀಯವಾಗಿದೆ ನಿಮ್ಮಂಥ ನೂರಾರು ಜನ ಭಾರತದಲ್ಲಿ ಈ ರೀತಿ ದೇಶಸೇವೆಗೆ ನಿಂತರೆ ರಾಮರಾಜ್ಯ ಸ್ಥಾಪನೆ ಯಾಗುವುದರಲ್ಲಿ ಸಂಶಯವಿಲ್ಲ. ನಿಮ್ಮ ಕಾರ್ಯದಲ್ಲಿ ಸಹಕರಿಸಲು ನಮ್ಮ ಕಡೆಯವರೊಬ್ಬರನ್ನು ಸದ್ಯದಲ್ಲೇ ಕಳಿಸಲಿದ್ದೇವೆ" ಎಂದು ಪತ್ರ ಬಂದಿತು.

ವಾರದ ಕಾರ್ಯಕ್ರಮ ಪಟ್ಟಿಯನ್ನು ಅತಿರಭಸದಿಂದ ತಯಾರಿಸಿ ದರು. ಪ್ರತಿದಿನವೂ ಉಪನ್ಯಾಸದ ಜೊತೆಗೆ ಸಂಗೀತ ನಾಟಕಗಳಿದ್ದವು. ಪ್ರಸಿದ್ಧ ಸಿನಿಮಾ ನಟಿಯರ ಲಘು ಸಂಗೀತವೂ ಏರ್ಪಾಡಾಗಿತ್ತು. ಅವರವರ ಕಾರ್ಯಕ್ರಮವಿದ್ದ ದಿನ ಕಾರುಗಳಲ್ಲಿ ಅವರ ಫೋಟೋಗಳ ನ್ನಿಟ್ಟು ಪ್ರಚಾರ ಮಾಡಲು ಕೆಲವರನ್ನು ನೇಮಿಸಿದ್ದರು. ನಗರದ ಭವ್ಯ ಕಟ್ಟಡಗಳ ಮೇಲೆ ಸಿನಿಮಾ ನಟಿಯರ ಚಿತ್ರದಿಂದೊಡಗೂಡಿದ ದೊಡ್ಡ

ದೊಡ್ಡ ಬೋರ್ಡುಗಳನ್ನಿಡಲಾಯಿತು. ಅವರ ಭಾವಚಿತ್ರದ ಕೆಳಗೆ ಕಾರ್ಯಕ್ರಮವನ್ನು ಬರೆಸಿದ್ದರು. ಮುಂಬಯಿಯ ಜನಕ್ಕೆ ರುಚಿಸುವಂತೆ ವಿವಿಧ ರೀತಿಯ ಪ್ರಚಾರಕಾರ್ಯ ನಡೆಯಿತು. ವಿದ್ಯುಚ್ಛಕ್ತಿಯ ಅದ್ಭುತಗಳು ಪ್ರಚಾರಕ್ಕೆ ಸಹಕಾರಿಯಾಯಿತು. ಅದನ್ನು ನೋಡಿದ ಜನರ ಮನಸ್ಸಲ್ಲೂ ವಿದ್ಯುತ್ಸಂಚಾರವಾದಂತಾಗಿ ಕಲಾಮಂಟಪದ ಕಡೆಗೆ ಎಳೆದುಕೊಂಡು ಹೋಗುತ್ತಿತ್ತು.

ಬಹುದಿನದಿಂದ ಸುಪ್ರಸಿದ್ಧ ಸಿನಿಮಾ ನಟಿ ನಿರ್ಮಲೆಯನ್ನು ನೋಡಲು ಜನ ಪ್ರಯತ್ನಪಟ್ಟು ವಿಫಲರಾಗಿದ್ದರು. ರಜತ ಪರದೆಯ ಮೇಲೆ ತಮ್ಮ ಮನಸ್ಸನ್ನೆಲ್ಲಾ ಸೂರೆಗೊಂಡವಳನ್ನು ಎದುರಿಗೇ ನೋಡಿ ಬಿಡಬೇಕೆಂಬ ಹಂಬಲ ಎಲ್ಲರಿಗಿತ್ತು. ಕಡೆಗೆ ಮುಂಬಯಿಯ ಗಣ್ಯವ್ಯಕ್ತಿಗಳು ಅವಳನ್ನು ಭೇಟಿ ಮಾಡಿ, "ತಾವು ಈ ಸಮಾರಂಭದಲ್ಲಿ ಭಾಗ ವಹಿಸಲೇ ಬೇಕು. ನಿರಾಶ್ರಿತರಿಗಾಗಿ ತಮ್ಮಿಂದ ಸೇವೆ ಸಲ್ಲಬೇಕಾಗಿದೆ. ತಮ್ಮ ಕಲೆಯಿಂದ ಇಂದು ದೇಶ ಉದ್ಧಾರವಾಗಬೇಕು. ನಿಮ್ಮಂಥವರು ಹಿಂಜರಿದರೆ ನಮಗೆಲ್ಲ ಬಹಳ ನಿರಾಶೆಯುಂಟಾಗುತ್ತದೆ. ದಯವಿಟ್ಟು ಕಡೆಯ ದಿನವಾದರೂ ಪೂರ್ಣ ಭಾಗವಹಿಸಬೇಕು. ಅಂದು ನಿಮಗಾಗಿಯೆ ಮೀಸಲಾಗಿಟ್ಟಿದ್ದೇವೆ" ಎಂದಾಗ ನಿರ್ಮಲೆ ಏನೋ ಯೋಚನೆ ಮಾಡಿ ಸಂಪೂರ್ಣ ಅಂಗೀಕಾರ ಸೂಚಿಸಲು ಹಿಂಜರಿದಳು. ಸ್ವಲ್ಪ ಹೊತ್ತಿನ ನಂತರ ತಾನಾಗಿಯೆ, "ಅಂದು ನನಗಾಗಿಯೆ ಸಮಾರಂಭವನ್ನು ಏರ್ಪಡಿಸುವ ಅವಶ್ಯಕತೆ ಬೇಡ. ನನ್ನ ಗುರುಗಳಾದ ದಿವಂಗತ ರಮೇಶರ ಹೆಸರಿನಲ್ಲಿ ಕಾರ್ಯಕ್ರಮ ನಡೆಯಲಿ. ಅವರ ಭಾವಚಿತ್ರದಡಿಯಲ್ಲಿ ದೇಶ ಸೇವೆ ನಡಿಯಲಿ. ನಾನು ಮನಃಪೂರ್ವಕವಾಗಿ ಭಾಗವಹಿಸುತ್ತೇನೆ. ಇದರಲ್ಲಿ ತಾವು ಯಾವ ಸಂಶಯವನ್ನೂ ಪಡಬೇಕಾದದ್ದಿಲ್ಲ" ಎಂದು ಸಮ್ಮತಿಯಿತ್ತಳು.

ಅದರಂತೆ ಮಾರನೆಯ ದಿನ ನಿರ್ಮಲೆ ಒಪ್ಪಿಕೊಂಡ ಸಂಗತಿ ಪತ್ರಿಕೆಗಳಲ್ಲಿ ಪ್ರಕಟವಾದಾಗ ಜನ ಕುಣಿದಾಡಿದರು. ನಿರ್ಮಲೆಯ ಭಾವಚಿತ್ರವನ್ನು ತರುಣರು ಮತ್ತೆ ಮತ್ತೆ ನೋಡಿ ಸಂತೋಷಪಟ್ಟರು.

ಇತ್ತ ಡೆಲ್ಲಿಯ ಕೇಂದ್ರ ಸಮಿತಿಯುವರು ನನ್ನನ್ನು ಕರೆಸಿ ಮುಂಬಯಿಗೆ ಹೋಗುವಂತೆ ಆಜ್ಞಾಪಿಸಿದರು. ಸಮಾರಂಭದಲ್ಲಿ ಭಾಗ ವಹಿಸಿ ಅಲ್ಲಿಯ ಜನ ಮತ್ತಷ್ಟು ಹಣ ಕೊಡುವಂತೆ ಪ್ರೇರೇಪಿಸಬೇಕೆಂದು ನನ್ನನ್ನು ಹುರಿದುಂಬಿಸಿದರು. ಖಾಸಗಿ ಶಿಬಿರವೊಂದರ ಸಾಮಾನ್ಯ ವ್ಯವಸ್ಥಾಪಕನಾದ ನನ್ನ ಮೇಲೆ ಹೆಚ್ಚಿನ ಜವಾಬ್ದಾರಿಯನ್ನು ಹೊರೆಸಿ ದರು. ಎಲ್ಲರಿಗಿಂತಲೂ ನಾನೇ ಅತ್ಯುತ್ತಮ ಕಾರ್ಯಕರ್ತನೆಂದು ಹೊಗಳಿ, ಕಡೆಗೆ ಮುಂಬಯಿಗೆ ಹೋಗಲು ನನ್ನಿಂದ ಒಪ್ಪಿಗೆ ಪಡೆದರು.

ನಾನು ಮುಂಬಯಿಗೆ ಹೊರಟರೆ ನನ್ನ ಶಿಬಿರವನ್ನು ನೋಡಿಕೊಳ್ಳು ವವರಾರಿದ್ದಾರೆಂದು ಯೋಚಿಸಿದೆ. ಆ ಸಮಯದಲ್ಲಿ ಆಶಾ ಬಂದು ಜವಾಬ್ದಾರಿ ವಹಿಸಿಕೊಳ್ಳಲು ಒಪ್ಪಿದಳು. ಆಶಾ ಕೂಡ ಮುಂಬಯಿಗೆ ನನ್ನ ಜೊತೆ ಬಂದಿದ್ದರೆ ಚೆನ್ನಾಗಿರುತ್ತೆಂದುಕೊಂಡೆ ಆದರೆ ಶಿಬಿರದ ಕಾರ್ಯ ಕಲಾಪಗಳನ್ನು ನೋಡಿಕೊಳ್ಳುವರಾರೂ ಇರದೆ ಬಂದುಬಿಡು ವುದು ಅಪಾಯಕರವಾಗಿತ್ತು ಅದಕ್ಕಾಗಿ ಆಶಾಗೆ ಅಭಿವಂದಿಸಿ ಮುಂಬಯಿಗೆ ತೆರಳಿದೆ.

ರೈಲಿನಲ್ಲಿ ಹೋಗುತ್ತಿದ್ದಾಗ ಆಶಾಳನ್ನೇ ನೆನೆಸಿಕೊಳ್ಳುತ್ತಿದ್ದೆ. ಅವಳ ಚಟುವಟಿಕೆಯ ಸ್ವಭಾವ ನನ್ನನ್ನು ತುಂಬ ಮೆಚ್ಚಿಸಿತ್ತು. ಆದರೆ ಇತರರು ಅವಳ ಸ್ವಾಭಾವಿಕ ರೂಪಿಗೆ ಮನಸೋತು ಎಲ್ಲಿ ಹೊಂಚು ಕಾಯುತ್ತಿದ್ದಾರೋ ಎಂದು ಭಯಪಟ್ಟೆ. ಅಂತೂ ರೂಪವತಿಯರಾದ ಹೆಂಗಸರು ಯಾವ ಕೆಲಸಕ್ಕೆ ಕೈ ಹಾಕಿದರೂ ಅಪಾಂುಕರ ಚಿತ್ರವೆ ಕಣ್ಮುಂದೆ ನಿಲ್ಲುವುದಲ್ಲಾ ಎಂದು ನನ್ನಲ್ಲಿ ನಾನೇ ಸಂದೇಹಪಟ್ಟೆ. ಆಶಾ ವಿನ ವಿಚಾರದಲ್ಲಿ ಆ ರೀತಿ ಆಗದಿರಲೆಂದು ಪ್ರಾರ್ಥಿಸಿದೆ. ನಾನು ಮುಂಬಯಿಯಿಂದ ಬರುವ ವೇಳೆಗೆ ಶಿಬಿರದ ಕೆಲಸಗಳು ಆಶಾವಿನ ಕೈವಾಡದಿಂದ ಹೊಸ ಚೈತನ್ಯ ಹೊಂದಲೆಂದು ಬಯಸಿ ಮುಂದಿನ ಪ್ರಯಾಣ ಬೆಳೆಸಿದೆ.

ಕಲಾಮಂಟಪದ ವೈಭವವನ್ನು ಕಂಡ ನನಗೆ ಆಶ್ಚರ್ಯವಾಯಿತು. ಬರಿಯ ಹೊರಗಿನ ಅಲಂಕಾರವೇ ಮನಸ್ಸಿಗೆ ಆಹ್ಲಾದಕರವಾಗಿತ್ತು.

ಇನ್ನು ಒಳಗೆ ಹೋದರಂತೂ ಅದೊಂದು ಸ್ವರ್ಗದ ಭೂಮಿಯಂತಿತ್ತು. ಅಲ್ಲಿ ತಿರುಗಾಡುವವರೂ ಕೂಡ ನವೀನ ರೀತಿಯ ವೇಷಭೂಷಣಗಳಿಂದ ಕಂಗೊಳಿಸುತ್ತಿದ್ದರು. ಇಂಥ ವಿಚಿತ್ರ ಜನತೆಯಿಂದ ಮನೆ, ಮಠ ಕಳೆದು ಕೊಂಡು ಅಲೆದಾಡುತ್ತಿರುವ ನಿರಾಶ್ರಿತರಿಗೆ ಅಧಿಕ ರೀತಿಯ ಸಹಾಯ ದೊರಕುವುದರಲ್ಲಿ ಸಂದೇಹವಿರಲಿಲ್ಲ.

ಮೊದಲನೆಯ ದಿನದ ಸಮಾರಂಭ ಅತಿ ವಿಜೃಂಭಣೆಯಿಂದ ಆರಂಭ ವಾಯಿತು. ಜನಸ್ತೋಮ ಅಸಂಖ್ಯಾತವಾಗಿತ್ತು. ಹಿಂದಿನ ನಿರ್ಧಾರ ಕ್ಕಿಂತಲೂ ಹೆಚ್ಚಿಗೆ ಹಣ ಶೇಖರಣೆಯಾಗಿತ್ತು. ಉಪನ್ಯಾಸಗಳು ಮುಗಿ ಯುವ ಹೊತ್ತಿಗೆ ಸಾವಿರಾರು ಜನ ಮತ್ತೆ ನೂಕು ನುಗ್ಗಾಟದಲ್ಲಿ ಒಳಕ್ಕೆ ಬಂದರು. ನಾಟಕ ಪ್ರಾರಂಭವಾದ ಮೇಲೂ ಜನ ಬರುತ್ತಲೇ ಇದ್ದರು. ಮುಂದೆ ನನ್ನ ಬಳಿ ಕುಳಿತಿದ್ದ ಸೇಠರನ್ನು, "ಏನು ಇವತ್ತು ಬಹಳ ಜನ ಸೇರಿಬಿಟ್ಟಿದ್ದಾರೆ. ಕುಮಾರಿಯವರ ನೃತ್ಯ ಜನರನ್ನು ಹಿಡಿದು ನಿಲ್ಲಿಸಿ ಬಿಟ್ಟಿದೆ" ಎಂದು ಕೇಳಿದೆ.

ಅದಕ್ಕೆ ಅವರು, "ಸರಿ; ಕಡೆಯ ದಿನ ಸ್ವಲ್ಪ ನೋಡುವಿರಂತೆ. ಇದರ ಮೂರರಷ್ಟು ಜನ ಸೇರಿಬಿಡುತ್ತಾರೆ ಈಗಾಗಲೆ ಕಡೆ ದಿನದ ಟಿಕೆಟ್ ಮುಂಗಡವಾಗಿಯೆ ಖರ್ಚಾಗಿ ಹೋಗಿದೆ. ಇನ್ನು ಹೊಸದಾಗಿ ಅಚ್ಚಿಗೆ ಕೊಟ್ಟಿದೆ. ನಿಜವಾಗಿಯೂ ನಿರ್ಮಲೆಯಂಥ ಅಚ್ಚುಕಟ್ಟಿನ ನಟಿ ಎಲ್ಲಿ ಸಿಕ್ಕಾಳು, ಸ್ವಾಮಿ? ಅವಳನ್ನು ಒಪ್ಪಿಸುವುದೇ ಪ್ರಯಾಸವಾಗಿ ಹೋಯಿತು. ಕಡೆಗೆ ಪಾಪ ಇಲ್ಲವೆನ್ನದ ಹಾಗೆ ಒಪ್ಪಿಕೊಂಡಳು. ಅಬ್ಬ! ಏನು ರೂಪ, ಏನು ಕಂಠಮಾಧುರ್ಯ! ನಮ್ಮಂಥ ಸಾಮಾನ್ಯ ರಿಗೆ ವರ್ಣಿಸಲೇ ಅಸಾಧ್ಯ. ಅವಳ ಕಲೆಯಿಂದ ನಿಮ್ಮ ನಿರಾಶ್ರಿತರು ಬದುಕಿಹೋಗುತ್ತಾರೆ, ಸ್ವಾಮಿ" ಎಂದರು.

"ಹೌದು ಸೇಠರೇ. ದೇಶಸೇವೆಗೆ ನೀವಲ್ಲದೆ ಇನ್ನಾರು ನಿಲ್ಲಬೇಕು? ನಿರ್ಮಲೆಯಂಥವರಿಂದ ನಮಗೆ ಸಹಾಯ ಮಾಡಿಸುತ್ತಿರುವವರು ನೀವಲ್ಲದೆ ಇನ್ನಾರು? ದೊಡ್ಡ ದೊಡ್ಡ ಕಲಾವಿದರನ್ನು ಕರೆತರುವುದೇ ಒಂದು ಕಲೆ.

ಅದನ್ನು ತಾವು ಸಾಧಿಸಿಕೊಂಡಿದ್ದೀರಿ. ಏನೂ ತಿಳಿಯದ ನನಗೆ ರಸ ದೌತಣ ಮಾಡಿಸುತ್ತಿದ್ದೀರಿ. ಈಗಾಗಲೆ ವಿಜೃಂಭಣೆಯಿಂದ ಶುರುವಾದ ಉತ್ಸವ ಕಡೆಯ ದಿನ ಮತ್ತಷ್ಟು ವೈಭವಯುತವಾಗಿ ನಡೆಯದೆ ಏನು?" ಎಂದು ನಾನು ಸೇಠರನ್ನು ಮನಃಪೂರ್ವಕವಾಗಿ ಹೊಗಳಿದೆ.

"ಅಷ್ಟು ಮರ್ಯಾದೆ ನನಗೇಕೆ, ಸ್ವಾಮಿ? ಆದರೆ ಒಂದು ಮಾತು, ನೋಡಿ. ನಮ್ಮ ದೇಶದಲ್ಲಿ ಎಷ್ಟೋ ಜನ ಕಲಾವಿದರಿದ್ದರೂ ಅವರನ್ನು ಸರಿಯಾದ ರೀತಿ ಸತ್ಕರಿಸಲು ಜನಕ್ಕೆ ಗೊತ್ತಿಲ್ಲ. ಏನೋ ನಾವುಗಳು ಮನಸ್ಸು ಮಾಡಿ ಈ ಸಾರಿ ಕಲೆಹಾಕಿದ್ದೇವೆ. ಬಂದ ಹಣ ವನ್ನು ನಿರಾಶ್ರಿತರಿಗಾಗಿ ಅರ್ಪಿಸಿ, ಅದರಿಂದಲಾದರೂ ದೇಶಸೇವೆ ಮಾಡೋಣವೆಂದು ನಮ್ಮ ಗೆಳೆಯರನೇಕರು ನಿರ್ಧರಿಸಿದ್ದರಿಂದ ಈ ಕೆಲಸಕ್ಕೆ ಕೈ ಹಾಕಿದೆವು" ಎಂದು ಸೇಠರು ಕೈಬೆತ್ತವನ್ನು ತಿರುಗಿಸುತ್ತಾ ಹೇಳಿದರು.

"ನೀವು ಮಾಡುತ್ತಿರುವ ಕಾರ್ಯವನ್ನು ಎಷ್ಟು ಹೊಗಳಿದರೂ ಸಾಲದು. ಅಂತೂ ಹಣ ಶೇಖರಣೆಗೆ ಒಳ್ಳೆ ಉಪಾಯ ಹೂಡಿದಿರಿ. ಜೊತೆಗೆ ಜನರಿಗೆ ಕಲಾವಿದರ ಭೇಟಿಯನ್ನೂ ಮಾಡಿಸುತ್ತಿದ್ದೀರಿ ರಜತ ಪರದೆಯವರನ್ನು ಎದುರಿಗೇ ನಿಲ್ಲಿಸಿಬಿಡುತ್ತಿದ್ದೀರಿ" ಎಂದು ಸೇಠರನ್ನು ಮತ್ತಷ್ಟು ಹುರಿದುಂಬಿಸಿದೆ.

"ನೀವು ಹೇಳುವುದೇನೊ ನಿಜ. ನಿರ್ಮಲೆಯನ್ನು ಎದುರಿಗೇ ನೋಡಬೇಕು, ಸ್ವಾಮಿ. ಬರೀ ರಜತ ಪರದೆಯ ಮೇಲೆ ನೋಡಿದರೆ ಸಾಲದು. ಅದೆಲ್ಲ ಈಗೇಕೆ? ನೀವೇ ನೋಡುವಿರಲ್ಲ" ಎಂದು ಸೇಠರು ಹುಸಿನಗೆ ನಕ್ಕರು.

ನಿರೀಕ್ಷಿಸಿದ್ದಂತೆ ಕಡೆಯ ದಿನ ಜನ ಅಸಂಖ್ಯಾತರಾಗಿ ಸೇರಿ ಬಿಟ್ಟರು. ಅಂದು ಬೀದಿಯಲ್ಲೇ ಜನಸಂದಣಿ ಕಡಿಮೆಯಾಗಿ ಕಲಾಮಂಟಪದಲ್ಲಿ ಗದ್ದಲವಿತ್ತು. ಅಂದ ಮೇಲೆ ಊರಿನ ಅರ್ಧದಷ್ಟು ಸಂಖ್ಯೆ ಕಲಾಮಂಟಪದಲ್ಲೇ ಸೇರಿಬಿಟ್ಟದ್ದಿತು.

ಸಂಜೆಯ ಸಮಯ; ಸೂರ್ಯಕಿರಣಗಳ ತಾಪ ಸ್ವಲ್ಪ ಕಡಿಮೆಯಾಗಿತ್ತು. ಎಳೆ ಬಿಸಿಲು ಹರಡಿ ಜನತೆಗೆಲ್ಲ ಕಾಂತಿಯನ್ನು ಬೀರಿತ್ತು. ಪಶ್ಚಿಮ ದಿಕ್ಕು ಓಕಳಿ ಚೆಲ್ಲಿದ ನೆಲದಂತೆ ಶೋಭಾಯಮಾನವಾಗಿತ್ತು. ಸೂರ್ಯನು ತಲೆಯ ಮೇಲೆ ಕೆಂಪು ಕಳಶವಿಟ್ಟು ಸಮುದ್ರದಲ್ಲಿ ಮುಳುಗುವವನಂತೆ ಪಶ್ಚಿಮ ದಿಗಂತದಲ್ಲಿ ಇಳಿಯುತ್ತಲಿದ್ದನು. ಸುತ್ತಲೂ ಹೆಚ್ಚಿನ ಗದ್ದಲವಿರಲಿಲ್ಲ. ಇರುಳು ತಿಳಿಕತ್ತಲೆಯ ಮೇಲು ವಸ್ತ್ರವನ್ನು ಧರಿಸಿ ನಿಧಾನವಾಗಿ ಬರುತ್ತಿತ್ತು.

ನಾನು ಸಮಾರಂಭಕ್ಕೆ ಬೇಗಲೇ ಹೋಗಬೇಕಿತ್ತು. ಊರ ಸಂಚಾರಕ್ಕೆ ಹೊರಟಿದ್ದಿದ್ದರಿಂದ ಸ್ವಲ್ಪ ತಡವಾಯಿತು. ಅಷ್ಟರಲ್ಲೇ ಸೇಠರ ಕಾರು ಕೂಡ ಕರೆದುಕೊಂಡು ಹೋಗಲು ಬಂದಿದ್ದಿತಂತೆ. ಪಾಪ; ಕಾದು ಕಾದು ವಿಫಲರಾಗಿ ನನ್ನನ್ನು ಹುಡುಕಲು ಸೇಠರು ಮತ್ತೆಲ್ಲೋ ಕಾರು ಕಳಿಸಿದ್ದರಂತೆ. ಅಷ್ಟಾಗಿ ದೂರವಿಲ್ಲದ ಕಲಾಮಂಟಪಕ್ಕೆ ಕಾರಿಗೆ ಕಾಯುವ ಬದಲು ನಡೆದುಕೊಂಡೇ ಹೋದರಾಯಿತೆಂದು ಬೇಗ ಬೇಗ ಹೆಜ್ಜೆ ಹಾಕುತ್ತಿದ್ದೆ.

ದಾರಿಯಲ್ಲಿ ಅಷ್ಟಾಗಿ ಜನಜಂಗುಳಿಯಿಲ್ಲದೆ ಶಾಂತವಾತಾವರಣವಿದ್ದಿತು. ಎದುರಿನ ದಾರಿಯಿಂದ ಯಾವನೋ ಒಬ್ಬ, 'ನಾನು ಕಳ್ಳ!' 'ನಾನು ಕಳ್ಳ !' ಎಂದು ಕೂಗಾಡುತ್ತ ಓಡಿಬಂದನು. ಅವನ ಚಿಂಧಿಯ ಬಟ್ಟೆ, ಹರಕಲು ಗಡ್ಡ ಮತ್ತು ಮುಖಭಾವಗಳನ್ನು ನೋಡಿದರೆ ಹುಚ್ಚು ಮನುಷ್ಯನೆಂಬುವುದರಲ್ಲಿ ಸಂಶಯವಿರಲಿಲ್ಲ. ಅವನು ಎಲ್ಲೆಲ್ಲಿಹೋದರೂ ಅವನ ಹಿಂದೆ ದೊಡ್ಡ ತುಂಟ ಹುಡುಗರ ತಂಡವೇ ಸೇರಿತ್ತು. ಹುಚ್ಚನನ್ನು ಕೆರಳಿಸುವುದು ಮತ್ತು ಅವನಿಂದ ನಿಂದೆಯನ್ನು ಸ್ವೀಕರಿಸುವುದೆಂದರೆ ಅವರಿಗೆ ಹಿಡಿಸಲಾರದಷ್ಟು ಆನಂದ. ಎದುರಿಗೆ ಬರುತ್ತಿದ್ದ ಅನೇಕ ದೊಡ್ಡ ಮನುಷ್ಯರುಗಳು ಹುಚ್ಚನನ್ನು ಈಗತಾನೆ ಜೈಲುವಾಸ ಮುಗಿಸಿಕೊಂಡು ಬಂದವನಿರಬಹುದೆಂದು ಭಾವಿಸಿದರು.

ಹುಚ್ಚನ ಓಟ ಜೋರಾಗಿ ಸಾಗಿತ್ತು. ಎಲ್ಲಿಗೋಡಿದನೋ ನಮಗೆ ತಿಳಿಯಲಿಲ್ಲ. ಅಂತೂ ನಾನು ಬೇಗ ಕಲಾಮಂಟಪವನ್ನು ಸೇರಿದೆ.

ಜನರ ಗುಂಪುಗಳು ಒಳಕ್ಕೆ ಹೋಗಲು ಅತಿ ರಭಸದಿಂದ ನುಗ್ಗುತ್ತಿದ್ದವು. ಇದನ್ನು ನೋಡಿ ಅಲ್ಲೇ ನಿಂತಿದ್ದ ಕುಚ್ಚನು ಕೂಡ ಕಲಾಮಂಟಪದ ಮಹಾದ್ವಾರದಿಂದಲೇ ಒಳಕ್ಕೆ ನುಗ್ಗಿದನು.

ಹಿಂದೆ ಏರ್ಪಡಿಸಿದ್ದಂತೆ ಅಂದು ಎಲ್ಲೆಲ್ಲಿ ನೋಡಿದರೂ ಉತ್ಸಾಹ, ಆನಂದಗಳು ತುಳುಕಾಡುತ್ತಿದ್ದವು. ಊರಿನ ಮಹನೀಯರೆಲ್ಲ ಬಂದು ಸೇರಿದ್ದರು. ಸಭಾಂಗಣವು ಬಣ್ಣ ಬಣ್ಣದ ದೀಪಗಳಿಂದ ಅಲಂಕೃತ ವಾಗಿತ್ತು. ಎರಡು ಮೂರು ಪರದೆಗಳನ್ನು ಒಂದರ ಹಿಂದೆ ಒಂದರಂತೆ ಎಳೆಯಲು ಏರ್ಪಾಟು ಮಾಡಲಾಗಿತ್ತು. ಒಂದೆಡೆಯಲ್ಲಿ ಒಂದು ಭಾವ ಚಿತ್ರವಿದ್ದಿತು. ಅದನ್ನು ಶುಭ್ರ ಬಿಳಿಯ ವಸ್ತ್ರದಿಂದ ಹೊದಿಸಲಾಗಿತ್ತು. ಅಂದು ಆ ಭಾವ ಚಿತ್ರದ ಅನಾವರಣೋತ್ಸವ. ಆ ಚಿತ್ರವು ಜನಕ್ಕೆಲ್ಲ ಪರಿಚಿತರಾದ ಗತಿಸಿದ ನಟಶ್ರೇಷ್ಠ ರಮೇಶರದು.

ರಮೇಶರ ಹೆಸರು ದೇಶ ವಿದೇಶಗಳಲ್ಲಿ ಖ್ಯಾತಿಹೊಂದಿತ್ತು. ಅವರ ಅನೇಕ ಶಿಷ್ಯ ಶಿಷ್ಯೆಯರುಗಳು ನಾಟಕ ರಂಗದಲ್ಲೇ ಅಲ್ಲದ್ದೇ ಚಿತ್ರಜಗತ್ತಿನಲ್ಲೂ ಕ್ರಾಂತಿಯುಂಟು ಮಾಡಿದ್ದರು. ಅವರ ಶಿಷ್ಯೆ ನಿರ್ಮಲೆಯು ರಮೇಶರು ಗತಿಸಿದ ಮೇಲೆ ನಾಟಕರಂಗವನ್ನು ಬಿಟ್ಟು ಚಿತ್ರ ಪ್ರಪಂಚಕ್ಕೆ ಬಂದಳು. ರಮೇಶರ ಜೊತೆ ನಾಟಕದಲ್ಲಿ ನಾಯಕಿಯ ಪಾತ್ರವನ್ನು ಅನೇಕ ವೇಳೆ ವಹಿಸಿ ಆಗಲೇ ಕೀರ್ತಿಯನ್ನು ಸಂಪಾದಿಸಿದ್ದಳು. ಇನ್ನು ಚಿತ್ರರಂಗದಲ್ಲಿ ಕಾಲಿಟ್ಟಾಗಿನಿಂದ ಕೀರ್ತಿ ಕುಸುಮ ತನ್ನ ಸುವಾಸನೆಯನ್ನು ಎಲ್ಲೆಡೆಯಲ್ಲೂ ಬೀರಿತು. ಪ್ರೇಕ್ಷಕರ ಪ್ರೀತಿಪಾತ್ರ ತಾರೆಯಾದಳು ನಿರ್ಮಲೆ. ಯುವಕರ ಹೃದಯದಲ್ಲಿ ನಿರ್ಮಲೆಯ ರೂಪ ಮನೆ ಮಾಡಿತು. ಅಂತೆಯೆ ನಿರ್ಮಲೆಯ ಜೊತೆಯಲ್ಲಿ ಪಾತ್ರವಹಿಸಲು ನಟಶ್ರೇಷ್ಠರುಗಳೂ ಕೂಡ ದೊಡ್ಡ ತಪಸ್ಸನ್ನೇ ಮಾಡಬೇಕಾಗಿದ್ದಿತು. ಚಿತ್ರನಿರ್ಮಾಪಕರುಗಳು ನಿರ್ಮಲೆಯನ್ನು ಆದರದಿಂದ ತಮ್ಮ ತಮ್ಮ ಸ್ಟುಡಿಯೋಗಳಿಗೆ ಬರಮಾಡಿಕೊಂಡು ಸತ್ಕರಿಸಿದ್ದರು. ಬಹಳ ಜನ ನಿರ್ಮಲೆಯ ಸುಂದರ ರೂಪವನ್ನಾಗಲೀ ಅವಳ ಮಧುರ ಸಂಗೀತವನ್ನಾಗಲೀ ಪ್ರತ್ಯಕ್ಷವಾಗಿ ಕೇಳಿರಲಿಲ್ಲ ಮತ್ತು ನೋಡಿರಲಿಲ್ಲ.

ಆದ್ದರಿಂದಲೇ ಬಹಳ ಒತ್ತಾಯದಿಂದ ರಮೇಶರ ಭಾವಚಿತ್ರ ಅನಾವರಣೋತ್ಸವಕ್ಕೆ ನಿರ್ಮಲೆಯನ್ನು ಬರಮಾಡಿದ್ದು. ಅಂದು ಅವಳು ರಮೇಶರ ಮೇಲೆ ಮಾತನಾಡುವವಳಾಗಿದ್ದಳು. ಕೆಲವು ಲಘುಗೀತೆ ಗಳನ್ನೂ ಹಾಡುವುದಕ್ಕೆ ಒಪ್ಪಿದ್ದಳು. ಇಡೀ ಸಭೆಯೆಲ್ಲ ನಿರ್ಮಲೆಯ ದರ್ಶನಾಕಾಂಕ್ಷಿಯಾಗಿ ನೆಟ್ಟ ನೋಟದಿಂದ ಕಾದಿದ್ದಿತು.

ಈ ಸಮಯಕ್ಕೆ ಸರಿಯಾಗಿ ಹುಚ್ಚನು ಯಾವ ಹೆದರಿಕೆಯೂ ಇಲ್ಲದೆ ಶಿವಪೂಜೆಯಲ್ಲಿ ಕರಡಿ ಬಂದಂತೆ ವೇದಿಕೆಯ ಮೇಲೆ ಹತ್ತಿದನು. ನಿರ್ಮಲೆಯಂತಹ ಸುಂದರಾಕೃತಿಯನ್ನು ಕಾಯುತ್ತಿದ್ದ ಸಭಿಕರಿಗೆ ಈ ಹುಚ್ಚನ ಕೊಳಕು ಮುಖ ಕಂಡೊಡನೆ ಬೇಸರವಾಯಿತು. ಇವನನ್ನು ಬೇಗ ಕೆಳಗೆ ಹೊರದೂಡಿ ಕಾರ್ಯಕ್ರಮಾರಂಭ ಮಾಡಬೇಕೆಂದು ಜನ ರೆಲ್ಲರೂ ಕಾರ್ಯದರ್ಶಿಯವರಿಗೆ ತಿಳಿಸಿದರು. ಆದರೆ ಹುಚ್ಚನನ್ನು ಹೊರದೂಡಲು ಯಾರೂ ಮುಂದಕ್ಕೆ ಬರಲಿಲ್ಲ. ಬಂದ ಕೆಲವರು ವೇದಿಕೆ ಯನ್ನು ಹತ್ತಿದೊಡನೆಯೇ ರಾಮನನ್ನು ಕಂಡ ಪರಶುರಾಮರಂತೆ ಶಕ್ತಿಹೀನರಾದರು.

ಹುಚ್ಚನಿಗೆ ಹೇಗೆ ಹೊಳೆಯಿತೋ ಗೊತ್ತಾಗಲಿಲ್ಲ. ತನ್ನ ಮಾತು ಇಡೀ ಜನಸ್ತೋಮಕ್ಕೆ ಕೇಳಿಸಬೇಕೆಂಬ ಉದ್ದೇಶದಿಂದ ಮೈಕಿನ ಹತ್ತಿರ ಬಂದು ಉಪನ್ಯಾಸಕ್ಕಾರಂಭಿಸಿದನು. ಸ್ವಲ್ಪ ಹೊತ್ತು ಗಂಭೀರವಾದ ಶೈಲಿಯಿಂದ ರಮೇಶರ ವ್ಯಕ್ತಿತ್ವವನ್ನು ವರ್ಣಿಸಿದನು. ತಾನು ಅವ ರೊಡನೆ ಇದ್ದೆನೆಂದು ಹೇಳಿಕೊಂಡನು. ಎಲ್ಲರಿಗೂ ತಿಳಿಯದ ರಮೇಶರ ಅಂತರಂಗದ ವಿಷಯಗಳನ್ನು ಬಿಡಿಸಿ ಹೇಳಿದಾಗಲಂತೂ ಸಭಿಕರು ಇವನೆಲ್ಲೋ ಜಾಣಹುಚ್ಚನೆಂದು ತೀರ್ಮಾನಿಸಿದರು.

ತಕ್ಷಣವೇ ಶೈಲಿಯನ್ನು ಬದಲಾಯಿಸಿ ರಮೇಶರ ಕೊನೆಯ ದಿನ ಗಳಲ್ಲಿ ನಡೆದ ಅತ್ಯಾಚಾರವನ್ನು ಒಂದೊಂದಾಗಿ ಹೇಳಲಾರಂಭಿ ಸಿದನು—"ರಮೇಶರು ಇನ್ನೂ ಬದುಕುತ್ತಲಿದ್ದರು! ಆದರೆ ಜನ ಅವರನ್ನು ಬದುಕಿಸಲಿಲ್ಲ!! ಅವರ ಸಾವಿಗೆ ಕಾರಣ ಅವರ ಹತ್ತಿರದ

ಗೆಳೆಯರು ಅವರಿಗೆಸಗಿದ ಹೃದಯಭೇದಕವಾದ ಪೆಟ್ಟುಗಳು !!! ಮೊದಲು ನಾಟಕವನ್ನು ಪ್ರವೇಶಿಸಿದಾಗ ರಮೇಶರು ಬಹಳ ಬಡವರಾಗಿದ್ದರು. ಕಲಾಭಿಮಾನಿ ದೇವತೆಯ ಆಶೀರ್ವಾದದಿಂದ ಅವರ ಕೀರ್ತಿಯು ದಿನೇ ದಿನೇ ಹೆಚ್ಚಿತು. ಅವರಿದ್ದ ಕಲಾಮಂಡಳಿಯ ಮ್ಯಾನೇಜರರು ರಮೇಶ ರಂತಹ ನಟರೊದಗಿದ್ದಕ್ಕಾಗಿ ಹಿಗ್ಗಿದರು. ಚಲನ ಚಿತ್ರಗಳ ಪ್ರಭಾವ ಜನರ ಮೇಲೆ ಬೀರಿದ್ದರೂ ಅದು ರಮೇಶರ ಹಿರಿಮೆಯನ್ನು ಕುಗ್ಗಿಸ ಲಿಲ್ಲ. ಹೀಗೆ ರಮೇಶರ ಕೀರ್ತಿ ಸಾಮ್ರಾಜ್ಯ ಇಪ್ಪತ್ತು ವರುಷ ನಡೆ ಯಿತು. ಅವರೊಡನೆ ನಾಟಕದಲ್ಲಿ ಪಾತ್ರವಹಿಸಿದವರು ನಿಜವಾಗಿಯೂ ಪುಣ್ಯವಂತರು. ಆದರೆ ಅಂತಹ ನೆಚ್ಚಿನ ಗೆಳೆಯರೇ ಅವರನ್ನು ಕೊಲ್ಲಬೇಕೆ ?"......

ಇದನ್ನು ಕೇಳಿ ಮುಂದೆ ಕುಳಿತಿದ್ದ ಸೇಠರು ಹಿಂದಕ್ಕೆ ಸರಿದರು. ನಿರ್ಮಲೆಗೆ ಪೆಟ್ಟು ಬಿದ್ದಂತಾಯಿತು. ಮುಖ ಕೆಂಪೇರಿತು. ತನ್ನ ವಿಷಯವನ್ನು ಎಲ್ಲಿ ಬಯಲುಮಾಡಿ ಇಷ್ಟು ಜನರೆದುರಿಗೆ ಅಪಮಾನ ಮಾಡುವನೋ ಎಂದು ಬಹಳವಾಗಿ ಹೆದರಿದಳು. ಈ ಹುಚ್ಚನು ಯಾರೆಂಬುದು ಅವಳಿಗೆ ಗೊತ್ತಿರಲಿಲ್ಲ. ಅದೂ ಅಲ್ಲದೆ ಇವನು ರಮೇ ಶರ ಜೀವನವನ್ನು ತನಗಿಂತಲೂ ಹೆಚ್ಚಿಗೆ ತಿಳಿದವನಂತೆ ಕಾಣುತ್ತಿದ್ದನು.

ಹುಚ್ಚನು ಮುಂದುವರೆದು, "ಹೂವಿಗೆ ದುಂಬಿ ಸಮೂಹವು ಮುತ್ತು ವಂತೆ ನಟ ನಟಿಯರು ರಮೇಶರ ಸುತ್ತ ಕುಣಿದಾಡಿದರು. ಇಂದು ಚಿತ್ರ ಪ್ರಪಂಚದಲ್ಲಿ ಬೆಳಗುತ್ತಿರುವ ಸುರೇಶನು ಆಗ ರಮೇಶರ ಸ್ನೇಹ ವನ್ನು ಸಂಪಾದಿಸಿದನು. ರಮೇಶರಿಗೆ ಯಾವ ಸಂಸಾರವೂ ಇರಲಿಲ್ಲ. ಈ ಸದವಕಾಶವನ್ನು ಉಪಯೋಗಿಸಿಕೊಂಡು ಸುರೇಶನು ಸ್ನೇಹದ ಮರೆಯಲ್ಲಿ ರಮೇಶರ ಕಲಾವೈಶಿಷ್ಟ್ಯವನ್ನೆಲ್ಲಾ ಕಲಿತನು. ಆಮೇಲೆ ರಮೇಶರು ಕಣ್ಮರೆಯಾದಾಗ ಕಲಿತ ಕಲೆಯನ್ನು ಹೊರಸೂಸಿ ಅನೇಕ ಚಿತ್ರಗಳಲ್ಲಿ ಹೆಸರುವಾಸಿಯಾದನು. ಆದರೆ ರಮೇಶರಂತೆ ಕಲೆಯ ಆನಂದವನ್ನು ಶುದ್ಧ ಮನಸ್ಸಿನಿಂದ ಬೀರಲಿಲ್ಲ; ಕೇವಲ ದುಡ್ಡಿಗಾಗಿ

ಕಲೆಯನ್ನು ಮಾರಿ ರಮೇಶರ ಆಶಯಕ್ಕೆ ದೊಡ್ಡ ಕೊಡಲಿ ಪೆಟ್ಟನ್ನೇ ಕೊಟ್ಟಿದ್ದಾನೆ! ಇಂದು ಸುರೇಶನು ಹೊಗಳುವುದು ತನಗೆ ಧನ ಸಹಾಯ ಮಾಡಿದ ದೊಡ್ಡ ದೊಡ್ಡ ಚಿತ್ರ ನಿರ್ಮಾಪಕರ ಕಂಪೆನಿಗಳನ್ನು, ಆದರೆ ಕಲಾದಾನ ಮಾಡಿದ ನಿಷ್ಕಾಮ ಯೋಗಿ ರಮೇಶರು ಸುರೇಶನ ಸ್ಮೃತಿ ಪಟಲದಲ್ಲಿ ಕಾಣದಾಗಿದ್ದಾರೆ

ರಮೇಶರು ಅನುಭವಿಸಿದ ಎರಡನೆಯ ಪೆಟ್ಟೇನೆಂದರೆ ಕಂಪೆನಿಯು ಒಡೆದು ಚೂರಾದಾಗ; ಆಗ ಕಂಪೆನಿಯ ಪುನರ್ಜನ್ಮವನ್ನೀಯಲು ಮ್ಯಾನೇಜರನು ಅಸಮರ್ಥನಾದನು. ರಮೇಶರಂತಹ ಪ್ರಖ್ಯಾತ ನಟ ರನ್ನೂ ಅವರು ಮಾಡಿದ ಸೇವೆಯನ್ನೂ ಲೆಕ್ಕಿಸದೆ ತಾನು ಮಾತ್ರ ಯಾವುದೋ ಸರಕಾರಿ ಕೆಲಸದ ನೆಪದಿಂದ ಕಂಪೆನಿಯನ್ನು ಅದೇ ಅವಸ್ಥೆ ಯಲ್ಲಿ ಬಿಟ್ಟು ಮರೆಯಾದನು. ನಿರಪರಾಧಿ ರಮೇಶರ ಮೇಲೆ ಕಂಪೆ ನಿಯ ಸಾಲ ವಗೈರೆಗಳು ಬಂದು ಸೇರಿ ಬಹಳ ಬೇಸರಗೊಳಿಸಿತು.

ಹೊಗಳುತ್ತಿದ್ದ ಜನ ಆಗ ರಮೇಶರಿಗೆ ಯಾವ ಆರ್ಥಿಕ ನೆರ ವನ್ನೂ ನೀಡಲಿಲ್ಲ. ಇಡೀ ಕಂಪೆನಿಯ ಹೊಲಸು ವ್ಯಾಪಾರವನ್ನು ನೋಡಿ ಬಹಳ ಅಸಹ್ಯಗೊಂಡು ರಮೇಶರು ಈ ದೇಶವನ್ನೇ ಬಿಟ್ಟು ಕಾಣದ ದೇಶಕ್ಕೆ ಹೊರಟರು. ಮತ್ತೆ ತಮ್ಮ ದೇಶಕ್ಕೆ ಹಿಂತಿರುಗಿ ಬರ ಲಿಲ್ಲ. ಆದ್ದರಿಂದ ಅವರು ಸತ್ತಿರಬಹುದೆಂದು ಮುಂದಿನ ಜನಾಂಗ ಭಾವಿಸಿತು!...."

ಈ ಮಾತುಗಳನ್ನು ಕೇಳಿದೊಡನೆ ಸಭಿಕರು ಅಚ್ಚರಿಗೊಂಡರು. ನಿರ್ಮಲೆಯಂತೂ ಯಾವುದೋ ಕನಸಿನ ಲೋಕದಲ್ಲಿದ್ದಂತೆ ತಗ್ಗಿಸಿದ ಮುಖವನ್ನು ಮೇಲೆತ್ತಲಿಲ್ಲ. ಅವತ್ತಿನ ಕಾರ್ಯಕ್ರಮದ ಸಂಗೀತ ನಾಟಕ ಮೊದಲಾದುವು ಯಾರಿಗೂ ಜ್ಞಾಪಕಕ್ಕೆ ಬರಲಿಲ್ಲ. ಗಡಿ ಯಾರದ ಕಡೆ ಯಾರ ಗಮನವೂ ಹೋಗಲಿಲ್ಲ.

ಹುಚ್ಚನು ಮತ್ತೆ ಪ್ರಾರಂಭಿಸಿ, "ಮೂರನೆಯ ಪೆಟ್ಟು ರಮೇಶರ ಮೇಲೆ ತುಂಬ ಪರಿಣಾಮ ಮಾಡಿತು. ತಾವು ಹೋದೆಡೆಯಲ್ಲೆಲ್ಲಾ

ಅದು ಶನಿಯಂತೆ ಕಾಡಿತು. ಅದೇ ನಿರ್ಮಲೆಯ ನೆನಪು! ತಮ್ಮಿಂದ ತಯಾರಾದ ನಿರ್ಮಲೆಯು ದೇಶ-ವಿದೇಶ ಪತ್ರಿಕೆಗಳಲ್ಲಿ ವಿವಿಧ ಭಾವ ಭಂಗಿಗಳಲ್ಲಿ ಕಂಡಾಗಲಂತೂ ರಮೇಶರು ಬಹಳ ವ್ಯಸನಪಟ್ಟರು. ಚಿಕ್ಕ ದೊಡ್ಡ ವ್ಯಾಪಾರಿಗಳು ನಿರ್ಮಲೆಯ ಭಾವಚಿತ್ರದಡಿಯಲ್ಲಿ ತಮ್ಮ ವ್ಯಾಪಾರದ ಮುನ್ನಡೆಯನ್ನು ಸಾರಿದ್ದರು. ವಿವಿಧ ಪತ್ರಿಕೆಯ ಸಂಪಾದಕರುಗಳು ನಿರ್ಮಲೆಯ ದೇಹ ಸೌಂದರ್ಯದ ಮೇಲೆ ಪೈಪೋಟಿಯಿಂದ ಬರೆಯುತ್ತಿದ್ದ ಲೇಖನಗಳಂತೂ 'ಕಲೆಯು ಕೇವಲ ಮಾರಾಟದ ವಸ್ತು' ಎನ್ನುವಂತೆ ಸಾರಿದ್ದವು. ಇದನ್ನೆಲ್ಲ ನೋಡಿದ ರಮೇಶರಿಗೆ ಒಂದು ತರಹ ಜುಗುಪ್ಸೆ ಬಂದು ಬೀದಿ ಬೀದಿ ಅಲೆಯಲಾರಂಭಿಸಿದರು. ಕೈಯಲ್ಲಿ ಕಾಸಿರಲಿಲ್ಲ. ಅವರ ಮಾಸಿದ ಬಟ್ಟೆ, ದಾಡಿಗಳನ್ನು ನೋಡಿ ಹೊರದೇಶದವರು ಯಾರೂ ಇವರನ್ನು ರಮೇಶರೆಂದು ತಿಳಿಯಲಾಗಲಿಲ್ಲ. ತಮ್ಮ ಭಾವಚಿತ್ರ ಅನಾವರಣೋತ್ಸವಗಳು ತಮ್ಮ ದೇಶದಲ್ಲಿ ಆಗುತ್ತಿದ್ದ ವಿಷಯವು ಪತ್ರಿಕೆಗಳ ಮೂಲಕ ಅವರ ಗಮನಕ್ಕೆ ಬಂದಿದ್ದವು. ಬದುಕಿದ್ದಾಗಲೇ ದಿವಂಗತದ ಮಹತ್ವವನ್ನು ಕಂಡರು.

ಹೀಗೆ ಹುಚ್ಚರಂತಿದ್ದ ರಮೇಶರನ್ನು ಕಳ್ಳರೆಂದು ಭಾವಿಸಿ ಪೋಲೀಸಿನವರು ಗುಮಾನಿಯ ಮೇಲೆ ಹಿಡಿದರು. ಅದೂ ಅಲ್ಲದೆ ಹತ್ತು ವರುಷಗಳಿಂದ ಒಬ್ಬ ಭಾರಿ ಕೇಡಿ ಸಿಕ್ಕಿರಲಿಲ್ಲ. ಅವನೇ ಇವನೆಂದು ಭಾವಿಸಿ ರಮೇಶರ ಮೇಲೆ ಕೇಸು ಹಾಕಲ್ಪಟ್ಟಿತು. ಅಂತೂ ಕಡೆಗೆ ಒಬ್ಬ ನಿಪುಣ ಕಳ್ಳನನ್ನು ಹಿಡಿದೆವಲ್ಲಾ ಎಂದು ಇಡೀ ಪೋಲೀಸು ಶಾಖೆಯು ಹಿಗ್ಗಿತು. ತಾವು ಯಾರೆಂಬುದನ್ನು ರಮೇಶರು ಯಾರಿಗೂ ಹೇಳಲಿಲ್ಲ.

ಭಾರಿ ಕೇಡಿಯ ಅನೇಕ ಕಳ್ಳತನಗಳ ಪಟ್ಟಿಯನ್ನು ಓದಿದಾಗ ಅದೆಲ್ಲವನ್ನೂ ತಾವೇ ಮಾಡಿದ್ದೆಂದು ಒಪ್ಪಿಕೊಂಡರು! ತೀರ್ಪಿನ ಪ್ರಕಾರ ಹತ್ತು ವರ್ಷ ಕಠಿಣ ಶಿಕ್ಷೆಯನ್ನು ಅನುಭವಿಸಿದರು. ನಿನ್ನೆಗೆ ಆ ಶಿಕ್ಷೆ ಮುಗಿಯಿತು. ಇವತ್ತು ರಮೇಶರು ಹೊರಕ್ಕೆ ಬಂದರು. ದಾರ ಕಿತ್ತ ಗಾಳಿಯ ಪಟದಂತೆ ಒಂದೇ ಸಮನೆ ಇಲ್ಲಿಯ ತನಕ ಓಡಿಬಂದಿದ್ದಾರೆ.

ನಿರಾಶ್ರಿತರಿಗಾಗಿ ಏರ್ಪಡಿಸಿರುವ ಸಮಾರಂಭಕ್ಕೆ ಸಂಪೂರ್ಣ ನಿರಾಶ್ರಿತ ರಾಗಿ ಬಂದಿದ್ದಾರೆ.

ಪಕ್ಕದಲ್ಲಿರುವ ಚಿತ್ರ ನೋಡಿ; ಅಲ್ಲಿರುವ ಮುಖಕ್ಕೂ ಇಲ್ಲಿ ಮಾತನಾಡಿದರೆ ಅಲುಗಾಡುವ ಗಡ್ಡದ ಮುಖಕ್ಕೂ ವ್ಯತ್ಯಾಸ ನೋಡಿ. ನೀವೇನೊ ಪ್ರತಿದಿನ ಗಡ್ಡ ಬೆಳೆದರೂ ತಕ್ಷಣ ಕತ್ತಿಯನ್ನು ತೆಯ್ದು ದೇವರು ಕೊಟ್ಟ ಕೂದಲನ್ನು ತೆಗೆದುಬಿಡುವಿರಿ. ಆದರೆ ನಾನು ಗಡ್ಡ ಬಿಟ್ಟಿರುವ ಉದ್ದೇಶವೇ ಬೇರೆ. ಅದರ ಪ್ರತಿಯೊಂದು ಎಳೆಯೂ ಬೆಳ್ಳಗಾಗಿ ನನ್ನ ಮನಸ್ಸನ್ನು ಪ್ರತಿಬಿಂಬಿಸುತ್ತದೆ. ಅಂತೆಯೇ ನನ್ನ ಜೀವನದಲ್ಲಿ ಅನುಭವ ಎಂಬ ಶಬ್ದ ವಿಶಾಲವಾಗಿದೆ. ಈಗ ತಮ್ಮ ಮುಂದೆ ಹೊಸ ಅನುಭವವೊಂದು ಆಗ ಬೇಕಾಗಿದೆ. ಅದನ್ನು ನಾನೇ ಸ್ವಾಗತಿಸಲು ಬಂದಿದ್ದೇನೆ. ತಮ್ಮ ಮೇಲಿನ ಹೊಗಳಿಕೆಯನ್ನು ನಿರ್ಮಲೆಯ ಸವಿ ನುಡಿಗಳಿಂದ ಕೇಳಲು ತಾವೇ ಪ್ರತ್ಯಕ್ಷವಾಗಿ ನಿಮ್ಮ ಮುಂದೆ ಬಂದು ನಿಂತಿದ್ದಾರೆ. ಇಗೋ ರಮೇಶರು! ಹತ್ತು ವರುಷಗಳಿಂದ ಕಾಣದ ಜನಸಮೂಹವನ್ನು ಇಂದು ಗುಂಪಾಗಿ ನೋಡಿ ನನ್ನ ಹೃದಯ ಯಾವುದೊ ಅವ್ಯಕ್ತ ಆನಂದದಿಂದ ತುಂಬಿದೆ…" ಎಂದು ಎದೆಯನ್ನು ತಟ್ಟಿಕೊಂಡನು.

ಮುಂದಿನ ಕರ್ಚಿಯಲ್ಲಿ ಕುಳಿತಿದ್ದ ಸೇಠರು ಮೆಲ್ಲಗೆ ಕೈ ಚಿತ್ತದಿಂದ ಕುರ್ಚಿಯನ್ನು ಹಿಂದಕ್ಕೆ ಸರಿಸಿಕೊಂಡರು. ಹುಚ್ಚನ ಮಾತುಗಳನ್ನು ಕೇಳಿದ ಎಲ್ಲರೂ ಬೆಪ್ಪರಾದರು. ಸತ್ತ ಮನುಷ್ಯ ಎದ್ದು ನಿಂತ ಹಾಗೆ ಭಾಸವಾಯಿತು. ಸಭಿಕರು ಉತ್ತಮ ಕಲಾವಿದನ ಹುಚ್ಚು ಜೀವನವನ್ನು ಅವನ ಬಾಯಿಂದಲೇ ಕೇಳಿದ್ದು ಇದೇ ಮೊದಲು. ನಿರ್ಮಲೆಯಂತೂ ಸಜೀವ ಶವದಂತೆ ತಲೆ ತಗ್ಗಿಸಿದಳು. ಜನರೆಲ್ಲರ ಸೂಚನೆಯಿಂದ ಕಾರ್ಯದರ್ಶಿಗಳು ರಮೇಶರಿಗೆ ಹಾರ ತುರಾಯಿಗಳನ್ನರ್ಪಿಸಿದರು.

ಕಡೆಗೆ ರಮೇಶರೆದ್ದು ಹೀಗೆಂದರು—"ಅಂತೂ ನಿಜವಾಗಿ ಕಳ್ಳ ತನ ಮಾಡದೆಯೇ ನಾನು ಕಳ್ಳನಾದೆ. ಆದರೆ ನಿಜವಾದ ಕಳ್ಳರಾರು? ನನ್ನಲ್ಲಿ ಅಡಗಿದ್ದ ಕಲಾದೇವತೆಯನ್ನು ಕದ್ದು ಅದರ ದುರುಪಯೋಗ

ಪಡಿಸಿಕೊಂಡು ಇಂದು ಬೆಳಗುತ್ತಿರುವ ಸುರೇಶನೋ? ಅಥವಾ ನನ್ನ ಹೆಸರು ಹೇಳಿಕೊಂಡು ನನ್ನ ಭಾವ ಚಿತ್ರಗಳನ್ನು ಅನಾವರಣ ಮಾಡುತ್ತಾ ಹೊಗಳಿಕೆಯ ಪುಷ್ಪಬಾಣಗಳಿಂದಲೇ ನನ್ನನ್ನು ನಿಜವಾಗಿಯೂ ಸಾಯಿಸಿದ ನಿರ್ಮಲೆಯೋ? ಅಥವಾ ಒಬ್ಬನನ್ನು ಇರುವಾಗ ಲಕ್ಷಿಸದೆ ಸತ್ತ ಮೇಲೆ ವಿಪರೀತವಾಗಿ ಹೋಗಳಲು ಮನರಂಜನೆಯ ಕಾರ್ಯಕ್ರಮಗಳನ್ನು ಏರ್ಪಡಿಸುವ ಸಭಿಕರೋ? ಇದನ್ನು ನೀವೇ ವಿಮರ್ಶಿಸಬೇಕು...."

ಈ ತರ್ಕವನ್ನು ರಮೇಶರ ಬಾಯಿಂದ ಕೇಳಿದೊಡನೆಯೇ ಎಲ್ಲರೆದುರಿಗೂ ಪ್ರಶ್ನಾಕಾರದ ಭೂತವೆದ್ದು ನಿಂತಿತು. ನಿರ್ಮಲೆಯ ಮನಸ್ಸು 'ನಾನು ಕಳ್ಳಿ! ರಮೇಶನಲ್ಲ' ಎಂದಿತು ಸಭಿಕರ ಮನಸ್ಸೆಲ್ಲ ಒಂದೆಡೆ ಸೇರಿ 'ನಾವೇ ಕಳ್ಳರು! ರಮೇಶನಲ್ಲ' ಎಂದುಸುರಿದವು.

ಇಡೀ ಕಲಾಮಂಟಪದ ಜನತೆ ಕಿವಿಯೊಡೆಯುವ ಹಾಗೆ ಜಯಕಾರ ಮಾಡಿತು. ರಮೇಶರನ್ನು ನೋಡಲು ವೇದಿಕೆಯ ಬಳಿ ನುಗ್ಗತೊಡಗಿತು. ಅಷ್ಟರಲ್ಲಿ ರಮೇಶರೇ ವೇದಿಕೆಯ ಮೇಲಿಂದ ಛಂಗನೆ ಕೆಳಕ್ಕೆ ಧುಮುಕಿದರು. ಮುಖ ರೌದ್ರರೂಪ ತಾಳಿತ್ತು. ಎಲ್ಲೋ ಸುಪ್ತವಾಗಿದ್ದ ಶಕ್ತಿ ಹೊರಹೊಮ್ಮಿತ್ತು. ಇದ್ದಕಿದ್ದಂತೆ ಎದುರಿಗಿದ್ದವರಿಗೆ ಹೊಡೆಯಲು ಪ್ರಾರಂಭಿಸಿಬಿಟ್ಟರು. ಬುದ್ಧಿ ಸ್ಥಿಮಿತದಲ್ಲಿ ಇದ್ದಂತೆ ಕಾಣಲಿಲ್ಲ. ತಕ್ಷಣ ರಮೇಶರನ್ನು ನಾಲ್ಕು ಜನ ಹಿಡಿದು ಕಾರಿಗೆ ಹಾಕಿದರು. ಅಲ್ಲೇ ಬಂದಿದ್ದ ಡಾಕ್ಟರೊಬ್ಬರು ಕೂಡ ಇತರರೊಡನೆ ಕಾರಿನಲ್ಲಿ ಹತ್ತಿದರು. ರಮೇಶರನ್ನು ಆಸ್ಪತ್ರೆಗೆ ಸೇರಿಸಲಾಯಿತು.

ಮಾರನೆಯ ದಿನ ನಿರ್ಮಲೆ ಆಸ್ಪತ್ರೆಗೆ ಹೋಗಿದ್ದಾಗ ರಮೇಶರ. ಅವಳನ್ನು ಗುರುತಿಸಲೇ ಇಲ್ಲವಂತೆ. ನಿರ್ಮಲೆ ದುಃಖದಿಂದ ಕಣ್ಣೀರು ಹಾಕುತ್ತ ಹೊರಬಂದಳಂತೆ. ಆ ಸಮಾಚಾರ ಕೇಳಿದ ಸೇಠರು ಮೊದಲೇ ಭಯಪಟ್ಟು ಆಸ್ಪತ್ರೆಗೆ ಹೋಗಲು ಹಿಂಜರಿದು ಬಿಟ್ಟರು. ಆದರೆ ಮತ್ತಿತರರಿಂದ ವರ್ತಮಾನ ತಿಳಿದುಕೊಳ್ಳುತ್ತಿದ್ದರು.

ಕಲಾಮಂಡಲಿಯ ಉತ್ಸವ ಕೊನೆಗೊಂ    ನಿರೀಕ್ಷಿಸಿದ್ದುದ ಕ್ಕಿಂತ ಹೆಚ್ಚಿನ ಹಣ ನಿರಾಶ್ರಿತರಿಗಾಗಿ ಅರ್ಪಿಸಲ್ಪಟ್ಟಿತು. ಕೇಂದ್ರ ಸಮಿತಿಯವರು ಕಲಾಮಂಡಲಿಯ ಸ್ತುತ್ಯ ಕಾರ್ಯಕ್ಕೆ ಹೊಗಳಿ ಸಂದೇಶಗಳನ್ನು ಕಳಿಸಿದ್ದರು. ಸೇಠರನ್ನೂ ಮತ್ತಿತರ ಮಹನೀಯರನ್ನೂ ಕೇಂದ್ರ ಸಮಿತಿಗೆ ಸದಸ್ಯರನ್ನಾಗಿ ತೆಗೆದುಕೊಳ್ಳಲಾಯಿತು. ಕೇಂದ್ರ ಸಮಿತಿಯ ಪರವಾಗಿ ಮುಂಬಯಿಗೆ ತೆರಳಿ ನಿರಾಶ್ರಿತರಿಗಾಗಿ ಹಣ ಶೇಖರಿಸಿದ್ದಕ್ಕಾಗಿ ನನ್ನನ್ನೂ ಕೂಡ ಅಭಿವಂದಿಸಿ ಕಾಗದ ಬರೆದಿದ್ದರು. ಇನ್ನೂ ಸ್ವಲ್ಪ ದಿನ ಮುಂಬಯಿಯಲ್ಲಿಯೇ ಇದ್ದು ಪ್ರಚಾರಕಾರ್ಯ ನಡೆಸಬೇಕೆಂದು ಕೇಳಿಕೊಂಡಿದ್ದರು. ಆದರಿಂದ ನಾನು ತಕ್ಷಣ ಡೆಲ್ಲಿಗೆ ಹೋಗಲಾಗಲಿಲ್ಲ.

ಮುಂಬಯಿಯಲ್ಲಿದ್ದರೂ ನನ್ನ ಮನಸ್ಸೆಲ್ಲ ಡೆಲ್ಲಿಯಲ್ಲಿಯೇ ಇತ್ತು. ಅದೂ ನನ್ನ ಶಿಬಿರದ ಯೋಚನೆಯೇ ಕಾಡಿಸುತ್ತಿತ್ತು. ನಿರಾಶ್ರಿತರಿಗಾಗಿ ಹಣ ಶೇಖರಿಸುತ್ತಿದ್ದರೂ ಅದರಿಂದ ನನ್ನ ಶಿಬಿರದವರಿಗೇನೂ ಪ್ರಯೋ ಜನವಿರಲಿಲ್ಲ. ಅಲ್ಲಿಯವರಿಗೆ ಹಣದ ಕೊರತೆಯೇನೂ ಇರಲಿಲ್ಲ. ಅವರ ಸಮಸ್ಯೆಯೇ ಬೇರೆ ರೀತಿಯದು. ಹೊರಗಿನ ದುರ್ಬಲತೆಗಿಂತಲೂ ಅವರಿಗೆ ಮಾನಸಿಕವಾಗಿದ್ದ ಸುಪ್ತಯೋಚನೆಗಳೇ ಜಾಸ್ತಿಯಾಗಿತ್ತು. ಮನುಷ್ಯನ ಆಹಾರ ಬಟ್ಟೆಯ ಕೊರತೆಯನ್ನು ಹೇಗಾದರೂ ಸುಧಾರಿಸಬಹುದು. ಆದರೆ ಅದರ ಸುಧಾರಣೆಯಾದ ಮೇಲೆ ಎದ್ದೇಳುವ ವಿಚಿತ್ರ ಯೋಚನೆ ಗಳನ್ನೆದುರಿಸುವುದು ಸ್ವಲ್ಪ ಕಷ್ಟ. ಅದರಲ್ಲೂ ಒಬ್ಬ ಹೆಂಗಸಿನ ಸುತ್ತ ವಿಷವ್ಯೂಹ ಏನಾದರೂ ಏರ್ಪಟ್ಟರೆ ಅದನ್ನು ಭೇದಿಸಲಸಾಧ್ಯ. ಅಂತೂ ಶಿಬಿರದ ಕಾರ್ಯಕಲಾಪಗಳನ್ನು ಆಶಾ ವಹಿಸಿಕೊಂಡಿರುವುದರಿಂದ ಯಾವ ತೊಂದರೆಯೂ ಆಗಲಾರದೆಂಬ ಧೈರ್ಯ ನನ್ನಲ್ಲಿತ್ತು.

ಒಂದು ದಿನ ಮಧ್ಯಾಹ್ನ ಸೇಠರು ನಾನಿದ್ದ ಕೊಠಡಿಗೆ ಅಪರೂಪ ವಾಗಿ ಬಂದರು. ಅವರ ಮುಖ ಎಡವಿ ಬಿದ್ದು ಬಂದವರಂತೆ ಕಾಣು ತ್ತಿತ್ತು. ಯಾವುದೋ ಕಾತರದ ವಿಷಯ ಹೇಳುವುದಕ್ಕೆ ಬಂದಿದ್ದಾರೆನ್ನು ವುದರಲ್ಲಿ ಸಂಶಯವಿರಲಿಲ್ಲ.

"ರಮೇಶರು ಮಾತನಾಡುತ್ತಲೇ ಇದ್ದಕ್ಕಿದ್ದಂತೆ ಹೋಗಿಬಿಟ್ಟರಂತೆ. ನಿನ್ನೆ ದಿನ ನೋಡಲು ಹೋದವರನ್ನು ಚೆನ್ನಾಗಿ ಬಯ್ದು ಓಡ್ಸಿಬಿಟ್ಟ ರಂತೆ. ಅದೇ ರೀತಿ ರಾತ್ರಿಯೆಲ್ಲ ತಲೆ ಬಿಸಿಯಾಗಿ ಬೆಳಗಿನ ಝಾವ ಕಾಲವಾಗಿಹೋದರು. ಅಬ್ಬ! ಎಂತಹ ಒಳ್ಳೆಯ ಆಸಾಮಿಗೆ ಈ ದುರ್ಗತಿ ಬಂತಲ್ಲಾ, ಸ್ವಾಮಿ" ಎಂದು ಸೇಠರು ಮರುಕಪಟ್ಟರು.

ನನಗೂ ಆಶ್ಚರ್ಯವಾಯಿತು. ಜೀವನದಲ್ಲಿ ಪಡಬಾರದ ಕಷ್ಟ ವನ್ನು ಪಟ್ಟು ಕಡೆಗೆ ಈ ರೀತಿ ದುರ್ಗತಿಗೊಳಗಾದರೆ ಅವರ ಮನಸ್ಸಿನ ಪರಿಣಾಮ ಎಂತಹುದೆನ್ನುವುದನ್ನು ಊಹಿಸಲೂ ಅಸಾಧ್ಯವಾಯಿತು. ತಾವು ಕಲಿತ ಕಲೆಯನ್ನು ಮತ್ತೊಬ್ಬರಿಗೆ ಉದಾರವಾಗಿ ದಾನಮಾಡಿ ದುದೇ ಅವರಿಗೆ ಅಪಾಯಕರವಾಗಿ ಪರಿಣಮಿಸಿತು. ಅವರಿಂದಲೇ ಮುಂದೆ ಬಂದವರಾದರೂ ಶಿಷ್ಯಂದಿರು ಗುರುವಿನ ಹೆಸರನ್ನು ಮರೆತುಬಿಡು ತ್ತಾರೆ. ತಾವು ಯಾರ ಹಿನ್ನೆಲೆಯೂ ಇಲ್ಲದೆ ಹೆಸರು ಗಳಿಸಿದ್ದೇವೆಂದು ಜಂಬ ಕೊಚ್ಚಿಕೊಳ್ಳುತ್ತಾರೆ. ಕಾಲಕಾಲಕ್ಕೆ ತಕ್ಕಂತೆ ಜನಸಮುದಾಯ ವನ್ನು ಸಂತೋಷಗೊಳಿಸಬೇಕೆಂಬ ಒಂದೇ ಉದ್ದೇಶವನ್ನಿಟ್ಟುಕೊಂಡು ಅಭಿನಯ ಮಾಡುತ್ತಾರೆ. ಆದರೆ ಜನತೆಯ ವಿವೇಚನೆಯ ಮಟ್ಟವನ್ನು ಸ್ವಲ್ಪವೂ ವಿಮರ್ಶಿಸದೆ ತಾವು ಕೂಡ ಅದೇ ಮಟ್ಟಕ್ಕೆ ಇಳಿಯುತ್ತಾರೆ. ಹಾಗೆ ನೋಡಿದಲ್ಲಿ ಎಲ್ಲ ಕಲೆಯೂ ಹುಟ್ಟಿರುವುದು ಜನರ ಮನಸ್ಸನ್ನು ಸಂತೋಷಗೊಳಿಸುವುದಕ್ಕೇ ಹೊರತು ಮತ್ತಾವುದಕ್ಕೂ ಅಲ್ಲ; ಆದರೆ ಜನತೆಗೆ ಆನಂದವನ್ನು ನೀಡುತ್ತೇನೆಂದು ಹೊರಟು ಜನ ಹೇಳಿದಂತೆ ಕುಣಿಯುವುದು ಒಳ್ಳೆಯದಲ್ಲ. ಕಲೆಗೆ ಒಂದು ಗೌರವವಿದೆ. ಆ ಗೌರವದ ಮಟ್ಟಕ್ಕೆ ಜನ ಬರದಿದ್ದರೂ ಕಲೆ ತನ್ನ ಸ್ಥಾನಗೌರವವನ್ನು ಕಳೆದುಕೊಳ್ಳ ಕೂಡದು. ಸ್ವಲ್ಪ ಸ್ವಲ್ಪವಾಗಿ ಜನರಿಗೆ ತಿಳಿಯದಂತೆಯೆ ಜನ ತನ್ನ ಸ್ಥಾನಕ್ಕೆ ಬರುವಂತೆ ಕಲೆ ಪ್ರೇರೇಪಿಸಬೇಕು. ಅಂತಹ ಕಲೆಯೇ ನಿಜ ವಾದ ಕಲೆ. ಆ ಕಲೆಯ ಉಪಾಸಕರೇ ರಮೇಶರು. ಆದರೆ ಅವರಿಗೆ ಎಂತಹ ಗೋರಿಯಾಯಿತು? ಆ ಗೋರಿಯ ಮೇಲೆ ಅವರ ಶಿಷ್ಯಂದಿರು ತಮ್ಮ ಆಶಾಗೋಪುರವನ್ನು ಕಟ್ಟಲು ಸಾಧ್ಯವೇ?

ಇದು ಒಳ್ಳೆಯವರಿಗೆ ಕಾಲವಲ್ಲ. ಆದ್ದರಿಂದಲೇ ಇಂದಿನ ಜನಕ್ಕೆ ಕೀಳುಮಟ್ಟದ ಕಲೆ ಬೇಕು. ಅದನ್ನು ಪ್ರತಿಬಿಂಬಿಸುವಂತೆ ನೂರಾರು ಕಲಾವಿದರು ಹುಟ್ಟಿಕೊಂಡಿದ್ದಾರೆ. ಮಾನ ಮರ್ಯಾದೆಗಳನ್ನು ಬಿಟ್ಟು ನಗ್ನವಾಗಿ ಜನಸಮುದಾಯದ ಮುಂದೆ ನಿಲ್ಲುವ ಕಲಾವಿದೆಯರಿಗಾಗಿ ಜನ ಕ್ಷಣಕ್ಷಣವೂ ಹಾತೊರೆಯುತ್ತಿರುತ್ತಾರೆ. ಅದರಿಂದಲೇ ತಮ ಗೊಂದು ಸುಪ್ರಸಿದ್ಧ ಹೆಸರು ಬರುವುದೆಂದು ನಂಬಿರುವವರೂ ಇದ್ದಾರೆ. ತಮ್ಮ ಭಾವಚಿತ್ರಗಳನ್ನು ನೋಡಿ ತಾವೇ ಸಂತೋಷಪಡುತ್ತಾರೆ. ಅದಕ್ಕೆ ತಕ್ಕಂತೆ ಅವರ ಚಿತ್ರವಿರುವ ಪತ್ರಿಕೆಗಳಿಂದ ಪತ್ರಿಕೋದ್ಯೋಗಿಗಳು ಪ್ರಚಾರಕಾರ್ಯದಲ್ಲಿ ಮುನ್ನಡೆಯಿಡುತ್ತಾರೆ. ಇದರ ಪರಿಣಾಮವೇನು ? ಮುಂದಿನ ಪ್ರಜೆಗಳಾಗುವ ಯುವಕ ಯುವತಿಯರಲ್ಲಿ ಅದೇ ಚಿತ್ರ ಕಣ್ಮುಂದೆ ನಿಂತು ಸ್ವತಂತ್ರ ವ್ಯಕ್ತಿತ್ವವನ್ನೇ ನಾಶಮಾಡಿಬಿಡುತ್ತದೆ. ತಮ್ಮಲ್ಲಿ ತಾವೇ ಜಗತ್ತನ್ನು ಕಾಣಲು ಬಯಸಿ ದುಶ್ಚಟಗಳಿಂದ ಜೀವ ಮಾನವನ್ನೇ ಕೆಡಿಸಿಕೊಳ್ಳುತ್ತಾರೆ. ಇಂತಹವರಿಂದ ದೇಶ ಉದ್ಧಾರ ವಾಗುವ ಬಗೆ ಹೇಗೆ ?

ಆದರೆ ಅಂಥವರಿಂಲೇ ದೇಶ ಉದ್ಧಾರವಾಗುತ್ತಿದೆ. ಕೆಟ್ಟದ್ದರಲ್ಲೇ ಒಳ್ಳೆಯದನ್ನು ಕಾಣುವ ವಿಚಿತ್ರ ಸನ್ನಿವೇಶ ಪ್ರಾಪ್ತವಾಗಿದೆ. ಸಿನಿಮಾ ಕಲಾವಿದೆಯರನ್ನು ಕರೆಸಿ ಕೆಲವು ವೇಳೆ ಎಷ್ಟೋ ಮರ್ಯಾದೆಯ ಜೀವನ ನಡೆಸುತ್ತಿರುವ ಸಿನಿಮಾತಾರೆಯರು ಕೂಡ ಸಭಿಕರಿಂದ ಕೀಳು ಮಟ್ಟದ ಹಾಸ್ಯವನ್ನು ಕೇಳಬೇಕಾಗುತ್ತದೆ. ಆ ಸಮಾರಂಭದಲ್ಲಿ ಬಂದ ಅಪಾರ ದ್ರವ್ಯದಲ್ಲಿ ಅರ್ಧವನ್ನು ದೇಶ ಸೇವೆಯ ಕಾರ್ಯಕ್ಕಾಗಿ ಅರ್ಪಿಸುವುದರಲ್ಲಿ ಯಾವ ಅಡ್ಡಿ ಆತಂಕಗಳೂ ಇರುವುದಿಲ್ಲ.

ಹಾಗೆಯೆ ಕಲಾಮಂಟಪದ ಉತ್ಸವಗಳಿಂದ ಎಷ್ಟೋ ನಿರಾಶ್ರಿತರು ಬದುಕಿ ಹೋಗಿದ್ದಾರೆನ್ನುವುದರಲ್ಲಿ ಸಂಶಯವಿಲ್ಲ. ರಮೇಶರಂಥ ವ್ಯಕ್ತಿ ಗಳು ಜನತೆಯನ್ನು ಬೈಯ್ದರೂ ವಸೂಲಿಯಾದ ದುಡ್ಡಿಗೆ ಯಾವ ಮೋಸವೂ ಆಗಲಿಲ್ಲ. ಅವರನ್ನೂ ಒಬ್ಬ ನಾಟಕ ಸಾಗಿಸುವಂತೆ

ಅವರ ಮಾತಿನ ನಾಟಕೀಯತೆಗೆ ಜನ ಮೆಚ್ಚಿದರು. ಅಂತೂ ಕಲಾ ಮಂಟಪದಂಥ ಉತ್ಸವಗಳು ನಿರಾಶ್ರಿತ ಸಮಸ್ಯೆಯ ಪರಿಹಾರಕ್ಕೆ ಉತ್ತಮವಾದ ಸಾಧನಗಳೆಂದು ಕೇಂದ್ರ ಸಮಿತಿಯವರು ತಮ್ಮ ಒಪ್ಪಿಗೆ ಯನ್ನು ಸಂತೋಷವಾಗಿ ತಿಳಿಸಿಬಿಟ್ಟರು.

ಕಲೆಯ ಸ್ವರೂಪ ಒಳ್ಳೆಯದಾಗಿರಲಿ ಕೆಟ್ಟದಾಗಿರಲಿ ಅದರಿಂದ ದೇಶಸೇವೆಯಾಗಬಲ್ಲದು. ಈ ಪರಿಸ್ಥಿತಿಯಲ್ಲಿ ಕೀಳು ಮಟ್ಟದ ಕಲಾವಿದ ರನ್ನು ಕೈ ಬಿಟ್ಟರೆ ನಿರಾಶ್ರಿತ ಸಮಸ್ಯೆಯಂತಹ ಘೋರ ಸಮಸ್ಯೆಗೆ ಆರ್ಥಿಕ ಸಹಾಯ ಹೇಗೆತಾನೆ ದೊರೆಯುವುದು? ಅದರಿಂದ ಕೀಳು ಮಟ್ಟದ ವರನ್ನೇ ದೊಡ್ಡವರನ್ನಾಗಿ ಮಾಡಿ ದೇಶಸೇವೆ ಮಾಡತೊಡಗಿದರೆ ಒಂದು ಒಳ್ಳೆಯ ಮಹತ್ಕಾರ್ಯದ ಜೊತೆಗೆ ಕೆಟ್ಟದ್ದನ್ನೂ ಪೋಷಕವಾಗಿ ತಂದಂತಾಗ ಲಿಲ್ಲವೇ? ಹಾಗಾದರೆ ಕಡೆಯ ಗುರಿಗಿಂತಲೂ ಅದನ್ನು ಸಾಧಿಸುವ ರೀತಿಯ ಬಗ್ಗೆ ಹೆಚ್ಚು ಗಮನ ಕೊಡಬೇಕು. ಅಂದರೆ ಎಲ್ಲದರ ಮೂಲ ಸಮಸ್ಯೆ ಯನ್ನು ಕಂಡು ಹಿಡಿಯಬೇಕು. ಅಂತಹ ಆಳವಾದ ಪರಿಶೀಲನೆಗೆ ಹೊರ ಟರೆ ನಮ್ಮ ಜೀವಮಾನವೇ ಸಾಲದಾಗುತ್ತದೆ. ಎಲ್ಲೆಲ್ಲಿ ನೋಡಿದರೂ ಸಂದೇಹಗಳು ಹುಟ್ಟಿ ಸುಮ್ಮನೆ ಕುಳಿತುಕೊಂಡುಬಿಡಬೇಕಾಗುತ್ತದೆ. ಹಗುರವಾಗಿ ತೇಲಿಸಿ ನೋಡುವವನೇ ಲೋಕದಲ್ಲಿ ಬದುಕಬಲ್ಲ.

ಇವೇ ಮುಂತಾದ ವಿಷಯಗಳನ್ನೇ ಚರ್ಚಿಸುತಿದ್ದಾಗ ಮತ್ತೊಂದು ಘೋರ ವಾರ್ತೆ ತಂತಿಯ ಮೂಲಕ ಬಂದು ಸೇರಿತು. ಕಂಡ ತಕ್ಷಣ ನನ್ನನ್ನು ನಾನೇ ನಂಬದಾದೆ. ಆಶಾ ಆಕಸ್ಮಿಕವಾಗಿ ಮರಣ ಹೊಂದಿದ ಳೆಂದು ತಿಳಿಸಿತ್ತು. ಮನಸ್ಸು ಭಾರವಾಗಿ ಅಲ್ಲೇ ಕುಳಿತುಬಿಟ್ಟೆ. ಮತ್ತೊಮ್ಮೆ ಅವಳನ್ನು ಕಾಣುವಾಸೆ ಕೊನೆಗೊಂಡಿತು. ದೂರದಿಂದಲೇ ಮರುಕ ಪಡುವ ಪ್ರಸಂಗ ಒದಗಿತು. ಅವಳಂತೆ ಇರುವ ವ್ಯಕ್ತಿ ಯಾರಾ ದರೂ ಇರಬಹುದೆಂದು ಕಿಟಕಿಯಾಚೆ ನೋಡಿದೆ. ಆದರೆ ಯಾವುದೊ ಕುಚೋದ್ಯ ಮಾಡುತ್ತ ಹೋಗುತ್ತಿದ್ದ ಆ ಕಾಲೇಜು ಹುಡುಗಿಯರ ಗುಂಪಿನಲ್ಲಿ ಆಶಾಳನ್ನು ಪ್ರತಿಬಿಂಬಿಸುವಂತೆ ಒಬ್ಬಳೂ ಕಾಣಲಿಲ್ಲ.

ಅವಳಂಥ ಸೇವಾಕಾಂಕ್ಷೆ ಮತ್ತಾರಲ್ಲಿ ಹುಡುಕಬೇಕು ? ಇನ್ನು ಅವಳೂ ಇಲ್ಲದ ಮೇಲೆ ನಮ್ಮ ಶಿಬಿರದ ಗತಿ ಏನು ? ಸೊಗಸಾದ ಗುಡಿಯನ್ನು ಕಟ್ಟಿದ ಮೇಲೆ ಇದ್ದಕಿದ್ದಂತೆ ಗೋಪುರ ಕೆಳಗೆ ಬಿದ್ದಹಾಗಾಯಿತು. ಸುವ್ಯವಸ್ಥೆಗೆ ಬಂದದ್ದು ಆಶಾವಿನ ಮರಣದಿಂದ ಅವ್ಯವಸ್ಥೆಯ ಪರಮಾವಧಿಯನ್ನು ಮುಟ್ಟುವುದರಲ್ಲಿ ಸಂಶಯವಿಲ್ಲ. ಅಂದಮೇಲೆ ಆಶಾ ಯಾವ ರೀತಿ ಕಾಲವಾದಳು ? ಶಿಬಿರದವರಲ್ಲಿಯೆ ಯಾರಾದರೂ ಅವಳಿಗೆ ವಿಷಹಾಕಿರಬಹುದೇ ? ಅಂಥ ಪ್ರಮೇಯ ಬರುವ ಅವಕಾಶವೇ ಇಲ್ಲವಲ್ಲ ! ಶಿಬಿರದ ಯುವತಿಯರಲ್ಲಿ ಸದಾ ಗೆಳೆತನದಲ್ಲಿದ್ದ ಆಶಾವಿನ ಮೇಲೆ ಕೇಡನ್ನೇಕೆ ಬಯಸಿಯಾರು ? ನಮ್ಮ ಶಿಬಿರದ ಹೆಂಗಸರಲ್ಲಿ ತನ್ನ ಗೆಳತಿಯನ್ನೇ ಕೊಲ್ಲುವ ಕೆಚ್ಚೆದೆ ಯಾರಿಗಿದೆ ? ಅಥವಾ ಯಾರಾದರೂ ದುಷ್ಟ ಯುವಕರಿಂದ ಪ್ರೇರಿತರಾಗಿ ಈ ಕೆಲಸ ಮಾಡಿರಬಹುದೆ ?

ಇದ್ದರೂ ಇರಬಹುದು ; ತಮ್ಮ ಕೆಲಸಗಳಿಗೆ ಏನಾದರೂ ಅಡ್ಡಿ ತರುವಳೆಂದು ತಿಳಿದು ಕೆಲವು ವಿಷಯ ಲಂಪಟರು ತಮ್ಮ ಪ್ರೇಯಸಿಯರ ಮೂಲಕ ವಿಷ ಹಾಕಿಸಿದ್ದರೂ ಇರಬಹುದು. ಶಿಬಿರದವರು ಕಾಮ ಪ್ರವೃತ್ತಿಯಿಂದ ಬಿಡಿಸಿಕೊಳ್ಳಲಾಗದೆ ಬೆಳ್ಳಗಿರುವುದನ್ನು ಕಪ್ಪಾಗಿ ಕಂಡು ತಿಳಿಗೇಡಿತನದ ಕೆಲಸ ಮಾಡಿರಬಹುದು. ಆದರೆ ಕೆಲವೇ ದಿನಗಳಲ್ಲಿ ಅವರ ದುಷ್ಕೃತ್ಯದ ಪರಿಣಾಮ ಹೊರಬಂದೇ ಬರುತ್ತದೆ. ವೈ ಮಾರಿಕೊಂಡರೆ ಎಷ್ಟು ದಿನದ ತನಕ ಲಾಭವನ್ನು ಹೊಂದಿಯಾರು ? ಒಂದಲ್ಲ ಒಂದು ದಿನ ಬೀದಿಗೆಸೆಯಲ್ಪಟ್ಟಾಗ ಮತ್ತೊಮ್ಮೆ ಅವರನ್ನು ಸ್ವಾಗತಿಸಲು ಯಾವ ಶಿಬಿರವಿರುತ್ತದೆ ? ಶಿಬಿರವಿದ್ದರೂ ಆಶಾಳಂಥ ನಿಸ್ವಾರ್ಥ ಸೇವಕಿ ಸಿಗುತ್ತಾಳೆಯೆ ? ಆಗ ತಮಗೆ ದಾರಿ ತೋರಲು ಒಬ್ಬರೂ ಇಲ್ಲವಲ್ಲ ಎಂದು ಪರಿತಪಿಸಿದರೆ ಯಾರು ಹೊಣೆ ?

ಸಂಸ್ಥೆಯನ್ನು ಕಟ್ಟುವುದು ಸುಲಭವಲ್ಲ. ಆದರೆ ಅದನ್ನು ಒಡೆಯಬೇಕಾದರೆ ಒಂದು ಕ್ಷಣದಲ್ಲಿ ಮುಗಿಸಿಬಿಡಬಹುದು. ಕ್ಷಣದಲ್ಲಿ ನಡೆದುಹೋದ ಆ ಕಾರ್ಯದ ಪರಿಣಾಮ ನೂರಾರು ವರ್ಷಗಳವರೆಗೆ ಹಬ್ಬಬಹುದು.

ಹ ಯೆ ನಮ್ಮ ಶಿಬಿರವೂ ದುಷ್ಪರಿಣಾಮದ ದವಡೆಗೆ ಸಿಕ್ಕಿಬಿಡುತ್ತ ದೆಯೊ ಏನೊ ?

ಕೆಲವು ವೇಳೆ ಒಳ್ಳೆಯ ಕೆಲಸಕ್ಕೆ ಕೈ ಹಾಕಲೇ ಬಾರದೆನ್ನಿಸು ತ್ತದೆ. ಕಷ್ಟಪಟ್ಟು ದುಡಿದರೂ ಕೇಳುವವರಿಲ್ಲದೆ ನಮ್ಮ ಕಡೆಯುವ ರಿಂದಲೇ ನಮ್ಮ ಕೊನೆ ಕಾಣಬೇಕಾಗುತ್ತದೆ. ಎಲ್ಲೋ ಮೂಲೆಯಲ್ಲಿ ಕುಳಿತುಕೊಂಡು ಜೀವ ಸವೆಸುವವರೆ ಹೆಚ್ಚು ದಿನ ಬದುಕಬಲ್ಲರು. ಅಂತೂ ಆಶಾ ಕಾಲವಾಗಿ ಹೋದಳು. ಅವಳೊಡನೆ ಶಿಬಿರವೂ ಹೋಯಿತು. ಅಂದ ಮೇಲೆ ನಾನೇಕೆ ಬದುಕಬೇಕು ?

ಬೇಡ ; ಜೀವ ಬಿಡುವುದಿಲ್ಲ. ಆಶಾನ ಪರವಾಗಿ ಜಗತ್ತನ್ನು ನೋಡಬೇಕು. ಅವಳು ಕಾಣದ ವಿಷಯಗಳನ್ನೆಲ್ಲ ಪರಿಶೀಲಿಸಬೇಕು ಆಶಾ ಎಷ್ಟಾದರೂ ಹೆಂಗಸು. ಸ್ವಾಭಾವಿಕ ಲಜ್ಜೆಯಿಂದ ಎಷ್ಟೋ ದುಷ್ಕೃತ್ಯಗಳನ್ನು ನೋಡುವುದಕ್ಕೇ ಹಿಂಜರಿಯುತ್ತಿದ್ದಳು. ಅದರಿಂದಲೇ ಅವಳು ತನ್ನ ಕೊಲೆಗೆ ತಾನೇ ಅವಕಾಶಕೊಟ್ಟು ದುರಂತಕ್ಕೀಡಾಗಿರ ಬಹುದು.

ಹಿಂದೆ ನನ್ನ ಹೆಂಡತಿ ಸತ್ತಾಗ ನಾನೇಕೆ ಬದುಕಬೇಕೆಂದು ಯೋಚಿಸಿಬಿಟ್ಟೆ. ಆದರೆ ಸಾಯುವುದಕ್ಕಿಂತ ಜೀವಿಸಿ ಎದುರಾಳಿಗಳೊಡನೆ ಹೊಡೆದಾಡುವುದೇ ಲೇಸೆಂದು ಜೀವವನ್ನು ಬಿಗಿ ಹಿಡಿದೆ. ಆಗ ನನ್ನ ಎದುರಾಳಿಗಳಾಗಿದ್ದ ಮುಸ್ಲಿಮರೆಲ್ಲರೂ ಕೆಟ್ಟವರೆಂದು ಭಾವಿಸಿ ಇಡೀ ಜನಾಂಗದ ಮೇಲೆಯೆ ಕೋಪಗೊಂಡಿದ್ದೆ. ಆದರೆ ಬರ ಬರುತ್ತಾ ಮುಸ್ಲಿಮ ಜನಾಂಗದ ಅತ್ಯುತ್ತಮ ಗುಣಗಳೂ ಗೋಚರವಾದವು. ಅದಕ್ಕಾಗಿಯೆ ನಮ್ಮ ಚೌಕಟ್ಟನ್ನು ಬಿಟ್ಟು ವಿಶಾಲ ಪ್ರಪಂಚಕ್ಕೆ ಹೋಗ ಬೇಕು. ಒಳ್ಳೆಯದನ್ನು ನೋಡಿದ ಮೇಲೆ ಕೆಟ್ಟದ್ದನ್ನು ನೋಡಲೂ ಸಿದ್ಧರಾಗಿರಬೇಕು ಬರಿಯ ನೋಟದಲ್ಲೇ ಕಾಲ ಕಳೆಯದೆ ಕಷ್ಟ ಸುಖಗಳಲ್ಲೂ ಭಾಗವಹಿಸಿ ಅನುಭವ ಪಡೆಯಬೇಕು. ಆಗಲೇ ಹುಟ್ಟಿ ದುದಕ್ಕೆ ಸಾರ್ಥಕ. ಭವ್ಯ ಧ್ಯೇಯಕ್ಕಾಗಿ ಹೊಡೆದಾಡಿ ಅರ್ಥದಲ್ಲೇ

ಆಕಸ್ಮಿಕ ಮರಣಕ್ಕೊಳಗಾದ ವ್ಯಕ್ತಿ ಶಾಂತಿ ಹೊಂದಬೇಕಾದರೆ ಇರುವವರು ಆ ಆದರ್ಶಕ್ಕೆ ದುಡಿಯುವುದರಿಂದಲೇ ಹೊರತು ಪ್ರಾಣ ಬಿಡುವುದರಿಂದಲ್ಲ. ಅಂತೆಯೆ ಆಶಾಳಿನ ಆತ್ಮಕ್ಕೆ ಶಾಂತಿ ಸಿಗಬೇಕಾದರೆ ನಾನು ಬದುಕಲೇಬೇಕು. ಅದನ್ನು ನೋಡಿ ಅವಳ ಆತ್ಮ ತೃಪ್ತಿಹೊಂದು ತ್ತದೆ. ನನ್ನನ್ನೇ ನಂಬಿ ದೇಹಬಿಟ್ಟ ಆ ಆತ್ಮಕೆ ಮೋಸಮಾಡಬಾರದು. ಅದಕ್ಕಾಗಿ ನಾನು ಜೀವಿಸುತ್ತೇನೆ. ಆಶಾಳ ಕೊಲೆಗೆ ಕಾರಣರಾದ ವ್ಯಕ್ತಿಗಳ ಹೃದಯವನ್ನು ಪರೀಕ್ಷಿಸಲೇ ಬೇಕು. ಪಾಪ; ಆಶಾ ಇದ್ದಿದ್ದರೆ ಚನ್ನಾಗಿರುತ್ತಿತ್ತು. ಆದರೆ ವಿಧಿಯೆದುರಿಗೆ ನಿಲ್ಲುವ ಯೋಗ ವನ್ನು ನಾನಿನ್ನೂ ಪಡೆದಿಲ್ಲ.

ಹೀಗೆ ನನ್ನಲ್ಲಿ ನಾನೇ ಪ್ರಯತ್ನಿಸುತ್ತಿರುವಲ್ಲಿ ಹೊರಗಡೆ ಕಾರು ನಿಂತ ಸದ್ದು ಕೇಳಿಸಿತು. ನೋಡುವಲ್ಲಿ ಅದು ಸೇಠರ ಕಾರೇ ಇರಬೇ ಕೆಂದು ತಿಳಿದುಕೊಂಡೆ. ಡ್ರೈವರ್ ನನ್ನ ಹತ್ತಿರ ಬಂದು ಒಂದು ಚೀಟಿ ಯನ್ನು ಕೊಟ್ಟ. ಸೇಠರು ನನ್ನನ್ನು ತಕ್ಷಣ ಬರುವಂತೆ ಬರೆದಿದ್ದರು. ತಮ್ಮ ಮನೆಯಲ್ಲಿ ನಿರ್ಮಲೆಗಾಗಿ ಒಂದು ಸತ್ಕಾರಕೂಟವನ್ನು ಏರ್ಪಡಿ ಸಿರುವುದಾಗಿಯೂ ನಿರ್ಮಲೆ ಮಾರನೆಯ ದಿನವೇ ಪೂನಾಕ್ಕೆ ಪ್ರಯಾಣ ಮಾಡುವವಳೆಂದೂ ಬರೆದಿದ್ದರು. ತಕ್ಷಣ ನಿರ್ಮಲೆಯ ನೆನಪಾಯಿತು. ಅಂದು ಸಮಾರಂಭದಲ್ಲಿ ಕಂಡವಳನ್ನು ಮತ್ತೊಮ್ಮೆ ಜ್ಞಾಪಿಸಿಕೊಂಡೆ. ಮತ್ತೆ ಎದುರಿಗಿದ್ದ ತಂತೀ ಸಮಾಚಾರದ ಕಡೆ ನೋಡಿದೆ. ಎಂಥ ವಿಚಿತ್ರ! ಆಶಾ ಸ್ಮಶಾನಕ್ಕೆ ಹೋಗುತ್ತಿರುವಾಗ ನಾನು ಸತ್ಕಾರ ಕೂಟಕ್ಕೆ ಹೋಗಲೇ? ಆಶಾಳನ್ನು ಮರೆತು ನಿರ್ಮಲೆಯನ್ನು ನೋಡ ಹೋಗಲೇ? ಆಶಾ ಎಲ್ಲಿ, ನಿರ್ಮಲೆ ಎಲ್ಲಿ? ಆದರೆ ಒಮ್ಮೆ ಯೋಚಿಸಿದರೆ ಇಬ್ಬರಲ್ಲೂ ಸಾಮರಸ್ಯವಿದೆಯಲ್ಲ! ರಮೇಶರಿಗೆ ನಿರ್ಮಲೆ ವಂಚಿಸಿದಂತೆ ಆಶಾ ಕೂಡ ಬೇರೆಯ ರೀತಿಯಲ್ಲಿ ಮಹಮದನಲ್ಲಿ ತಾತ್ಸಾರ ಮನೋಭಾವ ತೋರಿಸಿರಲಿಲ್ಲವೇ? ಆಮೇಲೆ ಆಶಾ ಮಹಮದನಿಗಾಗಿ ಮರುಗಿದಳು; ನಿಜ. ಆದರೆ ನಿರ್ಮಲೆಯು ಕೂಡ ರಮೇಶರ ನಿಜಕಥೆ ತಿಳಿದಮೇಲೆ ಪಶ್ಚಾತ್ತಾಪಪಟ್ಟು ತಲೆತಗ್ಗಿಸಲಿಲ್ಲವೇ? ರಮೇಶರ ನಿಧನದಿಂದ

ನಿರ್ಮಲೆಗೆ ಜೀವನದಲ್ಲೇ ಜ್ಞಾನೋದಯವಾಗಿರಬಹುದು. ಆಶಾ ನಂತೆಯೆ ಅವಳ ಜೀವನ ಮಾರ್ಪಡಬಹುದು. ಹೌದು; ಈಗತಾನೆ ಕಾಲವಾಗಿಹೋದ ಆಶಾ ತನ್ನ ಪ್ರಭಾವವನ್ನು ನಿರ್ಮಲೆಯ ಮೇಲೆ ಬೀರಿರಬಹುದು! ಅದಕ್ಕಾಗಿಯೇ ಇರಬೇಕು ನನಗೆ ಈ ಕರೆ ಬಂದದ್ದು!! ಅಂದಮೇಲೆ ನಾನು ತಕ್ಷಣ ನಿರ್ಮಲೆಯಲ್ಲಡಗಿರುವ ಆಶಾಳನ್ನು ಕಾಣಲು ಹೋಗಲೇ ಬೇಕು!!! ಎಂದು ನಿರ್ಧರಿಸಿದೆ.

"ಹೋಗೋಣವೇ ಸ್ವಾಮಿ....." ಎಂದು ಡ್ರೈವರ್ ಸೂಚನೆ ಕೊಟ್ಟಾಗಲೇ ನನಗೆ ಎಚ್ಚರವಾಯಿತು. ಮರುಮಾತಾಡದೆ ಕಾರಿನಲ್ಲಿ ಕುಳಿತು ಹೊರಟೆ.

ಸೇಠರ ಮನೆಯ ಬಳಿ ಕಾರು ನಿಧಾನವಾಗಿ ಹೋಗಬೇಕಾಯಿತು. ನಿರ್ಮಲೆಯನ್ನು ನೋಡುವಾಸೆಯಿಂದ ಜನ ಬೀದಿಯಲ್ಲಿ ಸೇರಿಬಿಟ್ಟಿದ್ದರು. ಬರುತ್ತಿದ್ದ ಪ್ರತಿಯೊಂದು ಕಾರನ್ನೂ ಅಡ್ಡಗಟ್ಟುವಂತೆ ಬಂದು ಒಳಗೆ ಕುಳಿತಿರುವವರನ್ನು ಪರೀಕ್ಷಿಸುತ್ತಿದ್ದರು. ಹಾಗೆಯೆ ನನ್ನ ಕಾರ ಬಳಿ ಬಂದ ಜನ ನನ್ನನ್ನು ನೋಡಿ ನಿರಾಶರಾದರು. ಅವರನ್ನು ಕಂಡ ಮೇಲೆ ಇನ್ನೂ ನಿರ್ಮಲೆಯು ಬಂದಿಲ್ಲವೆಂದು ತಿಳಿಯಿತು.

ಸೇಠರು ನನ್ನನ್ನು ಆದರದಿಂದ ಸ್ವಾಗತಿಸಿದರು. ಹಾಗೆಯೆ ಅವರ ಬಳಿಯಲ್ಲಿದ್ದ ಇತರ ಶ್ರೀಮಂತರೂ ನನಗೆ ವಂದಿಸಿದರು. ಸತ್ಕಾರ ಕೂಟಕ್ಕೆ ಮಾಡಿದ್ದ ಸೊಗಸಾದ ವ್ಯವಸ್ಥೆಯನ್ನೊಮ್ಮೆ ಒಳಗೆ ಹೋಗಿ ನೋಡಿಬಂದೆ. ಸೇಠರು ಸತ್ಕಾರ ಸಮಾರಂಭವೇರ್ಪಡಿಸುವುದರಲ್ಲಿ ಅದ್ವಿತೀಯರಾಗಿದ್ದರು. ಇಂದಿನ ಸತ್ಕಾರಕೂಟ ಅವರಿಗೇನು ಹೊಸದಲ್ಲ. ಎಷ್ಟೋ ಬಾರಿ ಬೇರೆ ಬೇರೆ ದೇಶದ ಮುಖ್ಯ ಮಂತ್ರಿಗಳನ್ನೇ ಕರೆದು ಅವರಿಂದ ಬೇಕಾದ ಹಾಗೆ ಹೊಗಳಿಸಿಕೊಂಡಿದ್ದರಂತೆ. ಆದ್ದರಿಂದಲೇ ಸೇಠರ ಪ್ರಭಾವ ಬರಿಯ ವಾಣಿಜ್ಯ ಪ್ರಪಂಚವೊಂದರಲ್ಲೇ ಅಲ್ಲದೆ ರಾಜಕೀಯ ರಂಗದಲ್ಲೂ ಮನೆ ಮಾಡಿತ್ತು. ಒಮ್ಮೆ ಮಂತ್ರಿ ಪದವಿ ಸಿಗುವ ಸಂದರ್ಭವಿದ್ದರೂ ಸೇಠರು ತಾವಾಗಿಯೇ ನಿರಾಕರಿಸಿಬಿಟ್ಟರು.

ಅಧಿಕಾರ ವಹಿಸಿಕೊಳ್ಳದೆ ಜನಸೇವೆ ಮಾಡಬೇಕೆಂಬುದೇ ನನ್ನ ಧ್ಯೇಯ ಎಂದು ಸೇಠರು ಪತ್ರಿಕೆಗಳಲ್ಲಿ ಹೇಳಿಕೆ ಕೊಟ್ಟಾಗ ಎಲ್ಲೆಡೆಯಿಂದಲೂ ಅಭಿವಂದನೆಗಳು ಬಂದುವಂತೆ. ಅಂದಿನಿಂದಲೂ ಸೇಠರು ತಮ್ಮದೇ ಆದ ಸ್ವತಂತ್ರ ರೀತಿಯಲ್ಲಿ ಜನಸೇವೆ ಮಾಡುತ್ತಿದ್ದಾರೆ. ಕೆಲವು ವೇಳೆ ಒಣ ರಾಜಕೀಯಕ್ಕಿಂತಲೂ ಸೇಠರಿಗೆ ಕಲೆಯ ಮೇಲೆ ಹೆಚ್ಚಿನ ಒಲವು. ನಾಟಕ ನೃತ್ಯಗಳನ್ನು ಕಂಡು ಮನಸಾರೆ ಹೊಗಳುವರು. ಒಟ್ಟಿನಲ್ಲಿ ಸೇಠರು ಒಳ್ಳೆಯ ರಸಿಕರಾಗಿದ್ದರು.

ನಿರ್ಮಲೆಯೂ ಬಂದಿಳಿದಳು. ಹೊರಗಿನ ಜನ ಜಯಕಾರ ಮಾಡಿ ಚಪ್ಪಾಳೆ ತಟ್ಟಿತು. ಕೆಲವರಿಗೆ ತುಂಬ ಆನಂದವಾಗಿ ಹೂಗಳನ್ನೇ ಎರಚಿಬಿಟ್ಟರು. ಮುಗುಳು ನಗೆಯಿಂದ ನಿರ್ಮಲೆ ಎಲ್ಲರಿಗೂ ವಂದಿಸಿದ ಮೇಲೆ ಸೇಠರು ನಿರ್ಮಲೆಯನ್ನು ಸ್ವಾಗತಿಸಿದರು.

ಸೇಠರ ಮನೆಯಲ್ಲಿ ವಿಶಾಲವಾದ ಭಾಗವೆಂದರೆ ಊಟದ ಮನೆ. ಸುಮಾರು ಇನ್ನೂರು ಜನ ಕುಳಿತುಕೊಳ್ಳುವಷ್ಟು ಜಾಗವಿದ್ದಿತು. ಗೋಡೆಯ ಸುತ್ತಲೂ ಬರೆಸಿದ್ದ ಚಿತ್ರಗಳು ರಸಿಕರಿಗೆ ರಸದೌತಣವಾಗಿತ್ತು. ಎಲ್ಲರೂ ಮೊದಲೇ ತಿಳಿದಂತೆ ತಮ್ಮ ತಮ್ಮ ಜಾಗದಲ್ಲಿ ಕುಳಿತುಕೊಂಡರು. ಅವರವರ ಯೋಗ್ಯತೆಗೆ ತಕ್ಕಂತೆ ಸೇಠರು ಕುಳಿತುಕೊಳ್ಳುವ ಸ್ಥಳದ ಅಂತರವನ್ನು ಏರ್ಪಡಿಸಿದ್ದರು. ನಾನು ಸೇಠರ ಬಳಿಯಲ್ಲೇ ಕುಳಿತುಕೊಳ್ಳುವಂತೆ ಹೇಳಿದರು. ಅಂದ ಮೇಲೆ ಆ ಕೂಟದಲ್ಲಿ ನನಗೆ ಎಲ್ಲರಿಗಿಂತಲೂ ಹೆಚ್ಚಿನ ಪ್ರಾಮುಖ್ಯತೆ ದೊರಕಿತು.

ಡೆಲ್ಲೀವಾಲ ಸೊಗಸಾದ ಊಟವನ್ನೇರ್ಪಡಿಸಿದ್ದ. ತಾನೇ ಖುದ್ದಾಗಿ ನಿಂತು ಭೋಜನಶಾಲೆಯಲ್ಲಿ ಒಂದೇ ಸಮನೆ ತಿರುಗಾಡುತ್ತಲಿದ್ದ. ಅವನ ಡೊಳ್ಳು ಹೊಟ್ಟೆಯನ್ನು ಕಂಡು ಕೆಲವರು ಮೆಲ್ಲಗೆ ನಗುತ್ತಿದ್ದರು. ಒಮ್ಮೆ ನಿರ್ಮಲೆಯೂ ಹುಸಿನಗೆ ನಕ್ಕಳು. ಆಗ ಎಲ್ಲರೂ ನಕ್ಕು ತಮಾಷೆಯ ಮಾತುಗಳನ್ನಾಡಿದರು. ಆ ನೆಪದಲ್ಲಿ ಎಲ್ಲರೂ ನಿರ್ಮಲೆಯನ್ನು ನೋಡಿ ಆನಂದಿಸಿದರು. ಇತರರೊಡನೆ ಡೆಲ್ಲೀವಾಲ

ಕೂಡ ನಕ್ಕು ಮತ್ತಷ್ಟು ನಗಿಸಿದನು. ಅಂತೂ ಡೊಳ್ಳುಹೊಟ್ಟೆಯ ಡೆಲ್ಲೀವಾಲನೂ ರಸಿಕನೆಂದು ತಿಳಿಯಿತು.

ಇತ್ತ ಭೋಜನ ಹಾಸ್ಯಲಹರಿಯಿಂದ ಸಾಗುತ್ತಿರಲು ಹತ್ತು ಹದಿನೈದು ಜನ ಹೊರಗಡೆ ಕುರ್ಚಿಗಳನ್ನು ಹಾಕಲು ತೊಡಗಿದ್ದರು. ಸೇಠರು ಮನೆಯ ಮುಂದೆ ಉತ್ತಮವಾದ ಉದ್ಯಾನವನವನ್ನು ರಚಿಸಿದ್ದರು. ಸುತ್ತಲೂ ಹೂಗಿಡಗಳಿದ್ದರೂ ಮಧ್ಯದಲ್ಲಿ ವಿಶಾಲವಾದ ಬಯಲನ್ನು ಬಿಟ್ಟಿದ್ದರು. ಬೆಳದಿಂಗಳ ಕಾಲದಲ್ಲಂತೂ ಗೆಳೆಯರೊಡನೆ ಸೇಠರು ಇಸ್ಪೀಟು ಆಟವಾಡುತ್ತ ಆ ಜಾಗವನ್ನು ಬಿಟ್ಟು ಕದಲುತ್ತಿರಲಿಲ್ಲ. ಉದ್ಯಾನವನ್ನು ತಾವೇ ಸ್ವತಃ ನಿಂತು ಮಾಡಿಸಿದ್ದರು. ಇಂಗ್ಲೀಷರ ಹಾಗೆ ನಾವು ಉದ್ಯಾನವನ್ನು ಶೃಂಗಾರಿಕೆಯಂತೆ ಭಾವಿಸಬೇಕೆಂದು ಸೇಠರ ವಾದ. ಅದಕ್ಕಾಗಿಯೆ ತಮ್ಮ ಲೈಬ್ರೆರಿಯಲ್ಲಿ ಒಂದು ಬೀರುವನ್ನು ಮೀಸಲಾಗಿಟ್ಟಿದ್ದರು.

ಅಂದು ಕೂಡ ಬೆಳದಿಂಗಳಿತ್ತು. ಊಟವಾದ ಮೇಲೆ ಎಲ್ಲರೂ ಉದ್ಯಾನದ ಮಧ್ಯದಲ್ಲಿ ಬಂದು ಕುರ್ಚಿಗಳ ಮೇಲೆ ಕುಳಿತರು. ಬಾಯಲ್ಲಿ ಸುಪಾರಿಯಗಿಯುತ್ತಾ ತಮಾಷೆಯಾಗಿ ಮಾತನಾಡುತ್ತಿದ್ದರು. ನಿರ್ಮಲೆ ಎಲ್ಲರಿಗೂ ಕಾಣುವಂತೆ ಮಧ್ಯದಲ್ಲಿ ಕುಳಿತಳು. ರಾತ್ರಿಯ ಆ ಪ್ರಶಾಂತ ವಾತಾವರಣದಲ್ಲಿ ನಿರ್ಮಲೆ ಸೊಗಸಾಗಿ ಕಂಡಳು. ಬೆಳದಿಂಗಳ ಚಂದ್ರ ನಿರ್ಮಲೆಯ ಮುಖಕ್ಕೆ ಸರಿಯಾಗಿ ತನ್ನ ಬೆಳಕನ್ನು ಹರಡಿದ್ದಂತೆ ಕಂಡಿತು. ಸತ್ಕಾರಕೂಟವಾದ ಮೇಲೆ ಸಂತೋಷಕೂಟವಾಗಲಿ ಎಂದು ಎಲ್ಲರೂ ಅಚ್ಚುಕಟ್ಟಾಗಿ ಕುಳಿತು ಸೇಠರಿಗೆ ಸೂಚಿಸಿದರು.

ಸೇಠರು ಎದ್ದು ನಿಂತು, "ಮಾನ್ಯರೇ, ಮಾತನಾಡುವ ಸ್ವಭಾವ ನನಗೆ ಹೊಸದು. ಅದರಲ್ಲೂ ಊಟವಾದ ಮೇಲೆ ಮಾತುಗಳು ಬಾಯಿಂದ ಹೊರಡುವುದೇ ಅಸಾಧ್ಯ ಆದ್ದರಿಂದ ತಮ್ಮೆಲ್ಲರ ಬೆಂಬಲದಿಂದ ಮಾತನಾಡುತ್ತೇನೆ.

ಮೊದಲನೆಯದಾಗಿ ನಿರ್ಮಲೆಯವರು ನಮ್ಮ ಆಹ್ವಾನವನ್ನು ಮನ್ನಿಸಿ ಇಲ್ಲಿಗೆ ಬಂದದ್ದಕ್ಕಾಗಿ ನಾನು ಅವರಿಗೆ ತುಂಬ ಕೃತಜ್ಞನಾಗಿದ್ದೇನೆ. ನಿರ್ಮಲೆಯವರ ವಿಷಯ ನಾನು ಹೆಚ್ಚಿಗೆ ಹೇಳಬೇಕಾಗಿಲ್ಲ. ತಮ್ಮ ಅದ್ಭುತವಾದ ಕಲೆಯಿಂದ ಎಲ್ಲರ ಮನಸ್ಸನ್ನೂ ಸೂರೆಗೊಂಡಿದ್ದಾರೆ. ಅಂಥವರು ಯಾವ ಜಂಭವನ್ನೂ ಪಡದೆ ದೇಶಸೇವೆಗೆ ನಿಂತಿದ್ದಾರೆ. ಇಂದು ನಮ್ಮ ಮನೆಗೆ ಕೂಡ ಬಂದು ಸತ್ಕಾರಕೂಟದಲ್ಲಿ ಭಾಗವಹಿಸಿ ನಮ್ಮ ನಿಮ್ಮ ಮನಸ್ಸನ್ನು ಸಂತೋಷಪಡಿಸಿದ್ದಾರೆ.

ಅವರ ಕಲೆಯ ವಿಷಯವಾಗಿ ನಾನು ಹೆಚ್ಚಿಗೆ ಹೇಳಲು ತಯಾರಿಲ್ಲ. ನಮ್ಮ ಆಪ್ತ ಗೆಳೆಯರೂ, ಸಾಹಿತ್ಯದಲ್ಲಿ ನುರಿತವರೂ ಆದ ಹಿರೇಲಾಲರು ಮಾತನಾಡಬೇಕೆಂದು ಕೇಳಿಕೊಳ್ಳುತ್ತೇನೆ" ಎಂದು ಸೇಠರು ಹೇಳಿ ಕುಳಿತುಬಿಟ್ಟರು. ಹಿರೇಲಾಲರಿಗೆ ಒಳ್ಳೆಯ ಸಂದೇಹ ಪರಿಸ್ಥಿತಿ ಬಂದೊದಗಿತು. ಇದ್ದಕ್ಕಿದ್ದಂತೆ ಮಾತನಾಡಬೇಕಿತ್ತು. ಯಾವಾಗಲೂ ಎಲ್ಲಾದರೂ ಭಾಷಣ ಮಾಡಬೇಕಾದರೆ ಮನೆಯಲ್ಲೇ ಯೋಚಿಸಿಕೊಂಡು ಬರುತ್ತಿದ್ದುದು ಹಿರೇಲಾಲರ ಸ್ವಭಾವ. ಅಂದರೆ ಅವರಿಗೆ ತಕ್ಷಣ ಎರಡು ಮಾತುಗಳನ್ನೂ ಹೇಳಲು ಬರುವುದಿಲ್ಲವೆಂದು ಹೇಳಲಾಗುತ್ತಿರಲಿಲ್ಲ. ಆದರೆ ತಮ್ಮ ಭಾಷಣ ಪತ್ರಿಕೆಗಳಲ್ಲಿ ನಾಲ್ಕೇ ಸಾಲುಗಳಲ್ಲಿ ಮುಗಿದುಹೋಗುತ್ತದೆಯೋ ಏನೋ ಎಂಬ ಸಂಶಯ ಅವರಲ್ಲಿತ್ತು.

ಅಂತೂ ಕಡೆಗೆ ಹಿರೇಲಾಲರು ಎದ್ದು ನಿಂತರು. ಎಲ್ಲರೂ ಚಪ್ಪಾಳೆ ತಟ್ಟಿದರು. ನಿರ್ಮಲೆಯನ್ನು ಹೊಗಳಲು ಹಿರೇಲಾಲರು ಸೂಕ್ತಪದಗಳನ್ನು ಹುಡುಕಬೇಕಾಯಿತು. ಒಂದು ವಾಕ್ಯಕ್ಕೂ ಇನ್ನೊಂದು ವಾಕ್ಯಕ್ಕೂ ಕಾಲಾವಕಾಶ ತೆಗೆದುಕೊಂಡು ಮಾತನಾಡಿದರು. ಸೇಠರು ಹೇಳಿದ ಸಾಮಾನ್ಯ ರೀತಿಯ ಮಾತುಗಳನ್ನೇ ಹಿರೇಲಾಲರೂ ಕೂಡ ತಿರುಗ ಮುರುಗ ಮಾಡಿ ತಿಳಿಸಿದರು. ಕಡೆಗೆ ತಾವೇ ರಚಿಸಿದ್ದ ಪದ್ಯವೊಂದನ್ನು ಹೇಳಿ ಕುಳಿತುಬಿಟ್ಟರು.

ಶೇಖರ ಕಡೆಯ ಹೆಂಗಸರು ನಿರ್ಮಲೆಗೆ ಹಾರ ಹಾಕಿದರು. ಎಲ್ಲರ ಪರವಾಗಿ ಶೇಖರು ನಿರ್ಮಲೆಯನ್ನು ನಾಲ್ಕು ಮಾತು ಹೇಳಬೇಕೆಂದು ಕೇಳಿಕೊಂಡರು.

ನಿರ್ಮಲೆ ಎದ್ದು ನಿಂತು ಹಾರವನ್ನು ತೆಗೆದಿಟ್ಟು ಮಾತನಾಡಲಾರಂಭಿಸಿದಳು. ಅವಳ ಮಾತುಗಳ ಮೇಲೆ ಯಾರಿಗೂ ಗಮನವಿದ್ದಂತೆ ಕಾಣಲಿಲ್ಲ. ಅವಳು ನಿಂತ ಮನಮೋಹಕ ನಿಲುವು ಎಲ್ಲರನ್ನೂ ದಿಗ್ಭ್ರಮೆ ಹಿಡಿಸಿತ್ತು. ಬಾಯಿನಿಂದ ಹೊರಟ ಮಾತಿಗಿಂತಲೂ ಅವಳ ತುಟಿಯನ್ನೇ ಎಷ್ಟೋ ಜನ ಒಂದೇ ಸಮನೆ ನೋಡುತ್ತಿದ್ದರು. ಸಭೆ ನಿಶ್ಶಬ್ದವಾಗಿತ್ತು. ನಿರ್ಮಲೆಯನ್ನೇ ದಿಟ್ಟಿಸಿ ನೋಡುತ್ತ ಹಿಂದಿನ ಕುರ್ಚಿಯಲ್ಲಿ ಕುಳಿತಿದ್ದಾತ ಯಾವುದೋ ಜ್ಞಾನದಲ್ಲಿ ತನ್ನ ತುಟಿಯನ್ನೇ ಕಚ್ಚಿಕೊಂಡುಬಿಟ್ಟ. ತುಂಬ ನೋವಾದರೂ ತೋರ್ಪಡಿಸದೆ ತನ್ನನ್ನು ತಾನೆ ಸಂತೈಸಿಕೊಂಡನು.

ನಿರ್ಮಲೆ ಮಾತು ಮುಗಿಸಿ ಕುಳಿತಳು. ಸುಮಾರು ಹತ್ತು ನಿಮಿಷದ ತನಕ ಕುಳಿತಿದ್ದವರೆಲ್ಲ ಚಪ್ಪಾಳೆ ತಟ್ಟಿ ಸಂತೋಷ ವ್ಯಕ್ತಪಡಿಸುತ್ತಾ ತಮ್ಮ ತಮ್ಮ ಜಾಗಗಳನ್ನು ಬಿಟ್ಟಿದ್ದರು. ನಿರ್ಮಲೆಯ ಬಳಿ ಬಂದು ಕೆಲವರು ತಮ್ಮ ಪರಿಚಯವನ್ನು ತಾವಾಗಿಯೇ ಹೇಳಿಕೊಳ್ಳುತ್ತಿದ್ದರು. ಎಲ್ಲರಿಗೂ ಒಂದೇ ರೀತಿಯಲ್ಲಿ ನಿರ್ಮಲೆ ವಂದಿಸಿದಳು. ಕೆಲವು ಯುವಕರು ಅವಳ ಕೈ ಕುಲುಕಲು ಪ್ರಯತ್ನಪಟ್ಟರೂ ನಿರ್ಮಲೆ ಕೈಯೆತ್ತಿ ನಮಸ್ಕರಿಸುತ್ತಿದ್ದುದರಿಂದ ವಿಫಲರಾದರು.

ಸ್ಟುಡಿಯೋದಿಂದ ಕಾರು ಬಂದಿದೆಯೆಂದು ಡ್ರೈವರ್ ತಿಳಿಸಿದನು. ನಿರ್ಮಲೆಯನ್ನು ಆದರದಿಂದ ಕಾರಿನ ತನಕ ಬಂದು ಬೀಳ್ಕೊಟ್ಟರು.

ಸತ್ಕಾರಕೂಟದ ಜನ ಒಬ್ಬೊಬ್ಬರಾಗಿ ಹೊರಟರು. ನನ್ನನ್ನು ಮಾತ್ರ ಅಲ್ಲಿಯೇ ಇರುವಂತೆ ಶೇಖರು ಹೇಳಿಕಳಿಸಿದರು. ಹಾಗೆಯೆ ನಾನೊಬ್ಬ ಉಳಿದುಕೊಂಡೆ. ಶೇಖರು ತಮ್ಮ ಗೆಳೆಯರನ್ನೆಲ್ಲಾ ಕಳಿಸಿದ ಮೇಲೆ ನನ್ನ ಬಳಿ ಬಂದರು.

"ಏನು ಸ್ವಾಮಿಾ, ಬಹಳ ಹೊತ್ತಾಗಿದೆ
ದಲ್ಲಾ. ಹಾಗೆಯೆ ಆರಾಮವಾಗಿ ಮಾತನಾ
ಸೇಠರು ಎಲೆಯಡಿಕೆಯಗಿಯುತ್ತ ಹೊಟ್ಟೆ ಸವ...

"ಅದಕ್ಕೇನಂತೆ; ಅಲ್ಲಿ ಮಲಗುವ ಬದಲು ಇಲ್ಲೇ ಮಲ...
ಯಿತು. ನಮಗೇನು ಹೇಳಿ? ಎಲ್ಲಿ ಅಂದರೆ ಅಲ್ಲಿ ಸಿದ್ಧ. ಅಂಥಾದ್ದರಲ್ಲಿ ತಮ್ಮ ಸತ್ಕಾರ ಕಳೆದುಕೊಳ್ಳುತ್ತೇನೆಯೇ?" ಎಂದು ನಾನು ಸೇಠರನ್ನು ಉಬ್ಬಿಸಿದೆ.

"ಅದಿರಲಿ; ಇವತ್ತು ಹೇಗಿತ್ತು ಊಟ, ಉಪಚಾರ? ಎಲ್ಲ ನಿಮ್ಮ ಸಹಾಯ ಸ್ವಾಮಿಾ" ಎಂದು ಜಂಭವನ್ನು ಒಳಗೇ ಇಟ್ಟು ಮಾತನಾಡಿದರು.

"ನೀವು ಅಂದ ಮೇಲೆ ಕೇಳಬೇಕೆ? ಸೊಗಸಾಗಿ ನಡೆದುಹೋಯಿತು ಸೇಠರೇ. ಆದರೆ ನಿರ್ಮಲೆಯಾಗಲೀ, ನೀವಾಗಲೀ ರಮೇಶರ ವಿಷಯವನ್ನೇ ಎತ್ತಲಿಲ್ಲವಲ್ಲ. ಸಂತೋಷಕೂಟದಲ್ಲೇಕೆ ಸತ್ತವನ ಸುದ್ದಿ ಅಂತ ನಾನು ಕೂಡ ಸುಮ್ಮನಿದ್ದುಬಿಟ್ಟೆ" ಎಂದು ನಕ್ಕು ಹೇಳಿದೆ.

"ನಾವಾಗಿ ಕರೆದು ಯಾಕೆ ಅವಮಾನ ಮಾಡಬೇಕು, ಸ್ವಾಮಿ. ಏನೋ ನಡೆದದ್ದು ನಡೀತು. ಸತ್ತವರನ್ನೇ ನೆನೆಸಿಕೊಂಡು ಹೋದರೆ ಕೊನೆಯಿಲ್ಲಿ ಮೊದಲೆಲ್ಲಿ? ಸದ್ಯಕ್ಕೆ ರಮೇಶರ ವಿಷಯ ಯಾರೂ ಎತ್ತಬೇಡಿ ಎಂದು ನಾನೇ ಎಲ್ಲರಿಗೂ ಹೇಳಿದ್ದೆ. ತಮಾಷೆಯಾಗಿ ಕಾಲ ಕಳೆಯಲು ಬಂದವಳನ್ನು ಅಳಿಸಿದರೆ ಏನು ಚನ್ನ, ಹೇಳಿ" ಎಂದು ಸೇಠರು ಪಶ್ಚಾತ್ತಾಪ ಪಟ್ಟವರಂತೆ ನುಡಿದರು. ನಿರ್ಮಲೆ ಎದುರಿಗೇ ಬಂದು ನಿಂತಂತೆ ಭಾವಿಸಿಕೊಂಡರು.

"ಹಾಗಲ್ಲ ಸೇಠರೇ, ಸಾಮಾನ್ಯರಿಗೂ ರಮೇಶರಿಗೂ ವ್ಯತ್ಯಾಸವಿಲ್ಲವೇ? ಗುರು ಸತ್ತರೆ ಒಂದು ಸಂತಾಪಸೂಚನೆಯೂ ಬೇಡವೇ? ಅದೂ ಸತ್ತು ಇನ್ನೂ ಒಂದು ವಾರವೂ ಇಲ್ಲ. ಅವರಿಂದಲ್ಲದೆ ಇನ್ನಾರಿಂದ ತಾನೆ ನಿರ್ಮಲೆ ಮುಂದೆ ಬಂದದ್ದು? ಸ್ವಲ್ಪ ತಾವೇ ಯೋಚಿಸಿ ನೋಡಿ."

ನನ್ನ ಮಾತುಗಳನ್ನು ಕೇಳಿ ಸೇಠರಿಗೆ ಸ್ವಲ್ಪ ಕೋಪ ಬಂದಂತೆ ಾಂಡಿತು. ತಕ್ಷಣ, "ಅದೆಲ್ಲ ನಮಗೇನು ಗೊತ್ತು ಹೇಳಿ? ನಿರ್ಮಲೆ ಯಾರಿಂದ ಹಿಂದೆ ಹೋದಳೋ, ಯಾರಿಂದ ಮುಂದೆ ಬಂದಳೋ ನಮ ಗೇಕೆ? ಅವತ್ತು ಹುಚ್ಚನಂತೆ ಬಂದು ಯಾವನೋ ಅಸಂಬದ್ಧವಾಗಿ ಮಾತನಾಡಿಬಿಟ್ಟರೆ ನಂಬುವುದಕ್ಕಾಗುತ್ತದೆಯೆ? ನಿರ್ಮಲೆಯನ್ನು ನಿರ್ಮಲೆ ಯಾಗಿ ಕರೆದೆನೇ ಹೊರತು ರಮೇಶರ ಶಿಷ್ಯೆಯೆಂದಲ್ಲ. ನಿರ್ಮಲೆಯಂಥ ಒಳ್ಳೆಯ ಹುಡುಗಿಯನ್ನು ಕಣ್ಣೀರು ಹಾಕುವಂತೆ ಮಾಡುವುದು ಒಳ್ಳೆಯ ದಲ್ಲ ಸ್ವಾಮಿ" ಎಂದು ಉದ್ರೇಕಪೂರಿತವಾಗಿ ಮಾತನಾಡಿದರು. ಆ ಇಳಿವಯಸ್ಸಿನಲ್ಲೂ ಯೌವನದ ಬಿಸಿರಕ್ತ ಓಡಾಡುತ್ತಿದ್ದಂತೆ ಭಾಸವಾ ಯಿತು.

"ಹಾಗಾದರೆ ತಾವು ಕರೆಸಿದ್ದು ಅವಳ ಶೃಂಗಾರವನ್ನು ನೋಡು ವುದಕ್ಕೆಂದು ಕಾಣುತ್ತದೆ. ಆ ರೀತಿಯ ಉದ್ದೇಶದಿಂದ ಸತ್ಕಾರಕೂಟ ವೇರ್ಪಡಿಸುವುದು ಒಳ್ಳೆಯದಲ್ಲ, ಸೇಠರೇ. ಹುಡುಗಿಯನ್ನು ಹುಡುಗಿಯ ನ್ನಾಗಿಯೆ ನೋಡುವುದು ವಿಟ ಪುರುಷನ ಲಕ್ಷಣ ಸಂಸಾರವಂತರು ಆ ಸಂಕುಚಿತ ದೃಷ್ಟಿಯಿಂದ ನೋಡುವುದಿಲ್ಲ. ಮದುವೆಯಾಗುವ ಹುಡುಗಿ ಯನ್ನು ಒಪ್ಪಿದ ಮೇಲೆ ಅದಕ್ಕಿಂತಲೂ ಹೆಚ್ಚಿಗೆ ಅವಳ ವಂಶಾವಳಿಯನ್ನು ಪರೀಕ್ಷಿಸುತ್ತಾರೆ. ತಮಗೆ ಅನುರೂಪಳಾಗಿ, ಮಕ್ಕಳಿಗೆ ನಿಸ್ವಾರ್ಥ ತಾಯಿಯಾಗಿ, ಮನೆಗೆ ಬೆಳಕಾಗಿ ಇರಬಲ್ಲಳೇ ಎಂದು ತಮ್ಮಲ್ಲಿ ತಾವೆ ಚರ್ಚಿಸುತ್ತಾರೆ. ಅದು ಸದ್ಗೃಹಸ್ಥರ ಲಕ್ಷಣ. ಮತ್ತೆ ಮನೆಗೆ ಬಂದ ಇತರ ಹೆಣ್ಣು ಮಕ್ಕಳನ್ನು ಸೋದರಿಯರಂತೆ ಕಾಣುವುದೂ ಅವರ ಮುಖ್ಯ ಕರ್ತವ್ಯವಾಗಿರುತ್ತದೆ.

ಸತ್ಕಾರಕೂಟವೇರ್ಪಡಿಸಿದ್ದ ಮಾತ್ರಕ್ಕೆ ಇರುವ ವಿಷಯವನ್ನು ಮುಚ್ಚುಮರೆ ಮಾಡಬಾರದು ಸೇಠರೇ" ಎಂದು ನಾನು ಹೇಳುತ್ತಿರುವಲ್ಲಿ ಸೇಠರ ಮುಖ ಕೋಪದಿಂದ ಕೆಂಪಾಯಿತು.

"ಏನು, ನನ್ನನ್ನು ಏನೆಂದು ತಿಳಿದಿರಿ? ಬಾಯಿಗೆ ಲಗಾಮಿಲ್ಲದೆ ಮಾತನಾಡುತ್ತಿದ್ದೀರಲ್ಲ? ನಿರ್ಮಲೆಯಂಥ ಸಾವಿರಾರು ಜನಕ್ಕೆ ಸತ್ಕಾರ ಕೂಟವೇರ್ಪಡಿಸಿ ಸೈ ಎನಿಸಿಕೊಂಡವನಿಗೆ ಈ ನಿಮ್ಮ ಸಣ್ಣ ಮಾತು ನನಗೆ ಮಾನ ನಷ್ಟವಲ್ಲದೆ ಮತ್ತೇನು? ನಿರ್ಮಲೆಗಿಂತ ಸುಂದರಿಯರು ನನ್ನ ಬಳಿ ಎಷ್ಟು ಜನರಿದ್ದಾರೆಂದು ನಿಮಗೇನಾದರೂ ಗೊತ್ತಿದೆಯೇ? ಅವರೆಲ್ಲರೂ ಎಷ್ಟೋ ವರ್ಷದಿಂದ ನನ್ನನ್ನೇ ನಂಬಿ ಜೀವನ ನಡೆಸು ತ್ತಿಲ್ಲವೇ? ದೇವರನ್ನು ನಂಬಿದಂತೆ ನನ್ನನ್ನೇ ನೆಚ್ಚಿರುವ ನೂರಾರು ಜನ ರಿದ್ದಾರೆ. ಅವರ ಬಾಯಿಯಿಂದ ನೀವಾಡಿದಂಥ ಅಲ್ಪ ಮಾತು ಎಂದಾ ದರೂ ಬಂದೀತೇ?" ಎನ್ನುತ್ತಾ ಸೇಠರು ಉಗ್ರರೂಪ ತಾಳುತ್ತಿದ್ದರು.

ನನಗೂ ಕೂಡ ಸೇಠರಲ್ಲಿದ್ದ ಪೂಜ್ಯಭಾವನೆ ಇದ್ದಕಿದ್ದಂತೆ ಮಾಯ ವಾಯಿತು.

"ತಾವು ಹೇಳುತ್ತಿರುವುದನ್ನೇ ನಾನು ಕೂಡ ಹೇಳುತ್ತಿದ್ದೇನೆ, ಸೇಠರೇ, ನಿರ್ಮಲೆಯಂಥ ಎಷ್ಟೋ ಜನಕ್ಕೆ ತಾವು ಮೋಸಮಾಡಿದ್ದೀ ರೆಂದು ಈಗ ತಿಳಿಯಿತು. ತಮ್ಮ ಬಲೆಗೆ ಬಿದ್ದ ಮೇಲೆ ಆ ಹೆಂಗಸರು ನಿಮ್ಮನ್ನು ನಂಬದೆ ಮತ್ತಾರನ್ನು ನಂಬಿಯಾರು? ಅದನ್ನು ನೀವು ಹೇಳಿ ಹೊಗಳಿಕೊಂಡರೆ ಹಾಸ್ಯಾಸ್ಪದವಲ್ಲದೆ ಮತ್ತೇನು?

ಇದುವರೆಗೂ ನನ್ನಂತೆ ಯಾರೂ ತಮ್ಮನ್ನು ಎದುರುವಾದಿಸದೆ ಇರಬಹುದು. ಅದರಿಂದ ನಿಮ್ಮ ಶ್ರೀಮಂತಿಕೆಯ ಬಲ ತಿಳಿಯುತ್ತದೆಯೇ ಹೊರತು ನಿಮ್ಮ ವ್ಯಕ್ತಿತ್ವದ ಗುಣ ತಿಳಿಯಲಾರದು.

ನೀವು ಸಾಮಾನ್ಯ ವಿಟಪುರುಷರಲ್ಲ. ಅದಕ್ಕಾಗಿಯೆ ಇಲ್ಲಿಯ ತನಕ ನಿಮ್ಮ ಮಾನವನ್ನು ಯಾರೂ ಕಳೆದಿಲ್ಲ.

ಕೆಟ್ಟಕೆಲಸಮಾಡಲು ದೇವರು ನಿಮಗೆ ಒಳ್ಳೆಯ ಅವಕಾಶ ಕೊಟ್ಟಿ ದ್ದಾನೆ. ಸಾಮಾನ್ಯರಂತೆ ಹೆಂಗಸರ ಮನೆಯ ಮುಂದೆ ಹೊಂಚುಕಾದು ಕೈಯಲ್ಲಿ ಕಾಸಿಲ್ಲದೆ ನೂಕಿಸಿಕೊಳ್ಳುವ ಪ್ರಮೇಯ ನಿಮ್ಮಂಥ ಲಕ್ಷಾಧೀಶ್ವ

ರರಿಗೆ ಒದಗಲಾರದು. ಅಥವಾ ಅತ್ಯಾಚಾರ ನಡೆಸಿ ಅದನ್ನು ಮುಚ್ಚಿಡ ಲಾಗದೆ ಪೋಲೀಸರ ಕೈಗೆ ಸಿಕ್ಕಿ ಮುಂದಾಲೋಚನೆಯಿಲ್ಲದ ಯುವಕರು ನರಳುವಂತೆ ನೀವು ದುಃಖಪಡಬೇಕಾದದ್ದಿಲ್ಲ. ಇದೇ ರಾಜಕೀಯ ಸೂತ್ರ ವನ್ನೇ ಹಿಡಿದಿರುವ ನಿಮಗೆ ರಾಜಕೀಯ ಪಡೆಗಳು ಏನು ತಾನೆ ಮಾಡಿಯಾವು ?

ಎಂಥ ಶತ್ರುವನ್ನಾದರೂ ಕರೆದು ಸತ್ಕಾರಕೂಟದಲ್ಲಿ ಸತ್ಕರಿಸಿ ಮಿತ್ರರನ್ನಾಗಿ ಮಾಡಿಕೊಳ್ಳುವ ಯೋಗ್ಯತೆ ನಿಮಗೆ ದೈವದತ್ತವಾಗಿದೆ. ಹಾಗಿದ್ದಮೇಲೆ ಅಬಲೆಯರಾದ ಸ್ತ್ರೀಯರನ್ನೆಳೆದುಕೊಳ್ಳಲು ನಿಮಗೆ ಯಾವ ಕಷ್ಟ ತಾನೆ ಅಡ್ಡಿಬಂದೀತು ?

ಅಂಥ ಸುಯೋಗವಿರುವುದರಿಂದಲೇ ನಿರ್ಮಲೆಯನ್ನು ನಿರ್ಮಲೆ ಯನ್ನಾಗಿಯೆ ನೋಡುವ ಕಣ್ಣು ನಿಮಗಿದೆ.

ನಿರ್ಮಲೆ ಒಳ್ಳೆಯವಳೊ ಕೆಟ್ಟವಳೊ ನನಗೆ ಗೊತ್ತಿಲ್ಲ. ಆದರೆ ನಿಮ್ಮ ದೃಷ್ಟಿಯಿಂದ ಯಾವ ಹೆಂಗಸಿನ ಗುಣವನ್ನು ವಿಮರ್ಶಿಸುವುದೂ ತಪ್ಪು. ನಿಮ್ಮಂಥ ಗೋಮುಖವ್ಯಾಘ್ರಗಳು ಭಾರತಮಾತೆಯ ದೇಹದಲ್ಲಿ ಕಜ್ಜಿ ತುರಿ ಇದ್ದಂತೆ...."ಎಂದು ನಾನು ಮನಃಪೂರ್ವಕವಾಗಿಯೆ ಸೇಠ ರನ್ನು ನಿಂದಿಸಿದೆ.

ಸೇಠರಿಗೆ ಕೋಪ ನೆತ್ತಿಗೇರಿತು. ಎಂದೂ ಕಿವಿಗೆ ಬೀಳದ ಮಾತು ಇಂದು ಇದ್ದಕಿದ್ದಂತೆ ಕೇಳಬೇಕಾಯಿತು. ಅದೂ ಅಲ್ಲದೆ ತಮ್ಮ ಮನೆ ಯಲ್ಲಿ ತಾವೇ ನಿಂದೆಗೀಡಾದ್ದು ಅವರಿಗೆ ತುಂಬ ಅಪಮಾನಕರ ವಾಗಿತ್ತು. ಅವಮಾನದಿಂದ ಮತ್ತಷ್ಟು ಸಿಟ್ಟುಗೊಂಡರು. ಕಣ್ಣು ಕೆಂಪಾಯಿತು. ಜುಬ್ಬದ ಮೇಲಿನ ಸಿಲ್ಕ್ ವಲ್ಲಿ ಜಾರಿ ಕೆಳಕ್ಕೆ ಬಿತ್ತು. ಹೊಡೆಯುವವರಂತೆ ಜೋರಾಗಿ ನನ್ನನ್ನು ಮನಬಂದಂತೆ ಬೈಯ್ದರು.

"ನನ್ನ ಮನೆಯ ಸತ್ಕಾರಕೂಟಕ್ಕೆ ಬಂದು ನೀವು ಈ ರೀತಿ ಮಾತ ನಾಡುವುದು ತಪ್ಪು. ಅದು ಹೋಗಲಿ; ನಮ್ಮಿಂದ ದುಡ್ಡು ತೆಗೆದುಕೊಂಡ

ಮೇಲೆ ಸ್ವಲ್ಪವಾದರೂ ಮಾನ ಮರ್ಯಾದೆಯಿಟ್ಟು ಮಾತನಾಡಬೇಡವೇ? ಇನ್ನೊಬ್ಬರಾಗಿದ್ದರೆ ಇಷ್ಟು ಹರಟೆಗೆ ಅವಕಾಶವೇ ಕೊಡುತ್ತಿರಲಿಲ್ಲ. ನಂಬಿದವರಿಗೆ ಮೋಸಮಾಡುವ ಗುಣ ನಿಮ್ಮಲ್ಲಿರುವುದು ಹಿಂದೆ ನನಗೆ ತಿಳಿದಿರಲಿಲ್ಲ....." ಎಂದು ಸೇಠರು ಉರಿದುಬಿದ್ದರು.

"ನೀವು ನನ್ನ ಬಳಿ ದುಡ್ಡು ಕೊಟ್ಟ ಮಾತ್ರಕ್ಕೆ ನಿಮ್ಮ ಮೇಲೆ ಮಾತನಾಡುವ ಹಕ್ಕು ನನಗಿಲ್ಲವೇ? ಅದೂ ಅಲ್ಲದೆ ನೀವು ಕೊಟ್ಟ ದುಡ್ಡು ನನ್ನ ಉಪಯೋಗಕ್ಕಲ್ಲ. ನಿರಾಶ್ರಿತರಿಗಾಗಿ ಅರ್ಪಿಸಿದ ಹಣಕ್ಕೆ ಈಗಲೂ ಬಲೆ ಇದ್ದೇ ಇದೆ. ಆ ಕಾರ್ಯಕ್ಕೆ ನಿಮ್ಮನ್ನು ನಾನು ಯಾವಾಗಲೂ ಹೊಗಳುತ್ತೇನೆ. ಆದರೆ ಆ ನೆಪದಲ್ಲಿ ನಿರ್ಮಲೆಯಂಥವರನ್ನು ಬಲೆ ಗೆಳೆದುಕೊಳ್ಳುವ ಉಪಾಯವನ್ನೂ ಮಾಡುತ್ತಿರುವುದು ಜ್ಞಾಪಕವಿರಲಿ" ಎಂದಾಗ ಸೇಠರು ನನ್ನ ಮೇಲೆ ಕ್ರೂರ ದೃಷ್ಟಿ ಬೀರಿದರು.

ಮತ್ತೆ ಸೇಠರು ದೂರವಿಟ್ಟಿದ್ದ ಕೈ ಚೀಲವನ್ನು ತೆಗೆದುಕೊಂಡು ಅದರ ತುದಿಯಿಂದ ರೂಮಿನ ಬಾಗಿಲನ್ನು ಹಾಕಿದರು. ಏಕೆ ಆ ರೀತಿ ಮಾಡಿದರೋ ನನಗೆ ಅರ್ಥವಾಗಲಿಲ್ಲ.

"ಅಯ್ಯ ಸ್ವಾಮಿ, ಸ್ವಲ್ಪ ನಿಧಾನವಾಗಿ ಕೇಳಿ. ನೀವು ಈ ರೀತಿ ಎಲ್ಲರನ್ನೂ ಬೈಯುವುದಕ್ಕೆ ಶುರುಮಾಡಿಬಿಟ್ಟರೆ ನಿಮ್ಮಿಂದ ನಿರಾಶ್ರಿತರಿಗಾಗಿ ಧನ ಶೇಖರಣೆ ಮಾಡಲು ಸಾಧ್ಯವೇ? ಹಣ ಕೇಳಲು ಬಂದವರು ಯಾವಾಗಲೂ ದೈನ್ಯತೆಯಿಂದ ವರ್ತಿಸಬೇಕೇ ಹೊರತು ಬರಿಯ ಜಂಭ ಮಾಡಿದರಾಗುತ್ತದೆಯೆ? ಅದಕ್ಕಾಗಿಯೆ ಹುಷಾರಿನಿಂದ ಮಾತನಾಡುವುದನ್ನು ಕಲಿಯಿರಿ" ಎಂದು ಸೇಠರು ಸ್ವಲ್ಪ ತಗ್ಗಿದ ಸ್ವರದಲ್ಲೇ ಹೇಳಿದರು.

"ದುಡ್ಡೊಂದೇ ದೊಡ್ಡದಲ್ಲ ಸೇಠರೇ. ಬರಿಯ ದುಡ್ಡಿನಿಂದ ನಿರಾಶ್ರಿತ ಸಮಸ್ಯೆಯನ್ನು ನೀಗುತ್ತೇವೆಂದು ಹೇಳಲೂ ಸಾಧ್ಯವಿಲ್ಲ. ಆದರೆ ದುಡ್ಡಿದ್ದರ ಸಮಸ್ಯೆಯನ್ನು ಬೇಗ ಬಗೆಹರಿಸಬಹುದು. ಅಷ್ಟೇ ದುಡ್ಡಿನ ಕೆಲಸ.

ಈಗ ನಿಮ್ಮಂಥವರಿಂದ ಹಣ ಶೇಖರಣೆಯಾಗಿಬಿಟ್ಟರೆ ನಿರಾಶ್ರಿತ ಸಮಸ್ಯೆ ಮುಗಿದುಹೋಯಿತೆಂದು ತಿಳಿದುಕೊಳ್ಳಬೇಡಿ. ದುಡ್ಡಿನಿಂದ ಮನುಷ್ಯನಿಗೆ ಆವಶ್ಯಕವಾದ ಆಹಾರ ಬಟ್ಟೆಗಳು ಒದಗಬಹುದು. ಅಷ್ಟರಲ್ಲೇ ಮನುಷ್ಯ ತೃಪ್ತಿಹೊಂದುತ್ತಾನೆಯೇ, ಸೇಠರೇ?

ಈಗ ನಿರಾಶ್ರಿತರಲ್ಲಿ ನೂರಾರು ಸಮಸ್ಯೆಗಳಿವೆ. ಎಷ್ಟು ದುಡ್ಡು ಚೆಲ್ಲಿದರೂ ಅವುಗಳನ್ನು ಬಗೆ ಹರಿಸಲು ಸಾಧ್ಯವಿಲ್ಲವೆಂಬುದು ನಿಮಗೆ ಗೊತ್ತಿದೆಯೇ?" ಎಂದು ನಾನು ಹೇಳಿದಾಗ ಸೇಠರು ತುಂಬ ಅಸಮಾಧಾನ ಮಾಡಿಕೊಂಡವರಂತೆ ಮುಖ ಮಾಡಿದರು.

ನಾನು ಅಲ್ಲಿರುವುದು ಸೇಠರಿಗೆ ಬೇಡವಾಗಿತ್ತು. ತಾವಾಗಿಯೆ ನನ್ನನ್ನು ಇರಲು ಹೇಳಿದವರು ಈಗ ವಿಪರೀತ ಮಾತುಕತೆಗಳಿಂದ ಬೇಸರಿಕೆ ಪಟ್ಟುಕೊಂಡಿದ್ದಂತೆ ಕಂಡಿತು ಅದನ್ನರಿತ ನಾನು," ಏನೊ ಮಾತು ಎಲ್ಲಿಂದ ಎಲ್ಲೋ ಹೊರಟುಹೋಯಿತು. ದಯವಿಟ್ಟು ಏನೂ ತಿಳಿದುಕೊಳ್ಳಬೇಡಿ, ಸೇಠರೇ. ನನಗೆ ಸ್ವಲ್ಪ ಕೆಲಸವಿತ್ತು. ಬೆಳಗಿನ ಝಾವ ಬೇಗ ಏಳಬೇಕು. ಅದಕ್ಕಾಗಿ ಈಗಲೇ ನನ್ನ ರೂಮಿಗೆ ಹೋಗಿ ಮಲಗಿ ಬಿಟ್ಟರೆ ಬೇಗ ಏಳಲು ಸಹಾಯುವಾಗುತ್ತದೆ" ಎಂದೆ.

"ನಿಮ್ಮ ಕೆಲಸಕ್ಕೆ ನಾವೇಕೆ ಅಡ್ಡಿ ತರಬೇಕು? ನಮ್ಮ ಕಾರಿನಲ್ಲೇ ಡ್ರೈವರ್ ಬಿಟ್ಟು ಬರುತ್ತಾನೆ ನಾಳೆ ಮತ್ತೆ ಭೇಟಿ ಮಾಡೋಣ.." ಎಂದು ತಕ್ಷಣ ಸೇಠರು ಹಿಂದೆ ಮಲಗಿದ್ದ ಡ್ರೈವರನ್ನೆಬ್ಬಿಸಿ ಕಾರನ್ನು ಹೊರತರಲು ಅಪ್ಪಣೆ ಮಾಡಿದರು.

ಡ್ರೈವರು ಕಾರು ಸ್ಟಾರ್ಟ್ ಮಾಡಿ ಶೆಡ್ಡಿನಿಂದ ಹೊರತಂದನು. ಸೇಠರಿಗೆ ನಮಸ್ಕರಿಸಿ ಕಾರನ್ನು ಹತ್ತಿದೆ. ಯಾವಾಗಲೂ ಹೊರಗೆ ಬಂದು ಬೀಳ್ಕೊಡುತ್ತಿದ್ದ ಸೇಠರು ಅಂದು ನನಗೆ ಪ್ರತಿವಂದನೆಯನ್ನು ಮಾಡಿ ರೂಮೊಳಕ್ಕೆ ಹೊರಟುಹೋದರು. ಜಾಸ್ತಿ ಮಾತನಾಡದೆ ಸೇಠರು ಹಾಗೆ ತಕ್ಷಣ ಹೊರಟುಹೋದುದಕ್ಕೆ ನನ್ನ ಮೇಲಿನ ಬೇಸರಿ

ಕೆಯೋ ಕಾರಣವಿರಬಹುದೆಂದು ಊಹಿಸಿದೆ. ಅಂತೂ ಸೇಠರಿಗೂ ನನಗೂ ಆರಂಭವಾದ ಸಾಮಾನ್ಯ ಮಾತುಕಥೆ ವಿರಸಕ್ಕೆಡೆಕೊಟ್ಟಿತು. ಆದರಿಂದಲೇ ನಾನು ಹೊರಡುತ್ತೇನೆಂದಾಗ ಸೇಠರು ತಕ್ಷಣ ಸಮ್ಮತಿಯಿತ್ತು ಕಾರಿನಲ್ಲೇ ಕಳಿಸಿಕೊಟ್ಟದ್ದು.

ಕಾರು ಗೇಟಿನ ಬಳಿ ಬಂದಾಗ ಬಳೆಯ ಸದ್ದು ಕೇಳಿದಹಾಗಾ ಯಿತು ಗಾಜಿನ ಕಿಟಕಿ ತೆಗೆದು ನೋಡಲು ಯಾವುದೊ ಮುದುಕಿ ಒಬ್ಬ ಸುಂದರವಾದ ಯುವತಿಯನ್ನು ಬಲಾತ್ಕಾರವಾಗಿ ಎಳೆದುಕೊಂಡು ಹೋಗು ತ್ತಿರುವಂತೆ ಕಂಡಿತು. ಕಾರಿನ ದೀಪದ ಬೆಳಕಲ್ಲಿ ಒಂದು ಕ್ಷಣ ಅವ ರನ್ನು ನೋಡುವಂತಾದರೂ ಸರಿಯಾಗಿ ತಿಳಿದುಕೊಳ್ಳಲು ಅವಕಾಶವಿರ ಲಿಲ್ಲ. ತಕ್ಷಣ ಕಾರು ಮುಂದಕ್ಕೆ ಹೊರಟುಹೋಯಿತು.

ಅಷ್ಟು ಹೊತ್ತಿನಲ್ಲಿ ಸೇಠರ ಮನೆಗೆ ಆ ಸುಂದರ ಯುವತಿ ಬರು ತ್ತಿರಲು ಕಾರಣವೇನು? ಅದೂ ಬಲಾತ್ಕಾರವಾಗಿ ಹೋಗುತ್ತಿದ್ದಂತೆ ಕಂಡಿತಲ್ಲ! ನನ್ನ ಊಹೆ ಸರಿಯೇ ಇರಬೇಕೆಂದು ಭಾವಿಸಿಕೊಂಡೆ. ಅದಕ್ಕಾಗಿಯೆ ನನ್ನನ್ನು ಸೇಠರು ಬೇಗ ಹೊರಡಲು ಏರ್ಪಾಡುಮಾಡಿದ ರೆಂದು ತಿಳಿಯಿತು.

ಕಾರಿನಿಂದಿಳಿದು ನನ್ನ ರೂಮಿನಲ್ಲಿ ನಾನು ಮಲಗಿದೆ. ಆಗಲೇ ರಾತ್ರಿ ಹನ್ನೆರಡು ಗಂಟೆ ಸಮಯವಾಗಿತ್ತು. ಸೊಗಸಾದ ಊಟ ವಾಗಿತ್ತು. ಅಂತೆಯೆ ಯಾವ ಯೋಚನೆಗೂ ಅವಕಾಶಕೊಡದೆ ನಿದ್ದೆ ಬೇಗ ಬಂದಿತು.

ಎರಡು ದಿನಗಳಾದರೂ ಸೇಠರು ನನ್ನನ್ನು ಯಾವುದಕ್ಕೂ ಹೇಳಿ ಕಳಿಸಲಿಲ್ಲ. ನನ್ನ ಮೇಲೆ ತುಂಬ ಕೋಪಮಾಡಿಕೊಂಡಿದ್ದರು ಆದರೆ ಅವರ ಕೋಪ ಬೇರೆಯ ರೂಪ ತಾಳಿ ಎಲ್ಲೆ ಕಟ್ಟನ್ನು ಮೀರಿದೆಯೆಂದು ಒಂದು ದಿನ ತಿಳಿಯಿತು.

ಒಂದು ಸಂಜೆ ಸಮುದ್ರದ ಬಳಿ ತಿರುಗಾಡಲು ಹೊರಟಾಗ ಹಿರೇಲಾಲ ಭೇಟಿಯಾದ. ಮೆಲ್ಲಗೆ ನನ್ನ ಬಳಿ ಬಂದು 'ಸ್ವಲ್ಪ ದೂರ ಬನ್ನಿ. ಒಂದು ವಿಷಯ ಹೇಳಬೇಕು.' ಎಂದ. ಸ್ವಲ್ಪ ದೂರ ಹಾಗೆಯೆ ಮಾತನಾಡುತ್ತ ಹೊರಟೆವು. "ಏನು ವಿಷಯ ಹೇಳಬೇಕೆಂದಿದ್ದಿರಲ್ಲ; ಸೇಠರ ವಿಚಾರವಾಗಿಯೋ?" ಎಂದು ಕೇಳಿದೆ. ಆದಕ್ಕೆ ಹಿರೇಲಾಲ, "ಹೌದು ನೋಡಿ, ಏಕಿಗೆ ನಿಮ್ಮನ್ನು ಒಂದೇ ಸಮನೆ ಬಯ್ಯುತ್ತಿರುತ್ತಾರಲ್ಲ. ಕಾರಣವೇನು?" ಎಂದನು.

"ಅದೆಲ್ಲ ಏಕೆ ಹಿರೇಲಾಲರೇ? ಸೇಠರು ಏನು ಬೇಕಾದರೂ ಬಯ್ಯಲಿ; ನಾನೇನು ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲ. ಅವರನ್ನು ಯಾವಾಗಲೂ ಪರಮ ಮಿತ್ರರೆಂದೇ ತಿಳಿದುಕೊಂಡಿದ್ದೇನೆ" ಎಂದು ನಾನು ಹೇಳಿದಾಗ ಹಿರೇಲಾಲ ಸ್ವಲ್ಪ ಅಲ್ಲೇ ಇದ್ದ ಬೆಂಚಿನ ಮೇಲೆ ಕುಳಿತ.

"ನೀವು ಹೇಳಿದರಲ್ಲ ಪರಮಮಿತ್ರರೂ ಅಂತ. ಈಗ ಅದಕ್ಕೇ ಧಕ್ಕೆ ಬಂದಿರೋದು. ನಿಮ್ಮ ಮೇಲೆ ದೊಡ್ಡ ಆರೋಪಣೆಯ ಪತ್ರವನ್ನು ಬರೆದು ಸೇಠರು ಕೇಂದ್ರ ಸಮಿತಿಗೆ ಕಳಿಸಿದ್ದಾರೆ. ಅದಕ್ಕೆ ನನ್ನ ಸಹಿಯನ್ನೂ ಹಾಕಿಸಿಕೊಂಡರು. ಆಗಲೇ ನಿಮಗೆ ಹೇಳೋಣವೆಂದಿದ್ದೆ. ಆದರೆ ಅವಕಾಶವಾಗಲಿಲ್ಲ. ಇಷ್ಟು ಹೊತ್ತಿಗಾಗಲೇ ಅವರ ಪತ್ರ ಡೆಲ್ಲಿಯನ್ನು ಮುಟ್ಟಿರಬೇಕು" ಎಂದು ಹಿರೇಲಾಲ ಗುಟ್ಟಿನ ವಿಷಯವನ್ನು ಹೇಳುವಂತೆ ಕಾತುರತೆಯಿಂದ ನುಡಿದ.

"ಹಿರೇಲಾಲರೇ, ಏಕೆ ಅಷ್ಟು ಗಾಬರಿಯಿಂದ ಮಾತನಾಡುತ್ತೀರಿ? ನಿಮಗೆ ಗಾಬರಿಯಿದ್ದರೂ ನನಗೇನೂ ಇಲ್ಲ. ಸೇಠರ ಪತ್ರವನ್ನು ನೋಡಿ ಕೇಂದ್ರ ಸಮಿತಿಯವರು ನನ್ನ ಮೇಲೆ ತನಿಖೆ ನಡೆಸಬಹುದು. ಅದಕ್ಕೆ ನಾನೇನೂ ಹೆದರಬೇಕಾದ ಪ್ರಮೇಯವಿಲ್ಲ. ಆದರೆ ನೀವು ಆ ಆರೋಪಣೆಯ ಪತ್ರಕ್ಕೆ ಸಹಿ ಹಾಕಿದ ಮೇಲೆ ಅದರಲ್ಲಿ ಬರೆದ ವಿಷಯವೇನೆಂಬುದನ್ನು ನೋಡಲಿಲ್ಲವೇ?" ಎಂದು ನಾನು ಕೇಳಿದೆ.

"ಅಯ್ಯೋ, ಹಾಗೆಲ್ಲ ಸೇಠರ ಪತ್ರವನ್ನು ನಾವು ನೋಡುವುದಕ್ಕಾಗುತ್ತದೆಯೇ? ಅವರು ಸಹಿ ಹಾಕೆಂದರೆ ಹಾಕಿಬಿಡುವುದು ನಮ್ಮ ಕೆಲಸ.

ಹಾಗಿಲ್ಲದಿದ್ದರೆ ನಮಗೆ ಜೀವನ ನಡೆಯುವುದು ಹೇಗೆ ಸ್ವಾಮಿ? ಅವರಿಂದಲೇ ನಾನು ಇಷ್ಟರ ಮಟ್ಟಿಗೆ ಬದುಕಿದ್ದೇನೆ" ಎಂದನು ಹಿರೇಲಾಲ.

"ಅದಕ್ಕೇ ಹಿರೇಲಾಲರೇ, ಸೇಠರ ದರ್ಬಾರಿಗೆ ಕೊನೆಮೊದಲಿಲ್ಲದಿರುವುದು. ನಿಮ್ಮಂಥ ನಾಲ್ಕಾರು ಜನ ಹೊಗಳುಭಟ್ಟರಿಂದ ಅವರು ಗಣ್ಯವ್ಯಕ್ತಿಗಳಾಗಿದ್ದಾರೆ. ಇಷ್ಟಕ್ಕೆ ನೀವು ಸಾಹಿತಿಗಳು ಬೇರೆ. ಸೇಠರ ಪತ್ರವನ್ನು ನೋಡುವುದಕ್ಕೇ ಹಿಂಜರಿದು ನನ್ನ ಬಳಿ ಬಂದು ಗಾಬರಿಯಿಂದ ಮಾತನಾಡುವ ನಿಮಗೆ ದಿಟ್ಟತನದ ಸಾಹಿತಿಯ ಲಕ್ಷಣವಿದೆಯೇ?

ಹಿಂದಿನ ಕಾಲದಲ್ಲಿ ಕೆಲವು ರಾಜರು ತಮ್ಮ ಅವಿವೇಕದ ಕೆಲಸಗಳನ್ನೆಲ್ಲ ಹೊಗಳಿಸಿಕೊಳ್ಳುವುದಕ್ಕೆ ಆಸ್ಥಾನದಲ್ಲೇ ಸಾಹಿತಿಗಳನ್ನಿರಿಸಿಕೊಳ್ಳುತ್ತಿದ್ದರು. ಅಂಥ ಓಬೀರಾಯನ ಕಾಲದ ಸಾಹಿತಿಗಳ ಗುಂಪಿಗೆ ನೀವು ಸೇರಿದವರೆಂದರೆ ನಿಜವಾದ ಮಾತು. ಆದ್ದರಿಂದಲೇ ಸೇಠರಂಥವರು ರಾಜನಿಗಿಂತಲೂ ಹೆಚ್ಚಿನ ದರ್ಬಾರು ನಡೆಸುತ್ತಿರುವುದು. ಕಣ್ಣು ಮುಚ್ಚಿಕೊಂಡು ಕೆಲಸ ಮಾಡುವ ನಿಮ್ಮಂಥವರಿಂದ ಏನು ತಾನೆ ಸಾಧನೆಯಾದೀತು?" ಎಂದು ನಾನು ಹಿರೇಲಾಲನ ಮುಖ ಇಳಿಸಿಬಿಟ್ಟೆ.

ಹಿರೇಲಾಲ ಬೆಚ್ಚಿಬಿದ್ದ. ನಿಜವಾಗಿಯೂ ಹಿರೇಲಾಲ ಗಂಡಸಾಗಿದ್ದರೂ ಹೆಂಗಸರಿಗಿಂತಲೂ ಹೆಚ್ಚಿನ ಹೆದರಿಕೆಯ ಸ್ವಭಾವದವನು. ನಾನಾಡಿದ ಮಾತುಗಳಿಗೇ ಅಂಜಿ ತಪ್ಪಿಸಿಕೊಳ್ಳಲೆಳಸಿದ.

"ನಾನು ಮೊದಲೇ ನಿಮಗೆ ವಿಷಯ ತಿಳಿಸಿದುದರ ಉದ್ದೇಶ ಅದರಿಂದ ಪಾರಾಗಲೆಂದು. ಹಾಗೆ ಹೇಳಿದವನ ಮೇಲೆಯೆ ನೀವು ಈ ರೀತಿ ಹೀಯಾಳಿಸುವುದು ಚೆನ್ನಾಗಿಲ್ಲ" ಎಂದು ಹಿರೇಲಾಲ ಹೊರಡಲು ಸಿದ್ಧನಾದ.

"ಹಿರೇಲಾಲರೇ, ನಾನು ಪಾರಾಗಲು ತಾವು ಮುನ್ನೆಚ್ಚರಿಕೆ ಕೊಡುವ ಅವಶ್ಯಕತೆಯೇನೂ ಇಲ್ಲ. ಆದರೂ ನಿಮಗೆ ವಂದನೆಗಳು" ಎಂದು ನಾನು ನಮಸ್ಕರಿಸಲು ಹಿರೇಲಾಲ ತನ್ನ ದಾರಿ ತಾನು ಹಿಡಿದ.

ಅತ್ತ ಹಿರೇಲಾಲ ಹೊರಟಮೇಲೆ ನನ್ನ ರೂಮಿನ ಕಡೆಗೆ ನಾನು ನಡೆದೆ. ಸೇಠರು ನನ್ನ ಮೇಲೆ ಒಳಸಂಚು ನಡೆಸುತ್ತಿರುವುದರಲ್ಲಿ ಸಂಶಯ ವಿರಲಿಲ್ಲ. ಅಂದು ನಾನು ಅವರ ಬಳಿ ಮನಬಂದಂತೆ ಮಾತನಾಡಿದ್ದರೂ ಅದರಲ್ಲಿ ಸತ್ಯಾಂಶವಿತ್ತು. ಮೇಲೆ ನೋಡಲು ಮರ್ಯಾದೆಯಾಗಿ ನಟಿ ಸುವ ಯಾರನ್ನೇ ಆಗಲಿ ಬಯಲಿಗೆಳೆಯುವುದು ಕರ್ತವ್ಯದೃಷ್ಟಿಯಿಂದ ಪವಿತ್ರವಾದುದೆಂದು ನಂಬಿದ್ದೆ. ಅವರು ಸಾಮಾನ್ಯರಾಗಲಿ, ಸೇಠರಂಥ ವ್ಯಕ್ತಿಗಳಾಗಲಿ ಹೆದರುವ ಸ್ವಭಾವ ನನ್ನಲ್ಲಿರಲಿಲ್ಲ. ಅದರಿಂದಲೇ ಸೇಠರು ನನ್ನ ಮೇಲೆ ಆರೋಪಣೆಯ ಪತ್ರವನ್ನು ಬರೆದು ಡೆಲ್ಲಿಗೆ ಕಳಿಸಿದ್ದು.

ಮಾರನೆಯ ದಿನ ಡೆಲ್ಲಿಯಿಂದ ನನ್ನ ವಿಳಾಸಕ್ಕೆ ಪತ್ರವೊಂದು ಬಂದು ಸೇರಿತು. ಕೇಂದ್ರ ಸಮಿತಿಯಿಂದಲೇ ಆ ಪತ್ರ ಕಳಿಸಲ್ಪಟ್ಟಿತ್ತು. ಸೇಠರು ಕಳಿಸಿದ್ದ ಆರೋಪಣೆಯ ಪತ್ರವನ್ನೇ ಆಧಾರವಾಗಿಟ್ಟುಕೊಂಡು ನನ್ನನ್ನು ಅದಕ್ಕಾಗಿ ವಿವರಣೆ ಕೊಡಬೇಕೆಂದು ಕೇಳಿಕೊಂಡಿದ್ದರು. ಖೂನಿ ಮಾಡಿದವನನ್ನು ತನಿಖೆ ಮಾಡುವಂತಿತ್ತು ಅವರ ಪತ್ರ. ನನಗೆ ತುಂಬ ಸಿಟ್ಟು ಬಂದಿತು. ಯಾರದೋ ಮಾತನ್ನು ಪೂರ್ಣ ನಂಬಿ ವಿವೇಚನೆಯಿಲ್ಲದೆ ವರ್ತಿಸಿದ್ದ ಕೇಂದ್ರ ಸಮಿತಿಯವರ ಮೇಲೆಯೆ ಉರಿದು ಬಿದ್ದೆ. ತಕ್ಷಣ ಆ ಪತ್ರವನ್ನು ಹರಿದು ಎಸೆದುಬಿಟ್ಟೆ. ಮರುಟಪಾಲಿ ನಲ್ಲೇ ಉತ್ತರ ಬರೆದು ಹಾಕಿಬಿಟ್ಟೆ. ಅದು ಬರಿಯ ಉತ್ತರವಾಗಿರಲಿಲ್ಲ; ರಾಜೀನಾಮೆಯ ಪತ್ರವಾಗಿತ್ತು.

"ನಿಮ್ಮ ಪತ್ರ ತಲುಪಿತು. ವಿಷಯ ನೋಡಿ ತುಂಬ ದುಃಖವಾ ಯಿತು. ನಾಲ್ಕಾರು ವರ್ಷಗಳು ದುಡಿದವನನ್ನು ಒಂದೇ ಮಾತಿನಲ್ಲಿ ಹೀಯಾಳಿಸಿದ್ದೀರಿ.

ಸೇಠರ ಮಾತನ್ನೇ ಆಧಾರವಾಗಿ ತೆಗೆದುಕೊಂಡು ನೀವು ನನ್ನನ್ನು ತನಿಖೆ ಮಾಡಿರುವುದು ತುಂಬ ಅಪಮಾನಕರ. ಮುಖ ಪರಿಚಯವಿಲ್ಲ ದಿದ್ದರೂ ಸೇಠರು ನಿಮಗೆ ಪರಮ ಮಿತ್ರರಾಗಿದ್ದಾರೆ. ಆದರೆ ನಿಮಗಾಗಿ– ಅಂದರೆ ನಿರಾಶ್ರಿತರಿಗಾಗಿ–ಕಷ್ಟಪಡುತ್ತಿದ್ದ ನಾನು ಹೊಸಬನಾಗಿ ಹೋಗಿ

ದ್ದೇನೆ. ಅದಕ್ಕಾಗಿ ನಾನು ದುಃಖಪಡುತ್ತಿಲ್ಲ. ಇನ್ನು ಮೇಲಾದರೂ ಇಂಥ ಪ್ರಸಂಗಗಳು ಒದಗದಂತೆ ನೋಡಿಕೊಳ್ಳಿ.

ನಾನು ತಮಗೆ ಪತ್ರದ ಮುಖ್ಯ ವಿಷಯ ಇನ್ನೂ ತಿಳಿಸಿಲ್ಲ ಅದೇನೆಂದರೆ ನಾನು ಮುಂದೆ ನಿಮ್ಮ ರಾಯಭಾರಿಯಾಗಿ ಯಾವ ಕೆಲಸವನ್ನೂ ಮಾಡಲು ಇಚ್ಛಿಸುವುದಿಲ್ಲ ಅದೇ ಕೆಲಸವನ್ನು ಮನಸ್ಸಿನಲ್ಲೇ ಪರ್ಯಾಲೋಚಿಸಿ ನನ್ನ ಪಾಡಿಗೆ ನಾನು ಯಾವುದೋ ಮೂಲೆಯಲ್ಲಿದ್ದೇ ಕಾರ್ಯಗತ ಮಾಡಬೇಕೆಂದಿದ್ದೇನೆ.

ಆತ್ಮತೃಪ್ತಿಗಾಗಿ ಕೆಲಸ ಮಾಡುವವನು ಸ್ವತಂತ್ರನಾಗಿರಲು ಬಯಸುತ್ತಾನೆ. ಅಂತೆಯೆ ನಾನು ಕೂಡ ಭಾರತದ ಮೂಲೆ ಮೂಲೆಗಳಲ್ಲಿ ಸಂಚರಿಸಿ ಆದಷ್ಟು ಹೊಸರೀತಿಯ ಜನರನ್ನು ಕಾಣಬೇಕೆಂದಿದ್ದೇನೆ.

ಇಂದು ಡೆಲ್ಲಿ ನನಗೆ ಬೇಡವಾಗಿದೆ. ನಾನು ಮುಂಬಯಿಗೆ ಹೊರಟು ಬಂದ ಮೇಲೆ ನನ್ನ ಶಿಬಿರವೇ ಹಾಳಾಗಿ ಹೋಗುತ್ತಿರುವ ವಿಷಯ ತಿಳಿದು ಬಂತು. ಆದರಿಂದ ಆಶಾ ಪ್ರಾಣವನ್ನೇ ನೀಗಬೇಕಾಯಿತು. ಕೇವಲ ಒಂದೆರಡು ವ್ಯಕ್ತಿಗಳಿಗೆ ಹೆದರಿ ಶಿಬಿರ ನಡೆಯುತ್ತಿತ್ತೆಂದು ಈಗ ತಿಳಿಯಿತು.

ಆದಕ್ಕಾಗಿಯೆ ಮುಖಂಡನಾಗಿ ಕೆಲಸ ಮಾಡಲು ನಾನು ಬಯಸುವುದಿಲ್ಲ ಇದು ಮುಖಂಡರ ಯುಗವಲ್ಲ. ವ್ಯಕ್ತಿಗೆ ಪ್ರಾಧಾನ್ಯತೆಯನ್ನು ಕೊಡುವ ಕಾಲ ಬಂದಿದೆ. ಆದ್ದರಿಂದ ಸಾಮಾನ್ಯನಾಗಿಯೆ ಇರಬೇಕೆಂದು ಬಯಸುತ್ತೇನೆ.

ನಿಮ್ಮಿಂದ ನನಗೆ ಮುಂಬಯಿಯಲ್ಲಿ ಹೊಸ ಅನುಭವಗಳಾದುವು. ಆ ಅವಕಾಶವನ್ನು ಕಲ್ಪಿಸಿಕೊಟ್ಟದ್ದಕ್ಕಾಗಿ ದೂರದಿಂದಲೇ ನಿಮಗೆ ವಂದನೆಯರ್ಪಿಸುತ್ತೇನೆ" ಎಂದು ಕಾಗದ ಬರೆದು ಹಾಕಿಬಿಟ್ಟೆ.

ತಕ್ಷಣ ರೂಮನ್ನು ಬಿಟ್ಟು ಹೊರಹೊರಟೆ. ಯಾವ ಜವಾಬ್ದಾರಿಯೂ ಇಲ್ಲದ ಹಾಗೂ ಬೇಜವಾಬ್ದಾರಿಯಲ್ಲದ ಸಾಮಾನ್ಯ ಮನುಷ್ಯನ ವ್ಯಕ್ತಿತ್ವವನ್ನು ಸಂಪಾದಿಸಿಕೊಂಡಿದ್ದೆ. ಸ್ವಲ್ಪ ದೂರ ಹೋದ ಮೇಲೆ ಜೋಬಿಗೆ ಕೈಹಾಕಿ ನೋಡಿದೆ. ದುಡ್ಡಿದ್ದುದು ಆಗ ಜ್ಞಾಪಕಕ್ಕೆ ಬಂದಿತು.

ಏನೋ ಯೋಚನೆ ಮಾಡಿ ಪುನಃ ರೂಮಿಗೆ ಹಿಂತಿರುಗಿದೆ. ಬಟ್ಟೆಬರೆ ಗಳನ್ನು ಪೆಟ್ಟಿಗೆಗೆ ಹಾಕಿ ಊರು ಬಿಟ್ಟು ಹೊರಡಲು ಸಿದ್ಧನಾದೆ.

ಎಲ್ಲಿಗೆ ಹೋಗಬೇಕೆನ್ನುವ ಅರಿವು ನನಗಿರಲಿಲ್ಲ. ಅಂತೂ ಸ್ಟೇಷ ನ್ನಿಗೆ ತಲುಪಿದ ಮೇಲೆ ನೋಡೋಣವೆಂದುಕೊಂಡೆ. ಪೂನಾಕ್ಕೆ ಹೋಗಲೇ ಎಂದು ಯೋಚಿಸಿದೆ. ಆದರೆ ನಿರ್ಮಲೆಯೇನಾದರೂ ಅಲ್ಲಿ ಸಿಕ್ಕಿಬಿಟ್ಟರೆ ಹಿಂದಿನ ನೆನಪು ಮತ್ತೆ ಮರುಕಳಿಸುವುದೆಂದು ನಿಲ್ಲಿಸಿಬಿಟ್ಟೆ. ಯಾವುದೋ ಮನಸ್ಸಿನಿಂದ ಒಬ್ಬಾತ ಟಿಕೆಟ್ ತೆಗೆದುಕೊಳ್ಳುತ್ತಿದ್ದ. ಅದನ್ನು ನೋಡಿ ನಾನೂ ಅದೇ ಊರಿಗೆ ಟಿಕೆಟ್ ತೆಗೆದುಕೊಂಡೆ.

ಮುಂಬಯಿಗೆ ಅಷ್ಟಾಗಿ ದೂರವಿಲ್ಲದ ನಿಲ್ದಾಣ ಸಿಕ್ಕೇಬಿಟ್ಟಿತು. ಹೋಟೆಲಲ್ಲಿ ಊಟವಾ ಡಿ ಮಾಸಿದ ಬಟ್ಟೆಗಳನ್ನು ಬೇಕೆಂತಲೆ ಬದಲಾ ಯಿಸದೆ ತಿರುಗಾಟಕ್ಕಾರಂಭಿಸಿದೆ. ಎಷ್ಟೋ ಬಾರಿ ಜನರ ಗುಂಪಿನ ಮಧ್ಯ ದಲ್ಲಿ ನುಸುಳಿಕೊಂಡು ಅವರ ಮಾತುಕತೆಗಳನ್ನು ಕೇಳುತ್ತಲಿದ್ದೆ. ಏನೂ ತಿಳಿಯದವನಂತೆ ಕಾಣುತ್ತಿದ್ದ ನನ್ನ ಮುಂದೆ ಪಿಸುಮಾತು ಗಟ್ಟಿಯಾ ಗಿಯೆ ಕೇಳಿಸುತ್ತಿತ್ತು.

ಒಂದು ದಿನ ಬರುತ್ತಿದ್ದಾಗ ಕೆಲವು ಮನೆಗಳು ಬೆಂಕಿಯಿಂದ ಉರಿ ಯುತ್ತಿದ್ದಂತೆ ಕಂಡಿತು. ಜ್ವಾಲೆಯ ಮಧ್ಯದಲ್ಲೇ ನಿಂತುಕೊಂಡು ಜನ ಹೊಡೆದಾಡುತ್ತಿದ್ದರು. ಗಲಭೆ ಮಾಡುತ್ತಿದ್ದ ಎರಡು ಪಕ್ಷದವರೂ ಹಿಂದೂಗಳೇ ಆಗಿದ್ದರು. ಅದೂ ಯುವಕರು. ಕೈಯಲ್ಲಿ ಶಕ್ತಿಯಿದೆ ಯೆಂದು ಒಂದೇ ಸಮನೆ ಉಪಯೋಗಿಸುತ್ತಿದ್ದರು. ಒಂದು ಪಂಗಡ ಕಪ್ಪು ಟೋಪಿ ಹಾಕಿತ್ತು. ಇನ್ನೊಂದು ಪಂಗಡ ಬಿಳಿಯ ಖಾದಿ ಟೋಪಿ ಯನ್ನು ಧರಿಸಿತ್ತು. ತಮ್ಮ ತಮ್ಮಲ್ಲಿಯೆ ಏಕೆ ಜಗಳವಾಡುತ್ತಿದ್ದಾರೆಂದು ಅರ್ಥವಾಗಲಿಲ್ಲ.

ಗುಂಪಿನ ತುದಿಯಲ್ಲಿ ನಿಂತಿದ್ದ ಮಿಾಸೆ ಗಡ್ಡಗಳಿಂದ ಅಲಂಕೃತನಾ ಗಿದ್ದ ಒಬ್ಬ ಯುವಕ ಗುಂಪನ್ನು ಹುರಿದುಂಬಿಸುತ್ತಿದ್ದ. ಜಟ್ಟಿ ಕಾಳಗದಲ್ಲಿ

ಹಟ್ಟು ತೋರಿಸಲು ಕೈಸನ್ನೆ ಮಾಡುವಂತೆ ಅಂಗಚೇಷ್ಟೆ ಮಾಡುತ್ತಿದ್ದ. ಒಬ್ಬ ಕೆಳಗೆ ಬಿದ್ದ ಅಂದರೆ ಜೋರಾಗಿ ಕೂಗಾಡುತ್ತ ಸಂತೋಷ ವ್ಯಕ್ತ ಪಡಿಸುತ್ತಿದ್ದ.

ನಾನು ಹತ್ತಿರ ಬಂದು ಅವನನ್ನು ಕೇಳಿದೆ, "ಏತಕ್ಕಾಗಿ ಇಷ್ಟು ದೊಡ್ಡ ಗಲಾಟೆಯಾಗಿದೆ? ಮನೆಗಳು ಬೇರೆ ಉರಿಯುತ್ತಿದೆಯಲ್ಲ. ಕಾರಣವೇನು?'' ಎಂದು.

ಅದಕ್ಕೆ ಆ ಯುವಕನು, "ಮಹಾತ್ಮ ಗಾಂಧೀಜಿಯವರನ್ನು ಕೊಂದ ಈ ಪಟಿಂಗರ ಮನೆಗಳನ್ನು ಸುಟ್ಟು ಭಸ್ಮ ಮಾಡದಿದ್ದರೆ ದೇಶಕ್ಕೆ ಉಳಿಗಾಲವಿಲ್ಲ. ಇವರ ಸಂಸ್ಥೆಗೆ ಸೇರಿದವನೇ ಆ ಕೊಲೆಗಡುಕ. ಅಂಥ ಸಂಸ್ಥೆ ಇದ್ದರೇನು ಹೋದರೇನು? ಅದಕ್ಕಾಗಿಯೆ ಸದೆಬಡಿಯುತ್ತಿದ್ದೇವೆ. ಸರ್ಕಾರದವರು ಅವರನ್ನು ಬರಿ ದಸ್ತಗಿರಿ ಮಾಡಿದರೆ ಸಾಲದು. ಎಲ್ಲರೆದುರಿಗೂ ನೇತುಹಾಕಿಬಿಟ್ಟರೆ ಅವರ ಪ್ರಭಾವ ತಾನಾಗಿಯೆ ಇಳಿದುಹೋಗುತ್ತದೆ" ಎಂದು ಆವೇಶಪೂರಿತವಾಗಿ ಮಾತನಾಡಿ ಸಣ್ಣ ಲಾಠಿ ಹಿಡಿದು ತಾನೂ ಗುಂಪೊಳಗೆ ಪ್ರವೇಶಿಸಿದ.

ನಾನು ಮರುಮಾತಾಡದೆ ಹಿಂತಿರುಗಿದೆ. ಆ ಸಂದರ್ಭದಲ್ಲಿ ಯಾವ ಮಾತು ಆಡಿದರೂ ನನ್ನ ಜೀವಕ್ಕೇ ಹೆಚ್ಚುಕಡಿಮೆಯಾಗುತ್ತಲಿತ್ತು. ಆದ್ದರಿಂದ ಸುಮ್ಮನಿದ್ದುಬಿಟ್ಟೆ.

ಕೆಲವರು ತುಳಿಯುವ ಟಾರು ರೋಡಿನ ಮೇಲೆಲ್ಲ ಚೀಟಿ ಅಂಟಿಸುತ್ತಿದ್ದರು. ಮತ್ತೆ ಕೆಲವರು ಗೋಡೆಗೆ ಹಾಕಿ ಒತ್ತುತ್ತಿದ್ದರು. ಇನ್ನು ಕೆಲವರು ಜಾಗವಿದ್ದೆಡೆಯಲ್ಲೆಲ್ಲಾ ತಮ್ಮದೇ ಆದ ಲಾವಣಿಯನ್ನು ಬರೆಯುತ್ತಿದ್ದರು. ಬಾಯಿಗೆ ಬಂದದ್ದೇ ಪ್ರಾಸವಾಗಿತ್ತು.

ಶಾಂತಿಗಾಗಿ ಹೊಡೆದಾಡಿದ ಮಹಾತ್ಮನು ಸತ್ತ ಕೆಲವೇ ದಿನಗಳಲ್ಲಿ ಏರ್ಪಟ್ಟ ಈ ಅಶಾಂತಿ ವಾತಾವರಣವನ್ನು ಕಂಡು ನನಗೆ ಬೇಸರವಾಯಿತು.

ಆ ಸ್ಥಳವನ್ನು ಬಿಟ್ಟು ದಕ್ಷಿಣದ ಕಡೆಗೆ ಪ್ರಯಾಣ ಮಾಡಲು ತೊಡಗಿದೆ. ಉತ್ತರ ದೇಶದ ಗಾಳಿಯೊಡನೆ ತುಂಬಿದ್ದ ರಾಜಕೀಯದ ವಿಷವು ದಕ್ಷಿಣ ದೇಶದಲ್ಲಿ ಕಾಣಬರಲಿಲ್ಲ ಅದೂ ಅಲ್ಲದೆ ಇಲ್ಲಿಯ ಜನರು ತಮ್ಮ ತಮ್ಮ ವಿಷಯಗಳಲ್ಲೇ ಆಸಕ್ತರಾಗಿದ್ದರು. ಮಳೆ ಬೆಳೆ ಯಾಗದಿದ್ದರೂ ನಿಶ್ಚಿಂತೆಯಿಂದ ಕಾಲಕಳೆಯುತ್ತಿದ್ದರು. ನೆಲಮಾಳಿಗೆಯ ಬೀಗದ ಕೈಯನ್ನು ಮಾತ್ರ ಜೋಪಾನವಾಗಿಟ್ಟುಕೊಳ್ಳುತ್ತಿದ್ದರು. ಹಗುರ ವಾದ ಮನಸ್ಸಿನಿಂದ ವಾರ್ತಾ ಪತ್ರಿಕೆಗಳನ್ನು ಓದಿ ಬಾಯಿಗೆ ಬಂದ ಹಾಗೆ ಮಾತನಾಡುತ್ತಿದ್ದರು ಹಿಂದೂ–ಮುಸ್ಲಿಮ ಗಲಭೆಯ ನಿಜತ್ವದ ಸೋಂಕು ಅವರಿಗೆ ತಾಕಿರಲಿಲ್ಲ

ಆದರೆ ಯಾವ ಸಮಾರಂಭವನ್ನು ಏರ್ಪಡಿಸಿದರೂ ಸೊಗಸಾಗಿ ನಡೆಸುತ್ತಿದ್ದರು. ಅಂತೆಯೆ ಗಾಂಧಿಜೀಯವರ ಮರಣಾನಂತರ ವಿಶೇಷ ಉತ್ಸವಗಳನ್ನು ಅತಿ ವಿಜೃಂಭಣೆಯಿಂದ ನಡೆಸಿದರು. ನಗರದ ಮಧ್ಯ ಭಾಗಗಳಲ್ಲಿ ಗಾಂಧೀ ಸ್ಮಾರಕಗಳನ್ನು ಸ್ಥಾಪಿಸಿದರು. ಗಾಂಧೀಜಿಯವ ರನ್ನು ಎಲ್ಲ ಪಾರ್ಟಿಯ ಮುಖಂಡರೂ ಹೊಗಳಿ ಭಾಷಣ ಮಾಡುತ್ತಿದ್ದರು. ಆ ಸಂದರ್ಭದಲ್ಲಿ ಎಲ್ಲೋ ಅಜ್ಞಾತವಾಗಿದ್ದ ಪಾರ್ಟಿಗಳ ಹೆಸರೂ ಕೇಳ ಬಂತು.

ಒಂದು ಕಡೆ ನಾಲ್ಕಾರು ದಿನಗಳ ಮೇಲೆ ನಿಲ್ಲದೆ ಮುಂದೆ ಮುಂದೆ ಪ್ರಯಾಣ ಮಾಡತೊಡಗಿದೆ.

ಹಾಗೆಯೆ ದಿನಗಳೂ ಉರುಳಿದವು. ಭಾರತೀಯ ಸ್ವಾತಂತ್ರ್ಯದ ಆಗಸ್ಟ್ ತಿಂಗಳು ಮತ್ತೆ ಬಂದಿತು ಆದರೆ ಈ ಬಾರಿ ಎಲ್ಲರಿಗೂ ಸ್ಫೂರ್ತಿ ದಾಯಕರಾಗಿದ್ದ ಮಹಾತ್ಮ ಗಾಂಧೀಜಿಯವರನ್ನು ಜನತೆ ಕಳೆದು ಕೊಂಡಿತ್ತು. ಆದರಿಂದಲೇ ಈ ಬಾರಿ ಗಾಂಧೀಜಿಯರ ಭಾವಚಿತ್ರದಡಿ ಯಲ್ಲಿ ಭಾರತದ ಎಲ್ಲೆಡೆಯಲ್ಲೂ ಸಮಾರಂಭವಾಗುತ್ತಿತ್ತು.

ನಾನಿದ್ದ ಊರಿನಲ್ಲೂ ಸಮಾರಂಭಕ್ಕೆ ಮೂರು ದಿನದಿಂದಲೇ ಏರ್ಪಾಡು ನಡೆಯುತ್ತಿತ್ತು.

ಅಂದು ಊರ ಮಧ್ಯದ ಮೈದಾನದಲ್ಲಿ ಜನಸಂದಣಿ ಅಪಾರವಾಗಿ ಸೇರಿತ್ತು. ಬರುವ ಜನ ಇನ್ನೂ ಬರುತ್ತಲಿದ್ದರು. ಉತ್ಸಾಹದ ಭರದಲ್ಲಿ ತಮ್ಮ ತಮ್ಮಲ್ಲಿಯೇ ಅನೇಕ ವಿಷಯಗಳನ್ನು ಚರ್ಚಿಸುತ್ತಿದ್ದರು. ಮೈದಾನದ ನಾಲ್ಕು ಕಡೆಯಲ್ಲೂ ರಾಷ್ಟ್ರ ಧ್ವಜಗಳನ್ನು ಏರಿಸಲಾಗಿತ್ತು. ಅದರೆಡೆಯಲ್ಲಿ ಧ್ವನಿವರ್ಧಕಗಳು ಉಪನ್ಯಾಸಕನ ಭಾಷಣವನ್ನು ಹೊರಸೂಸಲು ಆತುರವಾಗಿದ್ದವು.

ಕಟ್ಟೆಯ ಮೇಲಿನಿಂದ ಮೈದಾನವನ್ನು ನೋಡಿದರೆ ಅದು ಕೇವಲ ಬಿಳಿಯ ಒಟ್ಟೆಯೋಪಾದಿಯಲ್ಲಿತ್ತು, ಏಕೆಂದರೆ ಅಂದು ಸುಮಾರಾಗಿ ಎಲ್ಲರೂ ಧರಿಸಿದ್ದುದು ಬಿಳಿಯ ಖಾದಿ ಬಟ್ಟೆ.

ಸ್ವಾತಂತ್ರ್ಯದುತ್ಸವ ಎಲ್ಲರ ಮನಸ್ಸನ್ನೂ ಹರ್ಷಗೊಳಿಸಿತ್ತು. ಅಂತೆಯೆ ಜನರೆಲ್ಲರೂ ರಾಷ್ಟ್ರ ಸೇವಕರಂತೆ, ದುಡಿದು ದಣಿದವರಂತೆ ತಮ್ಮ ಬಟ್ಟೆ ಬರೆಗಳಿಂದ ಕಂಗೊಳಿಸುತ್ತಿದ್ದರು.

ಊರ ಪ್ರಮುಖರು ವೇದಿಕೆಯ ಸುತ್ತ ಮಂಡಿಸಿದ್ದರು. ಇನ್ನು ಕೆಲವರು ಪ್ರಮುಖರ ಸಾಲಿನಲ್ಲಿ ಕೂಡಿ ತಾವು ಅಸಮಾನ್ಯರೆಂಬ ಭಾವದಿಂದ ಜನ ಸಮುದಾಯವನ್ನು ನೋಡುತ್ತಿದ್ದರು

ಇನ್ನು ಕೆಲವೇ ನಿಮಿಷಗಳಲ್ಲಿ ಪ್ರಾರಂಭವಾಗುವ ತಮ್ಮ ನಾಯಕನ ಭಾಷಣಕ್ಕಾಗಿ ಇಡೀ ಊರೇ ಬಂದು ಮೈದಾನದಲ್ಲಿ ಒತ್ತೆಡೆ ಪವಡಿಸಿದಂತೆ ಭಾಸವಾಗುತ್ತಿತ್ತು.

ಅನೇಕ ಸಂಘ ಸಂಸ್ಥೆಗಳು ಹಾರ ತುರಾಯಿಗಳನ್ನು ಹಿಡಿದು ಬರುವ ನಾಯಕನನ್ನು ಎದುರು ನೋಡುತ್ತಿದ್ದವು.

ಸ್ವಲ್ಪ ನಿಮಿಷಗಳಲ್ಲೇ ಅವರ ಉತ್ಸಾಹದ ಮೂರುತಿ ವೇದಿಕೆಯ ಮೇಲೆ ಹತ್ತಿದನು. ತಕ್ಷಣ ಜನವೆಲ್ಲ ತಮ್ಮ ತಮ್ಮ ಜಾಗಗಳನ್ನೇ ಮರೆತು ಮುಂದೆ ಮುಂದಕ್ಕೆ ಓಡತೊಡಗಿದರು. ಇನ್ನು ಕೆಲವು ಶಕ್ತಿವಂತರು ಇತರರ ತಲೆಗಳ ಮೇಲೆಯೆ ಈಜಿಕೊಂಡು ವೇದಿಕೆಯ ಹತ್ತಿರ ಬರತೊಡಗಿದರು. ಇದರಿಂದ ಅನೇಕ ಜನ ಸಿಟ್ಟಾಗಿ ತಮ್ಮ ಶಕ್ತಿ ಪ್ರದರ್ಶನಕ್ಕೆ

ಇದೇ ಸರಿಯಾದ ಗರಡಿಯೆಂದು ವಿಚಿತ್ರವಾದ ಪಟ್ಟುಗಳನ್ನು ಅಭ್ಯಾಸ ಮಾಡಿದರು.

ಗಲಾಟೆಯನ್ನು ನಿಲ್ಲಿಸಲು ಯಾರಿಂದಲೂ ಸಾಧ್ಯವಾಗಲಿಲ್ಲ. ಮುಂದಿದ್ದ ಕೆಲವರು ಹಿಂದಕ್ಕೆ ಬರಬೇಕಾಯಿತು. ಹಿಂದಿದ್ದವರು ಮುಂದಕ್ಕೆ ಬಂದರು. ಕಿವಿ ಸಿಡಿದು ಹೋಗುವಂತೆ ಧ್ವನಿವರ್ಧಕದಿಂದ ಕೇಳಿಸುತ್ತಿದ್ದ ಸಿನಿಮಾ ಹಾಡುಗಳು ಅವರನ್ನು ಮತ್ತಷ್ಟು ಶಕ್ತಿಯುತ ರನ್ನಾಗಿ ಮಾಡುತ್ತಿತ್ತು.

ಮುಂದೆ ಬಂದ ಜನ ತಮ್ಮ ಸಾಹಸವನ್ನು ತಾವೇ ಮೆಚ್ಚಿದರು. ಹಿಂದು ಹಿಂದಕ್ಕೆ ನೂಕಲ್ಪಟ್ಟವರು ತಮ್ಮ ಅಸಹಾಯತೆಗೆ ತಾವೇ ಮರುಗಿದರು.

ಕಡೆಗೆ ಎಲ್ಲರಿಗೂ ಕಾಣುವಂತೆ ನಾಯಕನು ಎತ್ತರದ ವೇದಿಕೆಯ ಮೇಲೆ ನಿಂತಾಗಲೇ ಜನ ಸ್ವಲ್ಪ ನಿಶ್ಶಬ್ದರಾದರು. ಆದರೆ ಮರುಕ್ಷಣ ಅವರ ಕೈ ಚಪ್ಪಾಳೆ ಗಗನಕ್ಕೆ ಮುಟ್ಟುವಂತಿತ್ತು. ಕೈ ಉರಿಯುವ ತನಕ ಒಂದೇ ಸಮನೆ ಬಾರಿಸಿಬಿಟ್ಟರು.

ಮೇಲೆ ನಿಂತ ನಾಯಕನೂ ಅವನೊಡನಿದ್ದ ಪ್ರಮುಖರೂ ಜನಸಮುದಾಯಕ್ಕೆ ಪ್ರದಕ್ಷಿಣೆ ಮಾಡುವವರಂತೆ ಇದ್ದ ಜಾಗದಲ್ಲೇ ಸುತ್ತಲೂ ತಿರುಗಿ ನಮಸ್ಕರಿಸುತ್ತಿದ್ದರು.

ಎಲ್ಲ ಸಂಸ್ಥೆಯ ಪ್ರತಿನಿಧಿಗಳೂ ಒಬ್ಬರ ಹಿಂದೆ ಒಬ್ಬರು ನಿಂತರು. ಅದೊಂದು ದೊಡ್ಡ ಮೆರವಣಿಗೆಯಂತೆಯೇ ಇತ್ತು. ಅಗಸನ ಸಂಸ್ಥೆಯಿಂದ ಹಿಡಿದು ಅರಸನ ಸಂಸ್ಥೆಯವರೆಗೂ ಪ್ರಾತಿನಿಧ್ಯವಿತ್ತು. ರಾಜಕೀಯ ಸಂಸ್ಥೆಗಳು, ಕಾರ್ಮಿಕ ಸಂಘಗಳು, ಹೊಟೇಲ್, ಬೀಡಿ ಮತ್ತು ಇನ್ನಿತರ ಸಾರ್ವಜನಿಕ ಸಂಸ್ಥೆಗಳು ತಮ್ಮದೇ ಆದ ವಿಶಿಷ್ಟ ಚಿಹ್ನೆಗಳಿಂದ ಕಂಗೊಳಿಸುತ್ತಿದ್ದವು.

ಅವರೆಲ್ಲರೂ ಒಬ್ಬೊಬ್ಬರಾಗಿ ನಾಯಕನ ಕೊರಳಿಗೆ ಹಾರತುರಾಯಿಗಳನ್ನರ್ಪಿಸಿದರು. ಬರುವಾಗ ಹೋಗುವಾಗ ವೈಕಿನ ಹತ್ತಿರ ಬಂದು

ತಮ್ಮ ತಮ್ಮ ಸಂಸ್ಥೆಗಳ ಹೆಸರನ್ನು ಪ್ರಸಿದ್ಧಪಡಿಸಲು ಆತುರರಾಗಿದ್ದರು. ಮತ್ತೆ ಕೆಲವರು ತಾವು ಆಯಾಯ ಸಂಸ್ಥೆಗಳ ಕಾರ್ಯದರ್ಶಿಗಳೆಂದು ತಮ್ಮ ಹೆಸರನ್ನೇ ಗಟ್ಟಿಯಾಗಿ ಕೂಗಿಕೊಳ್ಳುತ್ತಿದ್ದರು; ಇನ್ನು ಕೆಲವರು ತಮ್ಮ ಸಂಸ್ಥೆಯ ವಿಷಯವಾಗಿಯೇ ಸಣ್ಣ ಭಾಷಣ ಪ್ರಾರಂಭಿಸಿಬಿಡುತ್ತಿದ್ದರು. ಕಡೆಗೆ ಸಭಿಕರಿಂದ ಚಪ್ಪಾಳೆತಟ್ಟಿಸಿಕೊಂಡು ನಿಲ್ಲಿಸಬೇಕಾಗಿತ್ತು. ಅಂತೂ ಈ ಸನ್ನಿವೇಶದಲ್ಲಿ ತಮ್ಮ ಒಂದು ಹೆಚ್ಚಳಿಕೆಯನ್ನು ಆದಷ್ಟು ಸಾಧಿಸಲೇ ಬೇಕೆಂದು ಎಲ್ಲರೂ ಪಣತೊಟ್ಟಿದ್ದರು.

ನಾಯಕನು ಒಂಟಿಯೋ ಸಹಸ್ರಬಾಹುವೋ ಆಗಿದ್ದರೆ ಜನರೆಲ್ಲರ ಹಾರ ತುರಾಯಿಗಳನ್ನು ಧರಿಸಬಹುದಾಗಿತ್ತು. ಆದರೆ ಎಲ್ಲರಂತೆಯೆ ಅವನೂ ಒಬ್ಬ ಸಾಮಾನ್ಯ ಪುರುಷನಾದ್ದರಿಂದ ಹಾರ ತುರಾಯಿಗಳನ್ನು ಕೆಳಗಿಟ್ಟು ಮಾತನಾಡಲಾರಂಭಿಸಿದನು.

"ಸಹೋದರ ಸಹೋದರಿಯರೇ, ಇಂದು ಸ್ವಾತಂತ್ರ್ಯದುತ್ಸವ. ಜನ ಕೋಟಿಯೆಲ್ಲ ಈ ಸಮಾರಂಭದಲ್ಲಿ ಸಮಭಾಗಿಗಳಾಗಿದ್ದಾರೆ.

ಈ ಒಂದು ಸಮತೆಯೇ ನಮ್ಮನ್ನು ಮುಂದೆ ಕಾಪಾಡಬೇಕು. ಜೀವನದ ಪ್ರತಿ ಹೆಜ್ಜೆಯಲ್ಲೂ ಇದು ಸಮರಸವಾಗಬೇಕು.

ಇಂದಿನ ಜನಸಮೂಹದಲ್ಲಿ ಹೆಚ್ಚು ಜನ ಬಡವರಿರುವರೆಂದು ನಾನು ಬಲ್ಲೆ. ದೊಡ್ಡ ಮನುಷ್ಯರ ದರ್ಪವನ್ನೂ ನಾನು ಕಣ್ಣಾರೆ ಕಂಡಿದ್ದೇನೆ

ಈ ಶ್ರೀಮಂತರೆದುರಿಗೆ ಬಡವರು ಹೇಡಿಗಳಾಗಬಾರದು. ಅವರ ಕಿಚ್ಚನ್ನು ಈಗಲೇ ಅಡಗಿಸಬೇಕು. ಇದಕ್ಕೆ ಬಡವರೆಲ್ಲರೂ ಸೇರಿ ಸಂಘ ಶಕ್ತಿ ಬೆಳೆಸಬೇಕು. ಹಾಗೆ ಮಾಡಿದ ಮೇಲೆ ಕ್ರಾಂತಿಮಾಡುವುದು ಚಿತ ....."

ಇದೇ ರೀತಿಯಾಗಿ ಉಪನ್ಯಾಸಕನ ವಾಕ್ ಪ್ರವಾಹ ರಭಸದಿಂದ ಹರಿಯುತ್ತಿತ್ತು.

ಮಧ್ಯೆ ಮಧ್ಯೆ ಉಪನ್ಯಾಸದ ಏರಿಳಿತಗಳನ್ನು ನಟನೆಯ ಮೂಲಕ ತೋರಿಸಿದ್ದನು. ಅದಕ್ಕೆ ಸರಿಯಾಗಿ ಜನ ಕರತಾಡನ ಮಾಡುತ್ತಿದ್ದರು.

ಶ್ರೀಮಂತರ ಖಂಡನೆ ನಾಯಕನ ಬಾಯಿಂದ ವಿಪರೀತವಾಗಿ ಸಾಗಿತ್ತು.

ಜನಕೋಟಿಯಲ್ಲಿ ಕೂಲಿಯವರೇ ಹೆಚ್ಚಿಗೆ ಸೇರಿದ್ದರಿಂದ ಅವರೆಲ್ಲರೂ ಉದ್ರಿಕ್ತರಾಗಿ ಶ್ರೀಮಂತರ ಖಂಡನೆಗೆ ಬೆಂಬಲವಿತ್ತರು. ಆ ಸರಳ ಹೃದಯಿಗಳಿಗೆ ನಾಯಕನ ಮಾತುಗಳು ವೇದವಾಕ್ಯವಾದವು. ಭಾಷಣ ಮುಗಿಯುವುದರೊಳಗಾಗಿಯೇ ಅದರ ಪರಿಣಾಮ ಜನರಲ್ಲಿ ಬೇರೂರಿತು.

ಶ್ರೀಮಂತರ ಸೊಕ್ಕನ್ನು ಈಗಲೇ ಅಡಗಿಸಬೇಕೆಂದು ಜನ ನಿರ್ಧರಿಸಿತು. ದೊಡ್ಡ ತಂಡವೇರ್ಪಟ್ಟು ನಾಯಕನ ಹೆಸರನ್ನು ಜಯಕಾರ ಮಾಡುತ್ತ ಮುನ್ನುಗ್ಗಿತು.

ಎದುರಿನ ದೊಡ್ಡ ಅಂಗಡಿಗೆ ಮುತ್ತಿಗೆ ಹಾಕಿತು.

ಆ ಅಂಗಡಿಯ ಮಾಲೀಕರು ಶೆಟ್ಟರ ಮನೆತನಕ್ಕೆ ಕಳಶಪ್ರಾಯರಾದವರು. ಅವರನ್ನು ಊರವರು, "ಶತಮಾನದ ಶೆಟ್ಟರು" ಎಂದೇ ಸಂಬೋಧಿಸುತ್ತಿದ್ದರು. ನೂರು ವರುಷದಿಂದಲೂ ಶೆಟ್ಟರ ತಂದೆ ತಾತಂದಿರು ಅದೇ ಜಾಗದಲ್ಲಿ ನೆಲಸಿ ವ್ಯಾಪಾರ ಮಾಡಿದವರು. ಅವರು ಗಳಿಸಿಟ್ಟಿದ್ದ ನೂರು ವರುಷದ ನೆಲಮಾಳಿಗೆಯ ಆಸ್ತಿಯೆಲ್ಲ ಶೆಟ್ಟರಿಗೆ ಪಿತ್ರಾರ್ಜಿತವಾಗಿ ಬಂದಿತ್ತು. ಶೆಟ್ಟರು ನಿರಾತಂಕದ ಜೀವನ ನಡೆಸುತ್ತಿದ್ದರು. ಆದ್ದರಿಂದಲೇ ಶೆಟ್ಟರಿಗೆ "ಶತಮಾನದ ಶೆಟ್ಟರು" ಎಂಬ ಅಭಿಧಾನ.

ಶೆಟ್ಟರೆದುರಿಗೆ ಅವರ ಶ್ರೀಮಂತಿಕೆಯ ವಿಷಯವನ್ನು ಪಸ್ತಾಪಿಸಲು ಯಾರಿಗೂ ಧೈರ್ಯವಿರಲಿಲ್ಲ. ಹಿಂದೆ ಆಡಿಕೊಳ್ಳುವವರೂ ಶೆಟ್ಟರನ್ನು ಕಂಡೊಡನೆ ನಯಃ ವಿನಯದಿಂದ ವರ್ತಿಸುತ್ತಿದ್ದರು. ಪ್ರತಿದಿನ ಸಂಜೆ ಶೆಟ್ಟರೊಡನೆ ಮಾತಾಡಲು ದೊಡ್ಡ ಗುಂಪೇ ಸೇರುತ್ತಿತ್ತು. ಅವರೆಲ್ಲರೂ ಶೆಟ್ಟರಂದ ಮಾತಿಗೆ ಹೂಗುಟ್ಟಿ ಹೊಗಳುತ್ತಿದ್ದರು. ಹಾಗೆ ಮಾಡುತ್ತಿದ್ದು

ದರಿಂದ ಎಲ್ಲರಿಗೂ ಶೆಟ್ಟರು ಕೊಡುತ್ತಿದ್ದ ಸೊಗಸಾದ ನಶ್ಯದಲ್ಲಿ ಸ್ವಲ್ಪಭಾಗ ಉಚಿತವಾಗಿಯೆ ಸಿಗುತ್ತಿತ್ತು. ಆ ಉದ್ದೇಶದಿಂದಲೇ ಜನ ಶೆಟ್ಟರನ್ನು ಗೌರವಿಸುತ್ತಿದ್ದರೋ ಏನೋ. ಅದನ್ನೇ ನಂಬಿ ತಮ್ಮನ್ನು ತಾವೇ ದೊಡ್ಡವರೆಂದು ತಿಳಿದುಕೊಳ್ಳುವ ಸ್ವಭಾವ ಶೆಟ್ಟರದು.

ಆದರೆ ಅಂದು ಜನತೆ ಉದ್ರಿಕ್ತರಾಗಿ ವರ್ತಿಸುವಂತೆ ಸೂಕ್ತ ವಾತಾವರಣವಿತ್ತು. ನಾಯಕನು ಮಾಡಿದ ಉಪನ್ಯಾಸದ ಸಿಂಹಗರ್ಜನೆಯಿಂದ ಸ್ಫೂರ್ತಿಯುತರಾಗಿ ಜನರೆಲ್ಲರೂ ಶೆಟ್ಟರ ಅಂಗಡಿಗೆ ಮುತ್ತಿಗೆ ಹಾಕಿದರು.

ಸಾಮಾನುಗಳ ಲೂಟಿಗಾರಂಭವಾಯಿತು. ಎಣ್ಣೆಯ ಟಿನ್‌ಗಳೆಲ್ಲ ಉರುಳಿದವು. ಸುರಿದ ಎಣ್ಣೆಯಿಂದ ಜನ ಓಕಳಿಯಾಡಿದರು. ವಿಷಯ ತಿಳಿದ ತಕ್ಷಣ ಶೆಟ್ಟರು ದೇವರ ಮುಂದೆ ದೀಪ ಹಚ್ಚಿ ಕೈ ನಡುಗುತ್ತಲೇ ಎರಡು ಬೆಳ್ಳಿಯ ನಾಣ್ಯಗಳನ್ನು ಮುಡಿಪಾಗಿ ತೆಗೆದಿಟ್ಟರು.

ಹೊರಗೆ ಬಂದು ಜನಸ್ತೋಮವನ್ನು ನೋಡಿ ದಿಗ್ಭ್ರಾಂತರಾಗಿ ಹೋದರು. ಶೆಟ್ಟರ ಕೈಯಲ್ಲಿದ್ದ ಉಂಡೆ ನಶ್ಯವು ಗಲಭೆಗೆ ಹೆದರಿ ಕೆಳಗುರುಳಿತು.

ಕಳ್ಳತನವಾಗಿದ್ದರೆ ಶೆಟ್ಟರು ಹೆದರುತ್ತಿರಲಿಲ್ಲ. ಆಗ ಸಾಮಾನುಗಳು ಹೋದರೂ ಯಾವ ಗಲಾಟೆಗೂ ಅವಕಾಶವಿರುತ್ತಿರಲಿಲ್ಲ. ಮನೆಗೆ ಬಂದ ಕಳ್ಳ ಮನೆಯ ಆಕಾರವನ್ನು ಅದಷ್ಟು ಕೆಡಿಸದೆ ಕಳ್ಳತನ ಮಾಡುತ್ತಾನೆಂದು ಶೆಟ್ಟರಿಗೆ ತಿಳಿದಿತ್ತು. ಆದರೆ ಉದ್ರಿಕ್ತ ಜನ ಏನು ಬೇಕಾದರೂ ಮಾಡಿಯಾರು!

ಅಂತೆಯೆ ಶೆಟ್ಟರು ಹೆದರಿದರು. ಅವರಂದುಕೊಂಡಿದ್ದಂತೆ ಜನ ಅಂಗಡಿಯ ಆಕಾರವನ್ನೇ ಕೆಡಿಸಿದರು. ಸಾಮಾನುಗಳೆಲ್ಲ ಒಬ್ಬರ ಕೈಯಿಂದ ಇನ್ನೊಬ್ಬರಿಗೆ ರವಾನೆಯಾಗಿ ಅಲ್ಲಲ್ಲೆ ಓಡಾಡುತ್ತಿದ್ದವು. ಎಲ್ಲವೂ ಬೆರಸಿಹೋಗಿ ಯಾವುದೋ ಒಂದು ಮುದ್ದೆಯಂತಾಗಿತ್ತು. ಆ ಮುದ್ದೆಯೊಳಗೆ ಜನಗಳೂ ಸೇರಿಹೋಗಿ ಕಳವಳವುಂಟುಮಾಡುತ್ತಿದ್ದರು.

ಹೀಗೆ ಶೆಟ್ಟರ ಅಂಗಡಿ ಲೂಟಿ ಜೋರಾಗಿ ನಡೆಯಿತು. ಶೆಟ್ಟರ ರಾಜಸಂಕೇತದಂತಿದ್ದ ಜರಿಯ ಪೇಟವು ಕೆಳಗುರುಳಿತು ಅವರ ಪೀಠ ವಾದ ತಿರುಗು ಕುರ್ಚಿ ಬೀದಿಯ ಮಧ್ಯಕ್ಕೆ ಹೊರಟುಹೋಗಿತ್ತು. ಅದರ ಮೇಲೆ ಒಬ್ಬ ಜೆಟ್ಟಿ ಕುಳಿತು ಸುತ್ತಲೂ ನಡೆಯುತ್ತಿದ್ದ ಗಲಭೆಯನ್ನು ಆರಾಮವಾಗಿ ವೀಕ್ಷಿಸುತ್ತಿದ್ದನು. ಕುರ್ಚಿ ಗಟ್ಟಿಯೋ ಅಥವಾ ತಾನು ಗಟ್ಟಿಯೋ ಎಂಬುದನ್ನು ಪರೀಕ್ಷಿಸಲು ಅವನಿಗೆ ಒಳ್ಳೆಯ ಅವಕಾಶ ದೊರಕಿತ್ತು.

ಗುಡುಗು ಮಿಂಚು ಗಾಳಿಗಳ ಆರ್ಭಟ ಸ್ವಲ್ಪ ಕಡಿಮೆಯಾದ ಮೇಲೆ ಶಾಂತ ರೀತಿಯಿಂದ ಮಳೆ ಬರುವಂತೆ ಜನರ ಕೂಗಾಟ ಸ್ವಲ್ಪ ಸ್ವಲ್ಪವಾಗಿ ಕಡಿಮೆಯಾಗುತ್ತ ಬಂತು. ಅಂತೂ ಈ ಮಹಾಕಾರ್ಯ ಜನರಿಗೆ ಹರ್ಷ ವನ್ನೀಯಿತು. ವಿಜಯದ ಸಮಾಚಾರವನ್ನು ತಮ್ಮನ್ನು ಹುರಿದುಂಬಿ ಸಿದ ನಾಯಕನಲ್ಲಿ ತಿಳಿಸಲು ಜನರೆಲ್ಲರೂ ವೈದಾನದತ್ತ ಬಂದರು.

ಆದರೆ ಎಲ್ಲರಿಗೂ ಆಶ್ಚರ್ಯವಾಗುವಂತೆ ಅಲ್ಲಿ ನಾಯಕನ ಸುಳಿವೇ ಇರಲಿಲ್ಲ. ಉಪನ್ಯಾಸದ ಮಳೆಯನ್ನು ಸುರಿಸಿ ಜನರನ್ನು ಉದ್ರೇಕಗೊ ಳಿಸಿ ಕಾರ್ಯೋನ್ಮುಖರನ್ನಾಗಿ ಮಾಡಿದ ನಾಯಕ ಯಾರಿಗೂ ಕಾಣ ದಂತೆ ಯಾವುದೋ ಅವಿತುಕೊಳ್ಳುವ ಜಾಗವನ್ನು ಹುಡುಕುತ್ತಿದ್ದನು!

ಕೇವಲ ಉಪನ್ಯಾಸದ ಮುಖವಾಡದಿಂದ ಜನರನ್ನು ಒಲಿಸಿಕೊಂಡು ಕೀರ್ತಿಯನ್ನು ಸಂಪಾದಿಸಿ ಒಂದು ಮಾನ್ಯಸ್ಥಾನವನ್ನು ಗಳಿಸಿಕೊಳ್ಳಲು ನಾಯಕನು ಎಣಿಕೆ ಹಾಕಿದ್ದನು. ಅಂತೆಯೆ ಸ್ವಾತಂತ್ರ್ಯದುತ್ಸವದಲ್ಲಿ ಉದ್ರಿಕ್ತವಾಗುವ ರೀತಿಯಲ್ಲಿ ಮಾತನಾಡಿದ್ದನು. ತನ್ನ ಶಬ್ದಭಂಡಾರ ವನ್ನೆಲ್ಲ ಉಪಯೋಗಿಸಿ ಶ್ರೀಮಂತರ ಖಂಡನೆಯನ್ನು ಮಾಡಿದ್ದನು.

ಆದರೆ ತನ್ನ ಭಾಷಣವು ಕಾರ್ಯರೂಪಕ್ಕೆ ಬಂದಿದ್ದನ್ನು ನೋಡಿ ಬಹಳ ಹೆದರಿದನು. ಆಶೆ ಭಂಗವಾಯಿತು. ಆದ್ದರಿಂದಲೇ ಜನ ಅಂಗಡಿಯ ಕಡೆ ಧಾವಿಸಿದಾಗ ತಾನು ವೇದಿಕೆಯನ್ನು ಬಿಟ್ಟು ಬೇಗನೆ ಮನೆಗೆ ಕಾರಿನಲ್ಲಿ ಹೊರಟುಹೋದನು. ಬೇರೆಯ ಕಡೆ ಮತ್ತೊಂದು

ಸಮಾರಂಭದಲ್ಲಿ ಭಾಗವಹಿಸಬೇಕಾಗಿದೆಯೆಂದೂ, ಅದಕ್ಕಾಗಿ ಕಾಲಾವ ಕಾಶವಿಲ್ಲವೆಂದೂ ಸುಳ್ಳು ನೆಪ ಹೇಳಿ ಸಹೋದ್ಯೋಗಿಗಳಿಗೆ ಅಲ್ಲೇ ಇರು ವಂತೆ ಆಜ್ಞಾಪಿಸಿ ಹೊರಟುಬಿಟ್ಟನು.

ಇತ್ತ ಅವನ ಸಹೋದ್ಯೋಗಿಗಳು ಅಲ್ಲೇ ಉಳಿಯಬೇಕಾಯಿತು. ಅವರೆಲ್ಲರೂ ಶತಮಾನದ ಶೆಟ್ಟರಿಗೆ ಬೇಕಾದವರಾಗಿದ್ದವರು. ಈಗ ಶೆಟ್ಟ ರೊಡನೆ ಮನಸ್ತಾಪ ಕಟ್ಟಿಕೊಳ್ಳಬೇಕಲ್ಲಾ ಎಂದು ಹೆದರಿ ಜನರಿಗೆ ಕಾಣ ದಂತೆ ಅವಿತುಕೊಳ್ಳುವ ಜಾಗವನ್ನು ಹುಡುಕಿದರು!

ಮೈದಾನದ ಉತ್ತರದಲ್ಲಿದ್ದ ಮಾವಿನ ತೋಪಿನಲ್ಲಿ ಬಚ್ಚಿಟ್ಟು ಕೊಂಡರು!

ಇತ್ತ ಜನರು ತಮ್ಮ ವಿಜಯದ ವಾರ್ತೆಯನ್ನು ಬಿನ್ನವಿಸಿಕೊಳ್ಳಲು ನಾಯಕನನ್ನು ಹುಡುಕತೊಡಗಿದರು. ಕಡೆಗೆ ಮಾವಿನ ತೋಪಿನ ಬಳಿ ಬಂದರು. ನಾಯಕನ ಕಡೆಯವರಿಗೆ ಸಂದಿಗ್ಧ ಪರಿಸ್ಥಿತಿ ಬಂದೊದಗಿತು. ಹೇಗೆ ಪಾರಾಗಬಹುದೆಂದು ತಮ್ಮಲ್ಲಿ ತಾವೇ ಪಿಸುಮಾತಿನಲ್ಲಿ ಯೋಚಿಸಿ ದರು. ಕಡೆಗೆ ತಾವಾಗಿ ಶೆಟ್ಟರ ವಿರೋಧಕ್ಕೆ ಪಾತ್ರರಾಗುವುದಕ್ಕಿಂತ ಜನ ನಾಯಕನ ಮನೆ ಬಳಿ ಹೋಗುವಂತೆ ಪ್ರೇರೇಪಿಸುವುದೇ ಒಳ್ಳೆಯದೆಂದು ತೀರ್ಮಾನಿಸಿದರು. ತಕ್ಷಣ ಸಂತೋಷಭರಿತರಾದಂತೆ ನಟಿಸುತ್ತಾ ನಾಯಕನನ್ನು ಭೇಟಿ ಮಾಡೋಣವೆಂದು ಜನರನ್ನು ಕರೆದುಕೊಂಡು ಹೊರಟರು. ನಾಯಕನು ಹೇಳಿದಂತೆ ಅವನು ಮನೆಯಲ್ಲಿರುತ್ತಾನೋ ಇಲ್ಲವೋ ಎಂಬ ಸಂಶಯ ಅವನ ಸಹೋದ್ಯೋಗಿಗಳಲ್ಲಿತ್ತು. ಆದರೂ ಬೇರೆಯ ಉಪಾಯವಿಲ್ಲದ್ದರಿಂದ ಅವನ ಮನೆಗೇ ಹೋಗಲನುವಾದರು.

ನಾಯಕ ಮನೆಯಲ್ಲೇ ಇದ್ದನು! ಮತ್ತಾವ ಸಮಾರಂಭಕ್ಕೂ ಹೊರಟಿರಲಿಲ್ಲ ಜನ ತಾವು ಮಾಡಿದ ಶೆಟ್ಟರಂಗಡಿಯ ಮುತ್ತಿಗೆಯನ್ನು ಅವನಿಗೆ ವರ್ಣಿಸಿದರು.

ನಾಯಕನ ಮನಸ್ಸು ಹೇಗಾಯಿತೋ ಗೊತ್ತಾಗಲಿಲ್ಲ. ಆದರೂ ಮೇಲೆ ನೋಡಿದಲ್ಲಿ ನಾಯಕನು ಸಂತೋಷಭರಿತನಾದಂತೆ ನಟಿಸುತ್ತಾ

ಶೆಟ್ಟರ ಅಂಗಡಿಯ ಕಡೆಗೇ ಬಂದನು. ಜನ ಜಯಕಾರ ಮಾಡುತ್ತ ಅವನ ಹಿಂದೆ ಮೆರವಣಿಗೆಯಲ್ಲಿ ಹೊರಟರು.

ಶೆಟ್ಟರ ಅಂಗಡಿ ಸಮೀಪಿಸಿತು. ನಾಯಕನು ಜನರೆಲ್ಲರನ್ನೂ ಹೊರಗೆ ಇರುವಂತೆ ಹೇಳಿ ತಾನು ಮಾತ್ರ ಶೆಟ್ಟರೊಡನೆ ವಾಗ್ವಾದಮಾಡು ವವನಂತೆ ಅಂಗಡಿ ಹಿಂದಿದ್ದ ಅವರ ಬಂಗಲೆಯನ್ನು ಪ್ರವೇಶಿಸಿದನು.

ಸ್ವಲ್ಪ ಹೊತ್ತಿನ ನಂತರ ನಾಯಕನೂ ಶೆಟ್ಟರೂ ಬಂಗಲೆಯಿಂದ ಹೊರಕ್ಕೆ ಬಂದರು. ಆದರೆ ಅವರಿಬ್ಬರೂ ಸ್ನೇಹಿತರಂತೆ ಹಸನ್ಮುಖಿಗಳಾಗಿ ಮಾತನಾಡುತ್ತ ಬಂದರು!

ಜನಗಳಿಗೆ ಇದೊಂದೂ ಅರ್ಥವಾಗಲಿಲ್ಲ. ಕೆಲವರು, "ಶೆಟ್ಟಿ ಕಡಿಮೆ ಆಸಾಮಿಯಲ್ಲಪ್ಪ; ಇವನಿಗೆಲ್ಲೋ ಲಂಚ ಕೊಟ್ಟು ಸುಮ್ಮನಾಗಿ ಸಿದ್ದಾನೆ" ಎಂದರು. ಮತ್ತೆ ಕೆಲವರು ಇದಕ್ಕೆ ಒಪ್ಪಲಿಲ್ಲ, ತಮ್ಮ ನಾಯಕ ನಲ್ಲಿ ಯಾವ ಸಂಶಯವನ್ನೂ ಅವರು ಇಟ್ಟುಕೊಂಡಿರಲಿಲ್ಲ.

ದೂರದಿಂದಲೇ ನಾಯಕನು ಜನರಿಗೆ ಗಾಬರಿ ಪಡಬೇಕಾದ ವಿಷಯ ವೇನಿಲ್ಲವೆಂದು ಹೇಳಿಕಳಿಸಿದನು. ಅಂತೂ ವೇಳೆಯಾದ್ದರಿಂದ ಜನರೆ ಲ್ಲರೂ "ಆಮೇಲೆ ನೋಡಿದರಾಯಿತು" ಎಂದುಕೊಂಡು ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ವಿಷಯ ಬಯಲಾಯಿತು. ಮಾರನೆಯ ದಿನ ಬೆಳಿಗ್ಗೆ ನೋಡಲಾಗಿ –ಹಿಂದಿನ ದಿನ ಅಲಂಕೃತವಾಗಿದ್ದ ಮೈದಾನದ ಎದುರಿಗೆ—ಅದೇ ರೀತಿ ಯಾಗಿ ಅಲಂಕೃತವಾಗಿತ್ತು ಶೆಟ್ಟರ ಅಂಗಡಿಯ ಮುಂಭಾಗ. ಅಂಗಡಿಯ ಮೇಲೆ ತ್ರಿವರ್ಣಧ್ವಜ ಹಾರಾಡುತ್ತಿತ್ತು. ಶೆಟ್ಟರ ವೇಷವೇ ಬದಲಾ ಯಿಸಿ ಹೋಗಿತ್ತು. ತಲೆಯ ಮೇಲೆ ಜರಿಯ ರುಮಾಲು ಇರಲಿಲ್ಲ ಅದಕ್ಕೆ ಬದಲಾಗಿ ಖಾದಿಯನ್ನು ಧರಿಸಿದ್ದರು!

ತಮ್ಮ ತಿಳಿಗೇಡಿತನದಿಂದ ಆದ ಪರಿಣಾಮವನ್ನು ಜನ ಅರಿತರೋ ಇಲ್ಲವೋ ನನಗೆ ತಿಳಿಯದು.

ಉಪನ್ಯಾಸದ ಮುಖವಾಡವನ್ನು ಹಾಕಿಕೊಂಡು ತಮ್ಮನ್ನು ಹುರಿದುಂಬಿಸಿದ ನಾಯಕನ ನಿಜತ್ವ, ದುಡ್ಡಿನಿಂದ ತಮ್ಮ ಮೋಸಗಳನ್ನು ಮುಚ್ಚಿಕೊಂಡು ರಾಷ್ಟ್ರಸೇವಕರಂತೆ ಮುಖವಾಡವನ್ನು ಧರಿಸಿದ ಶೆಟ್ಟರ ನಿಜತ್ವ ಮತ್ತು ಇವೆರಡು ಮುಖವಾಡಗಳ ಮಧ್ಯದಲ್ಲಿ—ಇವನ್ನು ನಿಜಾಕೃತಿಗಳೆಂದು ನಂಬಿ-ಕುಣಿದಾಡಿದ ತಮ್ಮದೇ ಆದ ಉದ್ರಿಕ್ತತೆಯ ಮುಖವಾಡದ ನಿಜತ್ವಗಳೆಲ್ಲವನ್ನೂ ಜನ ಅರಿಯಲು ಅಸಮರ್ಥರಾಗಿದ್ದರೆಂದೇ ನಾನು ಭಾವಿಸಿದೆ.

ಹಾಗೆಯೆ ವಿಚಿತ್ರ ಸನ್ನಿವೇಶಗಳಲ್ಲಿ ದೂರದಿಂದಲೇ ಭಾಗವಹಿಸುತ್ತಾ ಮುಂದೆ ಮುಂದೆ ಹೊರಟೆ.

ಪ್ರಯಾಣ ಮಾಡುತ್ತ ಒಂದು ಸಣ್ಣ ಹಳ್ಳಿಯ ಬಳಿ ಬಂದೆ ಹಳ್ಳಿ ಅಚ್ಚುಕಟ್ಟಾಗಿತ್ತು. ಹಳ್ಳಿಯೊಳಗೆ ಸುಮ್ಮನೆ ಏಕೆ ಹೋಗಲಿ ಎಂದು ಯೋಚಿಸುತ್ತಾ ಮರದ ನೆರಳಲ್ಲಿ ಕುಳಿತಿದ್ದೆ. ಅಷ್ಟುಹೊತ್ತಿಗೆ ಸರಿಯಾಗಿ ಒಬ್ಬ ಹಳ್ಳಿಯ ಯುವಕ ತಲೆ ಕೆದರಿಕೊಂಡು ನನ್ನ ಬಳಿ ಹಾದುಹೋದ. ಮತ್ತೆ ಅದೇ ದಾರಿಯಲ್ಲಿ ಹಿಂತಿರುಗಿದ. ಹಾಗೆಯೆ ಒಂದೇ ಸಮನೆ ಹಿಂದು ಮುಂದು ಓಡಾಡುತ್ತಿದ್ದ. ಮಧ್ಯೆ ಮಧ್ಯೆ ತನ್ನಲ್ಲಿ ತಾನೆ ಏನೋ ಮಾತನಾಡಿಕೊಳ್ಳುತ್ತಿದ್ದ. ನನಗೆ ಸಂಶಯ ಬಂದು ಆತನ ಹತ್ತಿರ ಹೋಗಿ, "ನಿನ್ನ ಹೆಸರೇನಪ್ಪ? ನಿನ್ನ ಹಳ್ಳಿ ಯಾವುದು?" ಎಂದು ಕೇಳಿದೆ.

"ಅಯ್ಯೋ, ಅದೆಲ್ಲ ಏಕೆ ಕೇಳುತ್ತೀರಿ ಸ್ವಾಮಿ? ನಾನೊಬ್ಬ ಹೆಸರಿಗೆ ಬೈರಪ್ಪ. ಹಾಳಾದ ಹಳ್ಳಿಯಲ್ಲಿ ಬೈರಪ್ಪನೆಂದರೆ ಕೇಳುವವರಾರು? ತಾವೇಕೆ ಇಲ್ಲಿ ಕುಳಿತಿದ್ದೀರಿ?" ಎಂದು ಆ ಹಳ್ಳಿಯ ಯುವಕ ಬೇಜಾರಿನಿಂದ ಮಾತನಾಡಿದ. ಯುವಕನಾಗಿದ್ದರೂ ವೈರಾಗ್ಯದ ಛಾಯೆ ಮುಖದಲ್ಲಿ ಬಹಳವಾಗಿ ಬೇರೂರಿತ್ತು.

ಮತ್ತೆ ಬೈರಪ್ಪ ತಾನಾಗಿಯೆ ಮಾತನಾಡಿದ. "ಹಿಂದೆ ನಮ್ಮ ಹಳ್ಳಿಗೆ ಬಂದವರೆಲ್ಲ ಉಂಡು ತೇಗಿ ಹೋಗುತ್ತಿದ್ದರು ಸ್ವಾಮಿ. ಆದರೆ ಈಗ

ಹಾಳಾಗಿಹೋಯಿತು. ಆ ಮಾತು ಈಗೇಕೆ ಸ್ವಾಮಿ? ಪಾಪ; ತಾವು ಎಲ್ಲವನ್ನೂ ಬಿಟ್ಟು ಈ ನಿರ್ಭಾಗ್ಯ ಹಳ್ಳಿಗೇಕೆ ಬಂದಿರಿ?'' ಎಂದು ಬೈರಪ್ಪ ಹಳ್ಳಿಯ ಕಡೆ ಕೈ ತೋರುತ್ತಾ ಮಾತನಾಡಿದನು.

"ನಾನು ಈ ಹಳ್ಳಿಗೆ ಬಂದುದಕ್ಕೆ ವ್ಯಥೆಪಡುವುದಿಲ್ಲ, ಬೈರಪ್ಪ. ಆದರೆ ಇಂಥ ಅಚ್ಚುಕಟ್ಟಾದ ಹಳ್ಳಿಯನ್ನು ಸುಮ್ಮನೆ ಏಕೆ ಬಯ್ಯುತ್ತಿರುವೆ? ಕಾರಣವೇನಾದರೂ ಇದೆಯೇ ಅಥವಾ ಸುಮ್ಮನೆ ಹಾಗೆ ಮಾತನಾಡುತ್ತಿರುವೆಯೋ?" ಎಂದು ಬೈರಪ್ಪನನ್ನು ಕೇಳಿದೆ.

ಅದಕ್ಕೆ ಬೈರಪ್ಪ ಹುಚ್ಚನಂತೆ ನಕ್ಕ. ನನ್ನನ್ನೇ ದಿಟ್ಟಿಸಿ ನೋಡಿ, "ಅದೇ ನೋಡಿ; ಪಟ್ಟಣದವರಿಗೆ ಹಳ್ಳಿ ಹೇಗಿದೆಯೆಂದೂ ಹೇಳಲು ಬರುವುದಿಲ್ಲ. ಆದರೆ ನೀವು ಪಟ್ಟಣದವರಾದರೂ ಒಳ್ಳೆಯವರಂತೆ ಕಾಣುತ್ತಿದ್ದೀರಿ." ಎಂದು ಬೈರಪ್ಪ ಗಲ್ಲದ ಮೇಲೆ ಕೈಯಿಟ್ಟು ನಿಂತೇ ಇದ್ದ.

"ಅದಕ್ಕಾಗಿಯೆ ಬೈರಪ್ಪ, ನಾನು ನಿನ್ನ ಹಳ್ಳಿಯ ಕಥೆಯನ್ನು ಕೇಳಲು ಕುತೂಹಲವಾಗಿದ್ದೇನೆ. ಇಲ್ಲೇ ಕುಳಿತುಕೊಳ್ಳುವ ಬಾ; ನೆರಳಿದೆ...." ಎಂದು ನಿಂತೇ ಇದ್ದ ಬೈರಪ್ಪನಿಗೆ ಪಕ್ಕದಲ್ಲಿ ಜಾಗಬಿಟ್ಟೆ.

ಆದರೂ ಬೈರಪ್ಪ ಪಕ್ಕದಲ್ಲಿ ಕುಳಿತುಕೊಳ್ಳದೆ ಸ್ವಲ್ಪ ದೂರದಲ್ಲಿ ಕುಳಿತ. ಹಳ್ಳಿಯವನ ಆ ಸರಳ ಸ್ವಭಾವವನ್ನು ನೋಡಿ ನನಗೆ ತುಂಬ ಮೆಚ್ಚುಗೆಯಾಯಿತು.

"ಪಾಪ; ಬಹಳ ದಣಿದು ಬಂದಿದ್ದೀರೆಂದು ಕಾಣುತ್ತದೆ. ಸ್ವಲ್ಪ ಎಳನೀರು ತೆಗೆದುಕೊಂಡರಾಗುತ್ತಿತ್ತು...." ಎಂದು ಬೈರಪ್ಪ ಹೇಳುತ್ತಲೇ ಮೇಲೆದ್ದು ತೆಂಗಿನ ಗಿಡ ಹತ್ತಿ ಎಳನೀರು ಕೆಡವಿಯೇ ಬಿಟ್ಟ. ತಕ್ಷಣ ಅದನ್ನು ಕೊಚ್ಚಿ ಎಳನೀರಿನಿಂದ ನಡೆದು ಬಂದ ಬೇಸರಿಕೆಯನ್ನೆಲ್ಲಾ ಹೋಗಲಾಡಿಸಿಬಿಟ್ಟ. ಹೊಟ್ಟೆಗೆ ತಂಪಾಯಿತು. ಬಾಯಿಗೆ ಸೊಗಸಾದ ಸವಿಯೇರಿತು.

ಕೆಲವೇ ನಿಮಿಷಗಳಲ್ಲಿ ಪರಿಚಿತನಾದ ಬೈರಪ್ಪ ಬಹಳ ದಿನಗಳ ಮಿತ್ರನಂತಾಗಿಬಿಟ್ಟ. ಅಂಥ ಸಹೃದಯತೆಯನ್ನು ಸಾಮಾನ್ಯ ಹಳ್ಳಿಯವ

ನಾದ ಬೈರಪ್ಪ ಸಂಪಾದಿಸಿದ್ದ. ಹಳ್ಳಿಯೆಂದರೆ ನಗುವ ಪಟ್ಟಣಿಗರಲ್ಲಿ ಕೋಪಗೊಂಡೆ. ಹೊಸದಾಗಿ ಹೋದ ಒಬ್ಬನಿಗೆ ಮನಃ ಪೂರ್ವಕವಾಗಿ ಹಳ್ಳಿಯುವ ಸತ್ಕರಿಸಿದ್ದ. ಆ ಗುಣ ಮುಚ್ಚು ಮರೆ ಮಾಡುವ ಪಟ್ಟಣಿಗರಲ್ಲಿ ಕಾಣಲು ಸಾಧ್ಯವೇ?

ಬೈರಪ್ಪನನ್ನು ಕಥೆ ಕೇಳಿದ್ದು ಮರೆತೇಹೋಗಿತ್ತು. ತಕ್ಷಣ ಜ್ಞಾಪಿಸಿಕೊಂಡು ಪುನಃ ಕೇಳಿದೆ.

ಬೈರಪ್ಪ ತಾನು ಕೂಡ ಎಳನೀರು ಕುಡಿದು, "ನೋಡಿ ಸ್ವಾಮಿ, ಹಳ್ಳಿ ಹಾಳಾಗಿಹೋಗಿದ್ದರೂ ನಾನು ಎಳನೀರು ಕುಡಿಯುತ್ತೇನೆ. ಅದಕ್ಕೊಂದು ಕಾರಣವುಂಟು.

ನಾನು ಹೀಗೆಯೆ ಅಲೆದಾಡುತ್ತ ಎಂದಾದರೂ ಒಂದು ದಿನ ಇದ್ದಕಿದ್ದಂತೆ ಸತ್ತು ಹೋಗಬಹುದು. ಆಮೇಲೆ ನನ್ನ ಹಳ್ಳಿಯ ಕಥೆಯನ್ನು ಹೇಳಲು ಮತ್ತಾರೂ ಇರುವುದಿಲ್ಲ. ಅದಕ್ಕಾಗಿಯೆ ನಮ್ಮ ಹಳ್ಳಿ ಹಾಳಾಗಿ ಹೋಗಿದ್ದರೂ ಹಾಳಾದ ರೀತಿಯನ್ನು ನಿಮಗೆ ನಿಧಾನವಾಗಿ ಹೇಳಿಬಿಡುತ್ತೇನೆ. ಅದಕ್ಕೋಸ್ಕರವೇ ಗಂಟಲು ಸರಿಮಾಡಿಕೊಳ್ಳಲು ಎಳನೀರು ಸುರಿದುಕೊಂಡೆ" ಎಂದನು.

"ಇಬ್ಬರ ಬಾಯಿಗೂ ಎಳನೀರು ಬಿದ್ದಿದೆ, ಬೈರಪ್ಪ. ನನ್ನ ನಾಲಿಗೆ ಸವಿಯಾಗಿದೆ. ನಿನ್ನ ನಾಲಿಗೆ ಹೇಗಿದೆಯೊ ನನಗೆ ಗೊತ್ತಿಲ್ಲ. ಒಂದು ವೇಳೆ ಅದು ನಿನಗೆ ಅದು ಕಹಿಯಾಗಿದ್ದರೂ ನನಗೂ ಅದೇ ಆಗಲಿ. ಸಿಹಿ ತಿಂದವನು ಕಹಿ ತಿನ್ನಲೂ ಸಿದ್ಧನಾಗಿರಬೇಕು" ಎಂದು ಬೈರಪ್ಪನನ್ನು ಬೇಗ ಕಥೆ ಹೇಳಲು ಒತ್ತಾಯಪಡಿಸಿದೆ.

"ಒಳ್ಳೇದು ಹೇಳಿದಿರಿ, ಸ್ವಾಮಿ. ನಿಜವಾಗಿಯೂ ನಿಮ್ಮಂಥವರಿಗೆ ಕಥೆ ಹೇಳಿದರೆ ಸಾರ್ಥಕ...." ಎಂದು ಬೈರಪ್ಪ ಕಥೆ ಹೇಳಲು ಪ್ರಾರಂಭಿಸಿದ.

"ಇದು ಕಥೆಯಲ್ಲ. ನಡೆದು ಹೋದ ಸಂಗತಿ, ಸ್ವಾಮಿ. ಪಟೇಲರಂಥ ಮನುಷ್ಯರು ಇನ್ನೆಲ್ಲಿ ಸಿಕ್ಕಾರು? ಅಂತೆಯೆ ನಾನು ಈಗ ಹೇಳುವುದು ನಾಳೆ ಒಂದು ಕಥೆಯಾದರೆ ಆಶ್ಚರ್ಯವಿಲ್ಲ.

ರಾಮಯ್ಯಗೌಡರು ಕೇವಲ ಚಿಕ್ಕ ವಯಸ್ಸಿನಲ್ಲೇ ನಮ್ಮೂರಿನ ಪಟೇಲತನ ವಹಿಸಿಕೊಂಡರು. ಅರವತ್ತರ ತನಕ ತುಂಬು ಜೀವನ ನಡೆಸಿದರು. ಆದರೆ ಮೂರು ಜನರನ್ನು ಮದುವೆಯಾದರೂ ಮಕ್ಕಳನ್ನು ಪಡೆಯುವ ಭಾಗ್ಯವನ್ನು ಮಾತ್ರ ದೇವರು ಕರುಣಿಸಲಿಲ್ಲ. ತಮ್ಮ ವಂಶ ಪಾರಂಪರ್ಯದ ಆಸ್ತಿ ಮತ್ಯಾರ ಪಾಲಾಗುವುದೋ ಎಂದು ಗೌಡರು ಚಿಂತಿಸುತ್ತಲೇ ಇದ್ದರು. ಆಸ್ತಿಗಿಂತಲೂ ಹೆಚ್ಚಾಗಿ ತಮ್ಮ ಹೆಸರು ಹೇಳುವವರಿಲ್ಲದೆ ವಂಶವೇ ಕೊನೆಯಾಗುತ್ತದಲ್ಲ ಎಂಬುದು ಗೌಡರ ಹೃದಯದ ಮೂಲೆಯಲ್ಲಿ ಕೊರೆಯುತ್ತಲೇ ಇತ್ತು.

ಈ ವಿಷಯವನ್ನು ತಮ್ಮ ಹೆಂಡತಿಯರೊಡನೆಯೂ ಪ್ರಸ್ತಾಪಿಸಿರಲಿಲ್ಲ. ಆದರೆ ಗೌಡರ ಕಿರಿಯ ಹೆಂಡತಿ ಗಂಡನ ಮನಸ್ಸನ್ನು ಚನ್ನಾಗಿ ಅರಿತಿದ್ದಳು.

ಹಳ್ಳಿಯ ಜನವೆಲ್ಲಾ ಗೌಡರ ಮನೆಯಲ್ಲಿ ಮೃಷ್ಟಾನ್ನದ ಸವಿಯನ್ನು ಎಷ್ಟೋ ಬಾರಿ ಪಡೆದು ಮೆಲಕು ಹಾಕುತ್ತಿದ್ದರು. ಯಾರಾದರೂ ಸರಕಾರದ ಅಧಿಕಾರಿಗಳು ಹಳ್ಳಿಗೆ ಬಂದರಂತೂ ಗೌಡರ ಮನೆಯಲ್ಲಿ ಅವರಿಗೆಲ್ಲಾ ಭೋಜನದ ಏರ್ಪಾಟಾಗುತ್ತಿತ್ತು.

ಆದರೂ ಜನಕ್ಕೆ ಗೌಡರ ಆಸ್ತಿಯ ವಿಷಯದಲ್ಲಿ ಸಂದೇಹವಿತ್ತು. ಗೌಡರು ತಮ್ಮ ಮನೆಯ ನೆಲಮಾಳಿಗೆಯಲ್ಲಿ ಅಪಾರ ದ್ರವ್ಯವನ್ನು ಕೂಡಿಟ್ಟಿದ್ದಾರೆಂದು ಜನಕ್ಕೆ ಹೇಗೋ ತಿಳಿದಿತ್ತು. ಅದೂ ಅಲ್ಲದೆ ಗೌಡರು ಅ ನೆಲಮಾಳಿಗೆಯನ್ನು ಯಾರಿಗೂ ತೋರಿಸದೆ ಇದ್ದುದ್ದು ಸಂದೇಹಕ್ಕೆ ಅವಕಾಶವನ್ನು ಕೊಟ್ಟಿತು.

ಜನರ ಸಂಶಯಕ್ಕಿಂತಲೂ ಹೆಚ್ಚಾಗಿ ಗೌಡರ ಕಿರಿಯ ಹೆಂಡತಿ ಮಲ್ಲಮ್ಮನ ಮನಸ್ಸು ಯಾವಾಗಲೂ ನೆಲಮಾಳಿಗೆಯ ಮೇಲೇ ಇರುತ್ತಿತ್ತು. ಅವಳಿಗೂ ಕೂಡ ನೆಲಮಾಳಿಗೆಯ ಒಳಗೆ ಪ್ರವೇಶವಿರಲಿಲ್ಲ. ಒಂದು ವೇಳೆ ಮಲ್ಲಮ್ಮನಿಗೆ ಮಕ್ಕಳಾಗಿದ್ದಿದ್ದರೆ ಗೌಡರು ತಮ್ಮ ಆಸ್ತಿಯ ವಿಷಯವನ್ನು ಮಲ್ಲಮ್ಮನಿಗೆ ಹೇಳುತ್ತಿದ್ದರೊ ಏನೊ!

ಆದರೆ ಮಲ್ಲಮ್ಮ ಒಂಟಿಯಾಗೇ ಉಳಿದಳು. ಇದರಿಂದ ಮಲ್ಲಮ್ಮನಿಗೇನೂ ದುಃಖವಿರಲಿಲ್ಲ. ಅವಳು ಮುದಿ ಗೌಡರನ್ನು ಮದುವೆಯಾದದ್ದು ಸುಖಸಂಸಾರ ಮಾಡುವ ಉದ್ದೇಶದಿಂದಲ್ಲ ; ಆಸ್ತಿಯ ಆಸೆಗಾಗಿ.

ಗೌಡರು ಸತ್ತ ಮೇಲೆ ತಾನು ಮನೆಯ ಯಜಮಾನಿಯಾಗುವೆನೆಂಬ ಹೆಮ್ಮೆ ಮಲ್ಲಮನಿಗಿತ್ತು. ಮಲ್ಲಮ್ಮ ಗೌಡರಿಗೆ ತಿಳಿಯದಂತೆ ಗೌಡರ ಗುಮಾಸ್ತೆ ಶಿವಣ್ಣನ ಮಗ ರಂಗನನ್ನು ಪ್ರೀತಿಸುತ್ತಿದ್ದಳು.

ಐದು ವರ್ಷದ ಹಿಂದೆ ಪಟಿಂಗನೆಂದು ಹೆಸರುವಾಸಿಯಾಗಿದ್ದ ರಂಗ ಇದ್ದಕ್ಕಿದ್ದಂತೆ ಮನೆ ಬಿಟ್ಟು ಹೊರಟ. ಯಾವ ಊರಿಗೆ ಹೊರಟನೋ ತಿಳಿಯದು. ಅಂತೂ ಶೋಕಿಯವನಾದ್ದರಿಂದ ದೊಡ್ಡ ಪಟ್ಟಣಕ್ಕೆ ಹೋಗಿರಬೇಕೆಂದು ಹಳ್ಳಿಯವರು ಊಹಿಸಿದರು. ಶಿವಣ್ಣ ದುಃಖಪಟ್ಟು ಮಗನನ್ನು ಹುಡುಕಲು ಎಷ್ಟೋ ಪ್ರಯತ್ನಮಾಡಿದನು. ಗೌಡರು ಕೂಡ ತಮ್ಮ ಗುಮಾಸ್ತೆ ಶಿವಣ್ಣನ ಸಹಾಯಕ್ಕೆ ಆಳುಗಳನ್ನು ಕಳಿಸಿಕೊಟ್ಟರು. ಕಂಡು ಕೇಳಿದ ಸ್ಥಳವನ್ನೆಲ್ಲಾ ಹುಡುಕಿಯಾಯಿತು ಆದರೆ ರಂಗನ ಪತ್ತೆ ಮಾತ್ರ ಆಗಲಿಲ್ಲ.

ಇತ್ತ ರಂಗ ಯಾರಿಗೂ ಕಾಣದ—ಅಂದರೆ ಹಳ್ಳಿಯವರಿಗೆ ತಿಳಿಯದಂಥ—ಊರನ್ನು ತಲುಪಿ ಶಾಲೆಗೆ ಸೇರಿಕೊಂಡನಂತೆ. ಪರೀಕ್ಷೆಯಲ್ಲಿ ನಾಲ್ಕು ಸಲ ಕುಂಟಿದರೂ ಕಡೆಗೆ ಐದು ರೂಪಾಯಿನ ಪರೀಕ್ಷೆಗೆ ಇಪ್ಪತ್ತು ರೂಪಾಯಿ ಬಡ್ಡಿ ಕೊಟ್ಟು ಪಾಸುಮಾಡಿದ್ದ. ರಂಗಣ್ಣ ಊರಿನಲ್ಲಿ ಓದುತ್ತಿದ್ದಾನೆಂಬ ವಿಷಯ ಶಿವಣ್ಣನಿಗೆ ಯಾರಿಂದಲೋ ತಲುಪಿತು. ಆದರೆ ಆ ವಿಷಯ ತಿಳಿಸಲು ಏರ್ಪಾಟು ಮಾಡಿದ್ದು ರಂಗಣ್ಣನೇ ಹೊರತು ಮತ್ತಾರೂ ಅಲ್ಲ.

ರಂಗಣ್ಣ ತಂದೆಗೆ ಕಾಗದ ಬರೆಯಲು ಶುರುಮಾಡಿದ. ಮಗ ಕಾಗದ ಬರೆಯುವುದನ್ನೂ ಕಲಿತುಬಿಟ್ಟಿದ್ದಾನೆಂದು ಶಿವಣ್ಣ ಹಿಗ್ಗಿಹೋದ. ಗೌಡರಿಗೂ ತಿಳಿಸಿದ ಹಳ್ಳಿ ಬಿಟ್ಟು ಹೋದರೂ ಊರು ಸೇರಿ ವಿದ್ಯೆ ಕಲಿಯುತ್ತಿದ್ದಾನೆಂದು ಗೌಡರು ಸಂತೋಷಪಟ್ಟರು.

ಪ್ರತಿ ಕಾಗದದಲ್ಲೂ ರಂಗಣ್ಣ ತನಗೆ ಊರಿನಲ್ಲಿ ದುಡ್ಡಿನ ಅವಶ್ಯ ಕತೆ ತುಂಬ ಇದೆಯೆಂದು ಬರೆಯುತ್ತಿದ್ದ. ಅದಕ್ಕೆ ತಕ್ಕಂತೆ ಶಿವಣ್ಣ ದುಡ್ಡು ಕಳಿಸುತ್ತಿದ್ದ. ಅದೂ ಅಲ್ಲದೆ ಶಿವಣ್ಣನಿಗೆ ಗೌಡರು ಉದಾರ ವಾಗಿ ಸಹಾಯಮಾಡುತ್ತಿದ್ದರು. ಶಿವಣ್ಣ ಗೌಡರ ನೆಚ್ಚಿನ ಗುಮಾಸ್ತೆ ಯಾಗಿದ್ದನು.

ತನ್ನ ಮಗ ಪಟ್ಟಣದಲ್ಲಿ ತಿರುಗಾಡಿ ಅಲ್ಲಿಯವರಂತೆಯೇ ಆಗಿದ್ದ ವಿಷಯವನ್ನು ಶಿವಣ್ಣ ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದನು ಊರಿನಲ್ಲಿ ತನ್ನ ಮಗ ಕೈ ತುಂಬ ಸಂಪಾದನೆ ಮಾಡುವ ಯೋಗ್ಯತೆ ಗಳಿಸಿಕೊಂಡಿ ದ್ದಾನೆಂದೂ, ಅದಕ್ಕಾಗಿ ಒಳ್ಳೆಯ ಹೆಣ್ಣನ್ನು ಎಲ್ಲಾದರೂ ಹುಡುಕ ಬೇಕೆಂದು ಶಿವಣ್ಣ ಹಾರಾಡುತ್ತಿದ್ದನು.

ರಂಗನೇನೋ ಊರಿನಲ್ಲಿ ಅಲ್ಲಲ್ಲಿ ದಳ್ಳಾಳಿ ಕೆಲಸ ಮಾಡಿ ಹಣ ಸಂಪಾದಿಸುತ್ತಿದ್ದ. ಹಳ್ಳಿಯಿಂದ ಅಪ್ಪನೂ ಕೂಡ ಪ್ರತಿ ತಿಂಗಳೂ ಹಣ ಕಳಿಸುತ್ತಿದ್ದ. ಅಂತೂ ರಂಗನ ಜೋಬಿನಲ್ಲಿ ದುಡ್ಡು ಇದ್ದೇ ಇರುತ್ತಿತ್ತು. ಅದರ ಖರ್ಚಿಗೆ ತಕ್ಕ ಯುವಕರು ಅವನ ಆಪ್ತ ಗೆಳೆಯರಾದರು.

ಒಂದು ದಿನ ರಂಗ ತನ್ನ ಗೆಳೆಯನೊಂದಿಗೆ ಒಬ್ಬಳ ಮನೆಗೆ ಹೋಗಿದ್ದ. ಮತ್ತೆ ಪ್ರತಿದಿನವೂ ಹೋಗಲು ಪ್ರಾರಂಭಿಸಿದ. ಹಳ್ಳಿಯಿಂದ ಶಿವಣ್ಣ ಕಳಿಸುತ್ತಿದ್ದ ಹಣವನ್ನೆಲ್ಲಾ ಸೂಳೆಯ ಮನೆಯ ಕಾಣಿಕೆಗಾಗಿ ಪೋಲು ಮಾಡಿದ.

ಸ್ವಲ್ಪ ದಿನಗಳ ನಂತರ ರಂಗನ ಜೋಬು ಬರಿದಾಗುತ್ತ ಬಂತು. ಇದರಿಂದ ರಂಗಣ್ಣನಿಗೆ ತನ್ನ ಪ್ರೇಯಸಿಯ ಮನೆಗೆ ಪ್ರವೇಶ ಇಲ್ಲದಂತಾ ಯಿತು.

ಕೈಯಲ್ಲಿ ನಾಣ್ಯದ ಚೆಂಡಾಟವಾಡುತ್ತ ಮತ್ತಿತರರು ಬರಲಾರಂಭಿ ಸಿದರು ರಂಗಣ್ಣ ಒಂದು ಯೋಚನೆ ಮಾಡಿದ. ಬರುತ್ತಿದ್ದವರನ್ನು ಒಂದೇ ಸಮನೆ ಪರೀಕ್ಷಿಸುತ್ತಿದ್ದ. ಅವರು ಒಂದು ಕೈಯಲ್ಲಿ ಹಣದ ಚೀಲವನ್ನೂ, ಮತ್ತೊಂದರಲ್ಲಿ ಪಾನೀಯದ ಬಾಟಲನ್ನೂ ಹಿಡಿದು ಮನೆ ಯೊಳಗೆ ನುಗ್ಗುತ್ತಿದ್ದರು. ತಾವು ಮಾಡುವ ಅತ್ಯಾಚಾರವನ್ನು ಮರೆಸು

ವುದಕ್ಕೆ ಪಾನೀಯ ಅವರ ಅತ್ಯುತ್ತಮ ಸಾಧನೆಯಾಗಿತ್ತು. ಸ್ವಲ್ಪ ಹೊತ್ತಿನಲ್ಲೇ ಅವರು ಹೆಣ್ಣು ಯಂತ್ರಕ್ಕೆ ಸಿಲುಕಿ ದೇಹವನ್ನೇ ಮರೆತು ಬಿಡುತ್ತಿದ್ದರು.

ಇದನ್ನೆಲ್ಲ ರಂಗಣ್ಣ ಹೊಂಚು ಕಾಯುತ್ತಿದ್ದ. ಒಂದೊಂದು ಬಾರಿ ಚಲ್ಲಾಪಿಲ್ಲಿಯಾಗಿ ಬಿದ್ದಿದ್ದ ಹಣದ ಥೈಲಿಯನ್ನು ಎಗರಿಸಿಬಿಡುತ್ತಿದ್ದ. ಮತ್ತೆ ಕೆಲವು ವೇಳೆ ಬಟ್ಟೆಬರೆಗಳನ್ನೇ ಹಾರಿಸಿಬಿಡುತ್ತಿದ್ದ

ಹೀಗೊಂದು ಸಾರಿ ನಡೆದಾಗ ರಂಗಣ್ಣ ಒಬ್ಬ ಭಾರಿ ಆಸಾಮಿಯ ಕೈಯಲ್ಲಿ ಸಿಕ್ಕಿಬಿದ್ದ. ರಾತ್ರಿಯ ಕಪ್ಪಿನಲ್ಲಿ ಆ ಆಸಾಮಿಯ ಮುಖ ಸರಿಯಾಗಿ ಕಾಣಲಿಲ್ಲ. ತಕ್ಷಣ ಅವನೇ ತನ್ನ ಟಾರ್ಚನ್ನು ಅದುಮಿ ರಂಗಣ್ಣನ ಮುಖದ ಮೇಲೆ ಬೆಳಕು ಚೆಲ್ಲಿದ.

ರಂಗಣ್ಣ ಕದ್ದಿದ್ದ ಬೆಳ್ಳಿಯ ನಾಣ್ಯಗಳೂ ಸಿಲ್ಕ್ ಬಟ್ಟೆಗಳೂ ಹೊಳೆದವು. ತಕ್ಷಣ ಆ ಆಸಾಮಿ ರಂಗಣ್ಣನ ಕೈಸ್ಕೆಗೆರಡು ಬಿಗಿದನು.

"ನಾನು ಯಾರು ಗೊತ್ತೊ? ಪೋಲೀಸ್ ಸಿ. ಐ ಡಿ. ಭಾರಿ ಕಳ್ಳನ್ನ ಹಿಡಿದೆ. ಬಾ ಸ್ಟೇಷನ್‌ಗೆ" ಎಂದು ರಂಗಣ್ಣನ ರಟ್ಟೆಯನ್ನು ಹಿಡಿದೆಳೆದ.

ರಂಗಣ್ಣ ತಾನು ಕದ್ದ ಸಾಮಾನುಗಳು ಪೋಲೀಸು ಇನ್‌ಸ್ಪೆಕ್ಟರದೆಂದ. ಇನ್‌ಸ್ಪೆಕ್ಟರು ಸೂಳೆಯ ಮನೆಯಲ್ಲಿ ಅಮಲೇರಿ ಮಲಗಿದ್ದಾಗಲೇ ರಂಗಣ್ಣ ಅವುಗಳನ್ನು ಕದ್ದದ್ದು.

ಅದನ್ನು ಕೇಳಿದ ಸಿ. ಐ. ಡಿ. ರಂಗಣ್ಣನನ್ನು ಹಿಡಿಯಲು ಹಿಂಜರಿದ. ಒಂದು ವೇಳೆ ಮೊಖದ್ದಮೆ ಹೂಡಿದರೆ ತಾನು ಇನ್‌ಸ್ಪೆಕ್ಟರ ಮೇಲೆಯೆ ಎದುರುಬಿದ್ದಂತಾಗುವುದೆಂದು ಸಿ. ಐ ಡಿ. ಹೆದರಿದ.

ಆದರೂ ಹೆದರಿಕೆಯನ್ನು ತೋರ್ಪಡಿಸದೆ, "ಏನೋ ಹುಡುಗ ಅಂತ ನಿನಗೆ ಒಂದು ಮಾಫ್ಹೇಳ್ತೀನೆ. ಈಗಲೇ ಇಷ್ಟು ದೊಡ್ಡ ಕಳ್ಳತನ

ಮಾಡಲು ಶುರು ಮಾಡಿರುವ ನೀನು ಮುಂದೇನಾದರೂ ಬದುಕೋ ಸಂಭವ ಉಂಟೇ?" ಎಂದ. ಸಿ. ಐ. ಡಿ ಜಂಭದ ಮಾತನ್ನಾಡಿದ.

ರಂಗಣ್ಣ ತನ್ನನ್ನು ಬಿಟ್ಟುಬಿಡುವಂತೆ ಸಿ. ಐ ಡಿ. ಯಲ್ಲಿ ಗೋಗರೆದ. ಇನ್ನು ಮುಂದೆ ಕಳ್ಳತನ ಮಾಡುವುದಿಲ್ಲವೆಂದು ಭರವಸೆಯಿತ್ತ.

ಅಷ್ಟು ಹೊತ್ತಿಗಾಗಲೇ ಮಧ್ಯರಾತ್ರಿಯ ಸಮಯವಾಗಿತ್ತು. ಇನ್‌ಸ್ಪೆಕ್ಟರ್ ಸಾಹೇಬರು ತಮ್ಮ ಭೋಗಲಾಲಸೆಗಳನ್ನು ಮುಗಿಸಿಕೊಂಡು ಹಿಂತಿರುಗುವ ವೇಳೆಯಾಯಿತು. ಆದ್ದರಿಂದ ಸಿ. ಐ. ಡಿ. ಹೆದರಿ ತಕ್ಷಣ ರಂಗಣ್ಣನು ಕದ್ದಿದ್ದ ಬಟ್ಟೆ ಬರೆಗಳನ್ನೂ ದುಡ್ಡನ್ನೂ ಕಸಿದುಕೊಂಡು ಪರಾರಿಯಾದ.

ರಂಗಣ್ಣ ತನ್ನ ಕಳ್ಳ ಜೇಬಲ್ಲಿ ಉಳಿಸಿಕೊಂಡಿದ್ದ ಸ್ವಲ್ಪ ಹಣವನ್ನು ಸಿ. ಐ ಡಿ. ಕಾಣದೇ ಹೋದನು. ಇದರಿಂದ ರಂಗಣ್ಣನಿಗೇನೋ ಸಂತೋಷವಾಯಿತು. ಆದರೆ ಆ ಹಣದಲ್ಲಿ ಏನು ಮಾಡಬೇಕೆಂಬುದು ರಂಗಣ್ಣನಿಗೆ ಒಂದು ಸಮಸ್ಯೆಯಾಯಿತು. ಸ್ವಲ್ಪ ಯೋಚನೆ ಮಾಡಿದ. ತಕ್ಷಣ ಹೊಳೆಯಿತು; ತನ್ನ ಹಳ್ಳಿಗೆ ಹೊರಟೇ ಬಿಡಬೇಕೆಂದು ನಿರ್ಧರಿಸಿದ. ಆದರೆ ಇದ್ದ ಹಣ ಕೇವಲ ಹಳ್ಳಿಯನ್ನು ತಲಪುವ ಛಾರ್ಜಿಗೇ ಸಾಲುತ್ತಿರಲಿಲ್ಲ. ಅಂತೂ ಹೇಗಾದರೂ ಮಾಡಿ ಬಸ್ಸು ಕಂಡಕ್ಟರಿಗೆ ಮಂಕು ಹಿಡಿಸಿ ಹಳ್ಳಿಯನ್ನು ಸೇರುವ ಛಾತಿ ರಂಗಣ್ಣನಿಗಿತ್ತು. ಆಮೇಲೆ ಹಳ್ಳಿಯಲ್ಲಿ ಹೇಗಾದರೂ ಸಂಪಾದಿಸಬಹುದು ಎಂದು ತೀರ್ಮಾನಿಸಿ ಆ ರಾತ್ರಿ ಅರಳೀಮರದ ಕೆಳಗೆ ಕಳೆದನು. ಬೆಳಗಿನ ಝಾವ ಬೇಗನೆದ್ದು ಬಸ್ ಹತ್ತಿದ.

ರಂಗಣ್ಣ ಪಟ್ಟಣದ ಜೀವನದಿಂದ ಯಾರಿಗೂ ನಿಲುಕದ ಧೈರ್ಯವನ್ನು ದೊರಕಿಸಿಕೊಂಡಿದ್ದ. ಇನ್‌ಸ್ಪೆಕ್ಟರಂಥ ದೊಡ್ಡ ಮನುಷ್ಯರೇ ಸೂಳೆ ಮನೆಗೆ ನುಗ್ಗಿದ ಮೇಲೆ ತಾನು ಹೋದರೇನೂ ಪಾಪವಿಲ್ಲವೆಂದು ನಿಶ್ಚಯಿಸಿದ. ರಾತ್ರಿಯ ಹೊತ್ತು ಕಳ್ಳನನ್ನು ಹಿಡಿಯುವ ಬದಲು ಲಂಚವನ್ನು ತೆಗೆದುಕೊಳ್ಳಲು ಸಮಯ ಕಾಯುವ ಸಿ. ಐ. ಡಿ. ಗಳೇ ಭಾರಿ

ಕಳ್ಳರಾಗಿರುವಾಗ, ತಾನು ಕಳ್ಳತನ ಮಾಡಿದ್ದು ನಿರಪರಾಧವೆಂದು ರಂಗಣ್ಣನ ಮನಸ್ಸು ಹೇಳಿತು.

ಪ್ರತಿದಿನವೂ ದುಡ್ಡಿನ ರಾಶಿ ಕರಗದೆ ಬೆಳೆಯುತ್ತಿದ್ದರೂ ಸೂಳೆಗಾರಿಕೆಯನ್ನು ಬಿಡದೆ ದುಡ್ಡಿದ್ದವರಿಗೆ ತಮ್ಮ ದೇಹವನ್ನು ದಾನಮಾಡುವ ದಾನಿಗಳಿದ್ದರೆ ಅದನ್ನು ಸ್ವೀಕರಿಸುವವನಿಗೆ ಯಾವ ಪಾಪವೂ ಇಲ್ಲವೆಂದು ಪ್ರಮಾಣ ಮಾಡಿದ. ಅಂತೆಯೆ ರಂಗಣ್ಣನ ಅಂಗಾಂಗಗಳು ಯಾವ ಸ್ವಯಂಕೃತಾಪರಾಧವನ್ನೂ ಮಾಡಿಲ್ಲವೆಂದು ನುಡಿದವು!

ಒಟ್ಟಿನಲ್ಲಿ ರಂಗಣ್ಣ ಈ ಸಾರಿ ಹಳ್ಳಿಗೆ ಬರುವ ವೇಳೆಗೆ ಎಷ್ಟೋ ವಿಷಯಗಳನ್ನು ಕಲಿತಿದ್ದ. ಆ ಅನುಭವಗಳನ್ನೆಲ್ಲ ಉಪಯೋಗಿಸಿ ತನ್ನ ಹಳ್ಳಿಯಲ್ಲಿ ತಾನು ಶ್ರೀಮಂತನಾಗಬೇಕೆಂದು ಹಗಲುಗನಸು ಕಾಣುತ್ತಿರುವಲ್ಲಿ ಹಳ್ಳಿಯ ಗೇಟ್ ಕಾಣಿಸಿತು.

ಬಸ್ ಕಂಡಕ್ಟರು ಅದೇ ಹಳ್ಳಿಯವನಾದ್ದರಿಂದ ಶಿವಣ್ಣನ ಮಗ ರಂಗಣ್ಣನಿಂದ ದುಡ್ಡು ಕೇಳುವುದು ಮರ್ಯಾದೆಯಲ್ಲವೆಂದು ಬಿಟ್ಟಿ ಪ್ರಯಾಣ ಮಾಡಿಸಿದ್ದ! ತನ್ನ ಮೊದಲ ವಿಜಯವನ್ನೇ ನೋಡಿ ರಂಗಣ್ಣ ಹಳ್ಳಿಯವರಿಗೆ ಎರಚಬಹುದಾದ ಮಂಕುಬೂದಿಯನ್ನು ಆಗಲೇ ತಯಾರಿಸಿದ್ದ.

ಅಂತೂ ರಂಗಣ್ಣ ಹಳ್ಳಿಗೆ ಕಾಲಿಟ್ಟೊಡನೆ ಎಲ್ಲರೂ ಆದರದಿಂದ ಸ್ವಾಗತಿಸಿದರು. ಶಿವಣ್ಣನಂತೂ ಮಗನನ್ನು ನೋಡಿ ಹಿಗ್ಗಿದ.

ಮತ್ತೆ ಶಿವಣ್ಣ ಹತ್ತಿರ ಬಂದು ರಂಗಣ್ಣನ ನುಣುಪಾದ ಕೆನ್ನೆಗಳನ್ನು ಸವರಿ, "ಅಬ್ಬ ಎಂಥ ಮಗು! ಗಡ್ಡ ಮೀಸೆ ಬರುವುದಕ್ಕಿಂತ ಮುಂಚೆಯೆ ಎಷ್ಟು ರಾಜಬೀದಿಗಳಲ್ಲಿ ಓಡಾಡಿಬಿಟ್ಟಿದೆ!! ಊರೂರಲ್ಲಿ ಭುಜ ತಟ್ಟಿದ ರಂಗಣ್ಣ ಯಾರಿಗೆ ಕಡಿಮೆ!!!" ಎಂದು ಸಂತೋಷಪಡುತ್ತಿದ್ದ.

ಹಾಗೆ ಶಿವಣ್ಣ ಎಲ್ಲರಿಗೂ ಹೇಳುತ್ತಿದ್ದಾಗ, ರಂಗಣ್ಣ ತನ್ನ ಮನಸ್ಸಿನಲ್ಲೇ "ಪಾಪ, ಅಪ್ಪನಿಗೇನು ಗೊತ್ತು ರೇಜರ್ ಅನ್ನೋ ಮಹಾಯಂತ್ರ. ಕತ್ತೆಗೆ ಬಂದ ಹಾಗೆ ವಯಸ್ಸು ಬಂದರೂ ಒಂದು ನಿಮಿಷದಲ್ಲಿ ಗಡ್ಡ

ಮೀಸೆ ಬೋಳಿಸಿ ರಕ್ತ ಚಿಮ್ಮೋ ಹುಡುಗನ ಹಾಗೆ ಮಾಡಿದ ಆ "ರೇಜರ್‌ರಾಣಿ"ಯ ಕೃಪೆ ನನ್ನ ಮೇಲೆ ಸದಾ ಇರಲಿ" ಅಂತ ತನ್ನಲ್ಲಿ ತಾನೇ ನಕ್ಕ.

ರಂಗಣ್ಣ ಹಳ್ಳಿಯಲ್ಲೇ ನೆಲಸಿದ. ಬೆಳಗಿನ ಝಾವವೆದ್ದು ಸಾಯಂಕಾಲದವರೆಗೂ ಒಂದೇ ಸಮನೆ ಹೊಲಗಳಲ್ಲಿ ದುಡಿಯುತ್ತಿದ್ದ ಬಡರೈತರನ್ನು ನೋಡಿ ರಂಗಣ್ಣನಿಗೇನೂ ಮರುಕವಿರಲಿಲ್ಲ. ಆದರೂ ರಂಗಣ್ಣನ ಪಾದಧೂಳಿಯಿಂದ ತಮ್ಮ ಹೊಲಗಳು ಪವಿತ್ರವಾಗಬೇಕೆಂದು ರೈತರು ಹಾತೊರೆಯುತ್ತಿದ್ದರು.

"ಎಷ್ಟಾದರೂ ರಂಗಪ್ಪನವರು ಊರಲ್ಲಿ ಓದಿದ ಕುಳ. ಆಕಾಶದಲ್ಲಿ ಪಕ್ಷಿ ಹಂಗೆ ಹಾರಾಡಿ ಸುಟ್ಟ ಹೊಲಕ್ಕೆ ನೀರು ಸುರೀಬಲ್ಲ. ಒಂದುಪಕ್ಷ ನೇಗಿಲು ಕೆಟ್ಟರೂ ರಂಗಣ್ಣ ಬರೀ ಅಕ್ಷರದಿಂದಲೇ ಉಳಬಲ್ಲ. ಅಂತಾ ಆಸಾಮಿ ನಮ್ಮಳ್ಳೀಲಿ ಇರೋದು ಒಂದು ಚಿನ್ನದ ಗಟ್ಟಿಯಿದ್ದಾಗೆ" ಎಂದು ಒಮ್ಮೆ ರೈತನೊಬ್ಬ ಹೇಳಿದ.

ಇದೇ ರೀತಿ ರಂಗಣ್ಣನಿಗೆ ಹಳ್ಳಿಯವರು ಮರ್ಯಾದೆ ಮಾಡುತ್ತಿದ್ದರು. ಯಾವ ಜವಾಬ್ದಾರಿಯೂ ಇಲ್ಲದ ಹಿರಿಯ ಸ್ಥಾನವನ್ನು ರಂಗಣ್ಣ ಗಳಿಸಿಕೊಂಡನು.

ತಂದೆ ಶಿವಣ್ಣನ ಜೊತೆಯಲ್ಲಿ ರಂಗಣ್ಣ ಅನೇಕ ವೇಳೆ ಪಟೇಲರ ಮನೆಗೆ ಹೋಗಿದ್ದ. ಹೋದಾಗಲೆಲ್ಲ ಮಲ್ಲಮ್ಮ ತಿಂಡಿ ತೀರ್ಥಗಳನ್ನು ತಂದಿಟ್ಟು ಉಪಚರಿಸುತ್ತಿದ್ದಳು. ಇದು ಮಲ್ಲಮ್ಮನ ಔದಾರ್ಯಕ್ಕೆ ನಿದರ್ಶನವೆಂದು ಶಿವಣ್ಣ ಸಂತೋಷಪಟ್ಟ. ಆದರೆ ಆ ಔದಾರ್ಯದ ತಿರುಳು ರಂಗಣ್ಣನಿಗೆ ಮಾತ್ರ ಗೊತ್ತು.

ಅಂತೆಯೆ ಮಲ್ಲಮ್ಮನಿಗೆ ಯಾವಾಗಲೂ ರಂಗಣ್ಣನ ಮೇಲೇ ಕಣ್ಣು. ಸುಮಾರು ಒಂದೇ ವಯಸ್ಸಿನ ರಂಗಣ್ಣ ಮತ್ತು ಮಲ್ಲಮ್ಮನ ಮನಸ್ಸಿನಲ್ಲಿ ಒಂದೇ ತೆರನಾದ ಒತ್ತಡವಿತ್ತು.

ಅದು ಹೊರಬರಲು ಅವಕಾಶ ಸಿಕ್ಕಿದಾಗ ಪಟೇಲರಿಗಾಗಲಿ ಶಿವಣ್ಣನಿಗಾಗಲಿ ತಿಳಿಯದಂತೆ ರಂಗಣ್ಣ ಮಲ್ಲಮ್ಮನೊಡನೆ ಸಡಿಲವಾಗಿ ವರ್ತಿಸಲು ಆರಂಭಿಸಿದ. ಅದಕ್ಕೆ ತಕ್ಕಂತೆ ಮಲ್ಲಮ್ಮನು ಕೂಡ ಸಂತೋಷ ದಿಂದ ರಂಗಣ್ಣನನ್ನು ಏಕಾಂತದಲ್ಲಿ ಕಾಣಲು ಹಾತೊರೆದಳು.

ಒಂದು ದಿನ ಮಲ್ಲಮ್ಮ ರಂಗಣ್ಣನನ್ನು ಕುರಿತು, "ನೋಡು, ನನ್ನನ್ನು ಆ ಮುದಿಗೊಡ್ಡಿಗೆ ಕಟ್ಟಿದ ಮಾತ್ರಕ್ಕೆ ನಾನೇನು ಮುದುಕಿಯೇ! ದೇವರೇನೋ ನನಗೆ ರೂಪ ತುಂಬಿದ, ಆದರೆ ಅದರಿಂದೇನು ಪ್ರಯೋ ಜನವಾಯ್ತು ?

ಹೀಗೆ ಯೋಚಿಸಿ ಬೇಸರಗೊಂಡು ಕಣ್ಣಿಗೆ ಕಾಣದ ದೇವರ ಹತ್ತಿರವೇ ಹೊರಟುಹೋಗೋಣವೆಂದಿದ್ದೆ. ಅಷ್ಟರಲ್ಲಿ ದೇವರೇ ಕಳಿಸಿ ಕೊಟ್ಟಂತೆ ನೀನು ಬಂದಿ. ಈಗ ನೋಡು ನನ್ನ ಎದೆ ಉಬ್ಬಿಹೋಗಿದೆ" ಎಂದಳು.

"ಹಾಗಾದರೆ ನನಗೇನು ಕಾಣಿಕೆ ಕೊಡುವೆ?" ಎಂದು ರಂಗಣ್ಣ ಮಲ್ಲಮ್ಮನ ಮುಖಕ್ಕೆ ಮುಖ ತಾಗಿಸಿದ.

ಪಟ್ಟಣದ ಸೂಳೆಯರ ಮನೆಯಲ್ಲಿ ವಿಟನಾಗಿಯೂ, ಕಳ್ಳನಾ ಗಿಯೂ ತಯಾರಿ ಹೊಂದಿದ್ದ ರಂಗಣ್ಣ ಮಲ್ಲಮ್ಮನನ್ನು ತನ್ನ ಕಡೆಗೆ ಸೆಳೆ ಯುವ ಪ್ರಯತ್ನದಲ್ಲಿ ಜಯಶೀಲನಾಗಿದ್ದ.

"ನಾನೇ ಮುಂದಿರುವಾಗ ಕಾಣಿಕೆಯಾಗಿ ಮತ್ತೇನನ್ನು ಕೊಡಲಿ?" ಎಂದು ಕನಸಿನ ಲೋಕದಲ್ಲಿದ್ದವಳಂತೆ ಮಲ್ಲಮ್ಮ ನುಡಿದಳು.

"ನೀನು ಸಂಪೂರ್ಣವಾಗಿ ನನ್ನವಳಾಗಿಲ್ಲ ಏಕೆಂದರೆ ನೀನು ನನಗೂ ಹೇಳದೆ ಬಚ್ಚಿಟ್ಟಿರುವ ಎಷ್ಟೋ ವಿಷಯವಿದೆ" ಎಂದನು ರಂಗಣ್ಣ.

"ನಾನು ಏನನ್ನು ತಾನೆ ಬಚ್ಚಿಡಲು ಸಾಧ್ಯ? ಹಾಗೆ ನೋಡಿದರೆ ನನ್ನನ್ನೇ ಬಚ್ಚಿಟ್ಟಿದ್ದ ಪಟೇಲರ ಕೈಯಿಂದ ತಪ್ಪಿಸಿಕೊಂಡು ನಿನ್ನ ಮುಂದೆ ಬಂದು ನಿಂತಿಲ್ಲವೇ?" ಎಂದು ಮಲ್ಲಮ್ಮ ಜಡೆಯ ತುದಿಯನ್ನು ಕಚ್ಚಿ ದಳು.

"ನಾನು ಹೇಳುತ್ತಿರುವುದು ಅದಲ್ಲ, ಮಲ್ಲಿ. ಪಟೇಲರು ಜನರ ಕಣ್ಣಿಗೆ ಮಣ್ಣೆರಚಿ ಬಚ್ಚಿಟ್ಟಿರುವ ಹಣದ ವಿಷಯ ನಿನಗೇನೂ ಗೊತ್ತಿಲ್ಲವೇ? ಕಿರಿಯ ಹೆಂಡತಿಯಾದ ನಿನಗೆ ಅವರು ಏನೂ ಹೇಳಿಲ್ಲವೇ?

ಹೇಳೇ ಇರಬೇಕು. ಮುದಿ ಗೌಡರಿಗೆ ನಿನ್ನನ್ನು ಕಂಡರೆ ಪ್ರೀತಿ ಇದ್ದೇ ಇದೆ. ಇವಳಿಂದಲಾದರೂ ವಂಶ ಬೆಳೆಯಬಹುದೋ ಏನೋ ಎಂದು ಸದಾ ಯೋಚಿಸುತ್ತಿರುವ ಗೌಡರು ನಿನಗೆ ದುಡ್ಡಿನ ವಿಷಯ ಹೇಳೇ ಇರಬೇಕು. ನೀನು ನನ್ನ ಬಳಿ ಮಾತ್ರ ಮುಚ್ಚು ಮರೆ ಮಾಡುತ್ತಿರುವೆ" ಎಂದು ರಂಗಣ್ಣ ಕೋಪಗೊಂಡವನಂತೆ ನಟಿಸಿದ.

ಮತ್ತೆ ರಂಗಣ್ಣ ಮಲ್ಲಮ್ಮನ ಭುಜಕ್ಕೆ ಕೈಹಾಕಿ, "ದಿನೇ ದಿನೇ ದಿವಾಳಿಯಾಗುತ್ತ ನಾನು ನಿನ್ನ ಹತ್ತಿರ ಬರಲು ಸಾಧ್ಯವೇ?" ಎಂದು ತನ್ನ ಕೈಗಳೆರಡನ್ನೂ ಹಿಂದಕ್ಕೆಳೆದುಕೊಂಡನು.

"ಹೆಸರಿಗೆ ನಾನು ಗೌಡರ ಕಿರಿಯ ಹೆಂಡತಿ. ಮುದಿಗೊಡ್ಡುಗಳಾಗಿ ಮದುವೆಯೇಕೆ ಮಾಡಿಕೊಳ್ಳುತ್ತಾರೋ ನನಗೆ ಗೊತ್ತಿಲ್ಲ. ಹೆಂಗಸರಲ್ಲಿ ಹೇಗಿರಬೇಕೆಂಬುದೇ ಗೌಡರಿಗೆ ಗೊತ್ತಿಲ್ಲ. ಇತ್ತ ನನ್ನ ಮನಸ್ಸಿಗೂ ಸಂತೋಷವಿಲ್ಲ; ಅತ್ತ ಅವರಿಗೂ ಹುಡುಗರಂತಾಡಲು ಮನಸ್ಸಿಲ್ಲ. ಅಂತೂ ಪ್ರತಿನಿಮಿಷವನ್ನೂ ಎಣಿಸಬೇಕಾಗಿದೆ. ಅಂಥಾದ್ದರಲ್ಲಿ ಆಸ್ತಿಯ ವಿಷಯವನ್ನು ಅವನು—ಅಲ್ಲ; ಅವರು—ಹೇಳಿಯಾರೇ?" ಎಂದು ಮಲ್ಲಮ್ಮ ತನ್ನ ಮನಸ್ಸಿನಲ್ಲಿದ್ದ ನಿಜದ ಮಾತನ್ನೇ ಹೇಳಿದಳು.

ರಂಗಣ್ಣ ಪುನಃ ಮಲ್ಲಮ್ಮನ ಬಳಿ ಬಂದು, "ನೆಲಮಾಳಿಗೆಯ ಬೀಗದ ಕೈ ನಿನಗೆ ಗೊತ್ತಿಲ್ಲವೇ? ಖಂಡಿತವಾಗಿ ಹೇಳು" ಎಂದು ಸೈನಿಕನಂತೆ ಮಾತನಾಡಿದ.

"ಇಲ್ಲ; ನಿಜವಾಗಿಯೂ ಗೊತ್ತಿಲ್ಲ" ಎಂದು ಮಲ್ಲಮ್ಮ ಅತ್ತೇಬಿಟ್ಟಳು.

"ಏಕೆ ಸುಮ್ಮನೆ ಒಂದು ಮಾತಿಗೆ ಅಳುವುದೇ? ನಾನು ಹೇಳುತ್ತಿರುವ ಮಾತು ನಮ್ಮಿಬ್ಬರ ಸೌಖ್ಯಕ್ಕಾಗಿಯೇ ಅಲ್ಲವೇ?

ಒಂದು ಪಕ್ಷ ನೆಲಮಾಳಿಗೆಯ ಆಸ್ತಿ ಸಿಕ್ಕಿದರೆ ನಾವಿಬ್ಬರೂ ಕೂಡಿ ಸುಖವಾಗಿರಬಹುದು. ಅದಕ್ಕೇನಾದರೂ ಅಡ್ಡಿ ಒಂದರೆ ಈ ಹಳ್ಳಿಯನ್ನೇ ಬಿಟ್ಟು ದೊಡ್ಡೂರಿಗೆ ಹೋಗಿ ಸೊಗಸಾಗಿರಬಹುದು.

ನಿನಗೆ ನಾನು ಸರಿಯಾದವನೇ ಹೊರತು ಹಣ್ಣು ಹಣ್ಣಾದ ಗೌಡರು ಚಿಕ್ಕ ಹುಡುಗಿಯಾದ ನಿನಗೆ ಯಾವ ಸೌಖ್ಯವನ್ನು ತಾನೆ ಮುಟ್ಟಿಸಿ ಯಾರು ?

ಅದೂ ಅಲ್ಲದೆ ಈಗಾಗಲೆ ಸುಕ್ಕಾಗಿರುವ ಗೌಡರು ಇನ್ನೆಷ್ಟು ದಿನ ತಾನೆ ಬದುಕಿಯಾರು ?" ಎನ್ನುತ್ತಾ ರಂಗಣ್ಣ ಭವಿಷ್ಯತ್ತಿನ ಭವ್ಯಜೀವನ ವನ್ನು ಬಣ್ಣಿಸತೊಡಗಿದ.

ಹೇಗಾದರೂ ಮಾಡಿ ನೆಲಮಾಳಿಗೆಯ ಬೀಗದ ಕೈಯನ್ನು ಗೌಡ ರಿಂದ ತಿಳಿಯಬೇಕೆಂದು ಮಲ್ಲಮ್ಮನನ್ನು ಒತ್ತಾಯಪಡಿಸಿದ.

ತನ್ನ ಮುಂದಿನ ಜೀವನದ ಸುಖವನ್ನು ರಂಗಣ್ಣನೊಡನೆ ಕಳೆ ಯಲು ಆಗಲೇ ನಿರ್ಧರಿಸಿದ್ದ ಮಲ್ಲಮ್ಮ ರಂಗಣ್ಣನ ಕಿವಿಯಲ್ಲಿ ಏನೋ ಪಿಸುಮಾತನಾಡಿದಳು. ರಂಗಣ್ಣ ಅದಕ್ಕೆ ನಕ್ಕು ಹೂಗುಟ್ಟಿದ.

ಅಂತೂ ಇಬ್ಬರೂ ತಮ್ಮ ತಮ್ಮಲ್ಲೇ ನಕ್ಕರು. ಯಾವುದೋ ಏರ್ಪಾಟಿಗೆ ರಂಗಣ್ಣನಿಂದ ಒಪ್ಪಿಗೆ ದೊರೆಯಿತು.

ರಂಗಣ್ಣ ಸಂತೋಷಭರಿತನಾಗಿ ಮಲ್ಲಮ್ಮನ ಜಡೆ ಹಿಡಿದೆಳೆದು ತನ್ನ ಬಳಿ ಕೂಡಿಸಿಕೊಂಡ. ಮಲ್ಲಮ್ಮ ನಗುತ್ತಲೇ ಜಡೆ ಬಿಡಿಸಿಕೊಂಡು ದೂರ ನಿಂತಳು.

ಅಷ್ಟು ಹೊತ್ತಿಗೆ ಗಡಿಯಾರ ಬಡಿಯಿತು. ಗೌಡರು ಮನೆಗೆ ಬರುವ ವೇಳೆ ಸಮೀಪಿಸಿತು.

ಮಲ್ಲಮ್ಮ ಕೈಸನ್ನೆ ಮಾಡುತ್ತಾ ಒಳಕ್ಕೋಡಿದಳು. ರಂಗಣ್ಣ ಮಲ್ಲಮ್ಮನನ್ನು ಬಿಡಲಾರದೆ ಬಿಟ್ಟು ತನ್ನ ಮನೆಯ ಕಡೆ ಹೊರಟ.

ಗೌಡರು ಹಳ್ಳಿಗೆ ಐದುಮೈಲಿ ದೂರದಲ್ಲಿದ್ದ ನಾಲೆಯನ್ನು ಪರೀಕ್ಷಿ ಸಲು ಹೊರಟಿದ್ದರು ಆ ನಾಲೆಯಿಂದ ಜಮೀನಿಗೆ ಸರಿಯಾಗಿ ನೀರು

ಬರುತ್ತಿರಲಿಲ್ಲ. ಆಗಲೇ ಬೆಳೆ ಬಿತ್ತುವ ಸಮಯ ಬಂದಿತ್ತು. ರೈತರೆಲ್ಲ ಹೊಸಬೀಜಗಳನ್ನು ಕೊಂಡು ಕಾದಿದ್ದರು. ಅದಕ್ಕಾಗಿ ಗೌಡರೇ ಸ್ವತಃ ನಾಲೆಯನ್ನು ಪರೀಕ್ಷಿಸಲು ಹೊರಟಿದ್ದರು.

ಎಲ್ಲ ವಿಷಯುಗಳನ್ನೂ ಮೇಲಿನವರಿಗೆ ತಿಳಿಸುತ್ತೇನೆಂದು ರೈತರಿಗೆ ಭರವಸೆಯಿತ್ತು, ಗೌಡರು ಗಾಡಿ ಹತ್ತಿದರು.

ಮನೆಗೆ ಬರುವಾಗ ಆಗಲೇ ಸಂಜೆ ಕಳೆದಿತ್ತು. ಅಂದು ಗೌಡರಿಗೇಕೋ ಆಯಾಸವಾಗಿತ್ತು. ಅದರ ಜೊತೆಗೆ ಹಸಿವೂ ಆಗಿದ್ದಿತು. ಹೊರಗಡೆ ಹೊರಟರೂ ಎಳನೀರಿನ ಫಲಹಾರವನ್ನು ಬಿಟ್ಟು ಗೌಡರು ಮತ್ತೇನನ್ನೂ ತೆಗೆದುಕೊಳ್ಳುತ್ತಿರಲಿಲ್ಲ.

ಅಂದು ಕೂಡ ಕೇವಲ ಬರಿಯ ಎಳನೀರಿನಲ್ಲೇ ಕಾಲ ಕಳೆದಿದ್ದ ಗೌಡರಿಗೆ ಮನೆಯೂಟ ಸೊಗಸಾಗಿ ರುಚಿಸಿತು.

ಮಲ್ಲಮ್ಮ ಎಲೆಯಡಿಕೆಯನ್ನು ತಂದಿಟ್ಟಳು. ಗೌಡರು ಎಲೆಯನ್ನಗಿಯುತ್ತಾ ಮಲ್ಲಮ್ಮನ ಮೃದುವಾದ ಕೈಗಳನ್ನು ತಮ್ಮ ಕಡೆಗೆಳೆದುಕೊಂಡರು.

ಮಲ್ಲಮ್ಮ ನಾಚಿದಳು.

"ಮದುವೆಯಾಗಿ ವರ್ಷದ ಮೇಲಾದರೂ ನನ್ನೊಡನೆ ನಾಚಿಕೆಯೇ?'' ಎಂದು ಗೌಡರು ತಾವೇ ಹತ್ತಿರ ಸರಿದರು.

ಅಂದು ಗೌಡರಿಗೆ ಯುವಕನ ಉತ್ಸಾಹ ಎಲ್ಲಿಂದಲೋ ಬಂದು ಸೇರಿತ್ತು.

"ಮಲ್ಲಿಯೊಡನೆ ಬಹಳ ದಿನಗಳಿಂದಲೂ ನಾನೇಕೆ ಬಿಂಕವಾಗಿ ವರ್ತಿಸಿದೆ? ನಾನೇನೋ ಮುದುಕನಾದರೂ ಮಲ್ಲಿ ಇನ್ನೂ ಹುಡುಗಿಯಲ್ಲವೆ?

ಕೇವಲ ಹೆಸರಿಗೆ ಮಾತ್ರ ಮದುವೆಯಾಗಿ ಹೆಂಡತಿಯ ಮನೋವಿಕಾಸಕ್ಕೆ ಅವಕಾಶ ಕೊಡದವನು ನಿಜವಾದ ಗಂಡಸೇ?

ಅದೂ ಲೋಕಸುಂದರಿಯಂಥ ಹೆಣ್ಣನ್ನು ಪಡೆದು ದೂರೀಕರಿಸು ವುದು ನ್ಯಾಯವೇ? ಅಥವಾ ಮಕ್ಕಳಾಗಲಿಲ್ಲವೆಂದು ಚಿಂತಿಸುತ್ತ ಹೋದರೆ ಇರುವ ಎರಡು ಜೀವವೂ ವಿರಸಕ್ಕೀಡಾಗಿ ಸೊರಗುವುದಿಲ್ಲವೇ?

ಅಂದ ಮೇಲೆ ಮಲ್ಲಿಯ ಸೌಂದರ್ಯ ಪುಷ್ಟಿಗೆ ಅಡ್ಡಿಯಾದವನು ನಾನೇ ಅಲ್ಲವೇ?

ಆ ಹಿಂಜರಿತಕ್ಕೆ ಕಾರಣವಾದರೂ ಏನು?

ನನ್ನ ಆಸ್ತಿಯ ಮೋಹವೊಂದೆ ತಾನೇ! ಅದನ್ನು ನಿವಾರಿಸುವ ಬಗೆ ಹೇಗೆ?" ಎಂದು ಗೌಡರು ತಮ್ಮ ಮನಸ್ಸಿನ ಪ್ರಶ್ನಾಕಾರಕ್ಕೆ ಉತ್ತರ ನೀಯಲು ಅಸಮರ್ಥರಾದರು.

ಆದರೆ ಮರುಕ್ಷಣದಲ್ಲೇ ಗೌಡರ ಮನಸ್ಸಿನ ಪ್ರಶ್ನೆ ದುರ್ಬಲವಾ ಗುತ್ತ ಬಂದು ಮಲ್ಲಿಯ ಸಾನ್ನಿಧ್ಯದಲ್ಲಿ ಕರಗಿಹೋಯಿತು.

ಮಲ್ಲಿ ಹತ್ತಿರ ಸರಿದಂತೆಲ್ಲ ಗೌಡರಿಗೆ ಇಹಲೋಕದ ಪ್ರಜ್ಞೆಯೇ ಇಲ್ಲದಂತಾಯಿತು. ಗೌಡರ ದೇಹದಲ್ಲಿ ಬಿಸಿರಕ್ತ ಹರಿಯತೊಡಗಿತು. ಕಣ್ಣು ಮಂಜಾಯಿತು. ಕೈಕಾಲು ನಡುಗಿದವು.

ಇದ್ದಕ್ಕಿದ್ದಂತೆ ಪಕ್ಕದ ಕೊಠಡಿಯಲ್ಲಿ ಯಾವುದೋ ವ್ಯಕ್ತಿ ಬಾಗಿಲು ಹೊಡೆದಂತೆ ಸದ್ದಾಯಿತು. ಸ್ವಲ್ಪ ಹೊತ್ತು ನಿಶ್ಶಬ್ದವಾಗಿ ಮತ್ತೆ ಶುರು ವಾಯಿತು. ರಾತ್ರಿಯ ವೇಳೆಯಲ್ಲಿ ಗೌಡರನ್ನೆಬ್ಬಿಸುವ ಭೂಪ ಹಳ್ಳಿ ಯಲ್ಲೇ ಇರಲಿಲ್ಲ. ಆದ್ದರಿಂದಲೇ ಆ ಸದ್ದು ಆಶ್ಚರ್ಯಕರವಾಗಿತ್ತು.

ಮಲ್ಲಮ್ಮ ಹೆದರಿದವಳಂತೆ ನಟಿಸಿದಳು.

ಮೊದಲೇ ಮಲ್ಲಮ್ಮನಿಗೆ ಮಾತು ಕೊಟ್ಟಂತೆ ರಂಗಣ್ಣ ಮಧ್ಯರಾತ್ರಿ ಯಲ್ಲಿ ಗೌಡರ ಮನೆ ಸೇರಿದ್ದ. ರಂಗಣ್ಣನು ಸದ್ದಾಗದಂತೆ ಬರಲು ಮನೆಯ ಮುಂದಿನ ಬಾಗಿಲ ಅಗಳಿಯನ್ನು ಹಾಕದೆ ಸುಮ್ಮನೆ ಸರಿದಿರು ವಂತೆ ಮಲ್ಲಮ್ಮ ಏರ್ಪಾಟು ಮಾಡಿದ್ದಳು. ಆದರೂ ಮಲ್ಲಮ್ಮ ಗೌಡರ ಮುಂದೆ ತುಂಬ ಹೆದರಿದವಳಂತೆ ನಟಿಸಿ ಸೀರೆಯ ಸೆರಗು ಜಾರುತ್ತಿದ್ದರೂ ಲಕ್ಷಿಸದೆ ಸುಮ್ಮನೆ ಕುಳಿತುಬಿಟ್ಟಳು!

ತಕ್ಷಣ ತನ್ನ ಕೈಗಳೆರಡನ್ನೂ ಚಾಚಿ ಗೌಡರನ್ನು ತಬ್ಬಿಕೊಂಡಳು.

ಮಲ್ಲಮ್ಮನ ಮನಮೋಹಕ ಸ್ಪರ್ಶದಿಂದ ಗೌಡರಿಗೆ ಸ್ವರ್ಗವೇ ಭೂಮಿಗಿಳಿದಂತೆ ಭಾಸವಾಯಿತು. ಮಲ್ಲಮ್ಮ, "ಯಾವನೋ ಕಳ್ಳ ನುಗ್ಗಿರಬಹುದು!" ಎಂದು ಮೆಲ್ಲಗೆ ಗೌಡರ ಕಿವಿಯಲ್ಲಿ ಹೇಳಿದಳು.

ಮಲ್ಲಮ್ಮನಾಡುತ್ತಿದ್ದ ಮಾತುಗಳು ಗೌಡರ ಗಮನಕ್ಕೆ ಬರಲಿಲ್ಲ. ಅವರ ಪ್ರಪಂಚವೇ ಬೇರೆಯಾಗಿತ್ತು. ಬಿಸಿಯುಸಿರು ಒಂದೇ ಸಮನೆ ಕೆಮ್ಮಿನ ಮಧ್ಯದಲ್ಲೂ ನುಗ್ಗುತ್ತಿತ್ತು. ತಮ್ಮ ಸ್ಥಾನಮಾನಗಳ ಕಡೆ ಲಕ್ಷ್ಯ ಕೊಡದೆ ಗೌಡರು ಯಾವುದೋ ಶಕ್ತಿಯ ಅಡಿಯಾಳಾಗಿದ್ದರು; ಸ್ವಾಭಾವಿಕವಲ್ಲದ ಯೌವನವನ್ನು ಪಡೆದು ತಮ್ಮನ್ನಾವರಿಸಿದ್ದ ಹೆಣ್ಣಿನ ಪ್ರಭಾವಕ್ಕೊಳಗಾಗಿದ್ದರು.

ಮತ್ತೆ ಮಲ್ಲಮ್ಮ, "ಅಯ್ಯೋ, ಸದ್ದು ಜಾಸ್ತಿಯಾಯಿತು. ನೆಲಮಾಳಿಗೆಯ ಹತ್ತಿರವೇ ಸದ್ದು!" ಎಂದು ಗೌಡರನ್ನು ಮತ್ತಷ್ಟು ಬಿಗಿಯಾಗಿ ಹಿಡಿದುಕೊಂಡಳು.

ತಕ್ಷಣ ಗೌಡರು, "ಯಾವುದೋ ಗಾಳಿಯ ಸದ್ದಿಗೇಕೆ ಹೆದರುವೆ? ನೆಲಮಾಳಿಗೆಯನ್ನು ಯಾವ ಭೂಪ ತೆಗೆಯಬಲ್ಲ, ಮಲ್ಲಿ? ಅದರ ಬೀಗದಕೈ ನನ್ನ ಬಳಿ ಇರುವಾಗ" ಎಂದರು. ಅಷ್ಟರಲ್ಲೇ ಸ್ವಲ್ಪ ದೂರ ಸರಿದಿದ್ದ ಮಲ್ಲಮ್ಮನನ್ನು ಮತ್ತೆ ತಮ್ಮ ಬಳಿಗೆಳೆದುಕೊಂಡರು.

"ಹಾಗಾದರೆ ಬೀಗದ ಕೈ ಎಲ್ಲಿ?" ಎಂದು ಮಲ್ಲಮ್ಮ ಕೇಳೇಬಿಟ್ಟಳು.

"ಬೀಗದ ಕೈ ಇಲ್ಲೇ ಇದೆ. ಎದುರಿಗೆ ಮಂಚದಂತೆ ಕಾಣುತ್ತಿದೆಯಲ್ಲ, ಅಲ್ಲಿದೆ. ಅದು ಮಂಚವಲ್ಲ. ಎರಡು ಹಳೆ ಪೆಟ್ಟಿಗೆಗಳನ್ನು ಒಟ್ಟಿಗೆ ಸೇರಿಸಿದೆ, ಅಷ್ಟೆ. ಅದರೊಳಗೆ ಬೀಗದ ಕೈ ಇದೆ. ಮೇಲೆ ಹೇರಿರುವ ಕಬ್ಬಿಣದ ಸಾಮಾನುಗಳನ್ನು ತೆಗೆದು ಬೀಗದ ಕೈಯನ್ನು ಸಂಪಾದಿಸಲು ಯಾವನಿಗೂ ಸಾಧ್ಯವಾಗದು. ಸುಮ್ಮನೇಕೆ ಹೆದರುವೆ? ನನ್ನ ಮನೆಗೆ ಯಾವ ಕಳ್ಳನೂ ಬರಲಾರ" ಎಂದು ಮೇಲುಸಿರಿನಿಂದ ಗೌಡರು ಮಾತನಾಡಿದರು.

ಇನ್ನು ತನ್ನ ಪಿತೂರಿ ಫಲವಾಯಿತೆಂದು ಮಲ್ಲಮ್ಮ ತನ್ನೊಳಗೇ ಸಂತೋಷಪಟ್ಟಳು. ಪಕ್ಕದ ಕೊಠಡಿಯಲ್ಲಿ ಮಾತು ಕೇಳುತ್ತಿದ್ದ ರಂಗಣ್ಣ ನಿಗೂ ಸಂತೋಷವಾಗಿ ಸದ್ದು ಮಾಡುವುದನ್ನು ನಿಲ್ಲಿಸಿ ಮೆಲ್ಲಗೆ ಹೊರ ಹೊರಟನು.

ಇತ್ತ ಮಲ್ಲಮ್ಮ ತನ್ನನ್ನು ಬಳಸಿದ್ದ ಗಂಡನ ಎರಡು ಕೈಗಳನ್ನೂ ಬಿಸುಟು ದೂರ ಹೋಗಿ ಮಲಗಿದಳು.

ಗೌಡರು ಮತ್ತೆ ಮಲ್ಲಮ್ಮನನ್ನು ಹತ್ತಿರ ಕರೆಯಲು ಸಮರ್ಥರಾಗಿ ರಲಿಲ್ಲ. ಬೆಳಗಿನ ಪ್ರಯಾಣದಿಂದ ಆಯಾಸಗೊಂಡಿದ್ದ ದೇಹ ನಿದ್ದೆ ಯನ್ನು ಬಯಸಿತ್ತು. ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲವಲ್ಲಾ ಎಂದು ತಮ್ಮನ್ನು ತಾವೇ ಶಪಿಸಿ ಮಲಗಿದರು.

ಮಾರನೆಯ ದಿನ ಬೆಳಗ್ಗೆ ಗೌಡರಿಗೆ ಅಮಲ್ದಾರರಿಂದ ಕರೆ ಬಂದಿತು. ಕೆಲವು ತಾಲ್ಲೂಕುಗಳಿಗೆ ಸರ್ಕಾರದವರು ಹೊಸ ಯೋಜನೆ ಯನ್ನು ತಯಾರಿಸಿದ್ದರು. ಅದರ ಸಾಧ್ಯಾಸಾಧ್ಯತೆಯನ್ನು ಚರ್ಚಿಸಲು ಅಮಲ್ದಾರರು ಗೌಡರನ್ನು ಊರಿಗೆ ಬರಬೇಕೆಂದು ಹೇಳಿಕಳಿಸಿದ್ದರು.

ಅಂದೇ ಮಧ್ಯಾಹ್ನ ಗೌಡರು ತಮ್ಮ ಗುಮಾಸ್ತ ಶಿವಣ್ಣನನ್ನೂ ಕರೆದುಕೊಂಡು ಊರಿಗೆ ಹೊರಟರು.

"ಇನ್ನು ಎರಡು ಮೂರು ದಿನಗಳಲ್ಲಿ ಬಂದುಬಿಡುತ್ತೇನೆ. ನಮ್ಮ ಶಿವಣ್ಣನ ಮಗ ರಂಗನಿಗೆ ಹೇಳಿದ್ದೇನೆ. ಅವನು ಮನೆ ನೋಡಿಕೊಳ್ಳು ತ್ತಾನೆ. ಏನೂ ಹೆದರಬೇಡ" ಎಂದು ಗೌಡರು ಮಲ್ಲಮ್ಮನಿಗೆ ಹೇಳಿ ಹೊರಟರು.

ಗೌಡರಾಡಿದ ಮಾತು ತಂದೆಯೊಬ್ಬ ಮುದ್ದು ಮಗಳಿಗೆ ಸಮಾಧಾನ ಹೇಳುವಂತಿತ್ತು. ಇತ್ತೀಚೆಗೆ ಗೌಡರು ಮಲ್ಲಮ್ಮನಲ್ಲಿ ಕಾಮವಾಸನೆ ಯಿಲ್ಲದ ವಿಶ್ವಾಸವಿಟ್ಟಿದ್ದರು.

ಮನೆಯಲ್ಲಿ ಗೌಡರಿಲ್ಲದಿದ್ದುದರಿಂದ ಮಲ್ಲಮ್ಮ ಹಕ್ಕಿಯಂತೆ ಹಾರಾ ಡಿದಳು. ಇತ್ತ ರಂಗಣ್ಣನಿಗೂ ಶಿವಣ್ಣ ಇಲ್ಲದಿದ್ದುದು ತುಂಬ ಸಮಂಜಸ ವಾಗಿತ್ತು.

ಮಲ್ಲಮ್ಮ ರಂಗಣ್ಣ ಇಬ್ಬರೂ ಸೇರಿ ಕಬ್ಬಿಣದ ಸಾಮಾನುಗಳನ್ನು ಕೆಳಗಿಳಿಸಿದರು. ಮಂಚದಂತಿದ್ದ ಎರಡು ಪೆಟ್ಟಿಗೆಗಳನ್ನೂ ಬೇರ್ಪಡಿಸಿದರು.

ರಂಗಣ್ಣ ತುಂಬ ಸಾಹಸದಿಂದ ಅದರ ಮುಚ್ಚಳವನ್ನು ಮೇಲಕ್ಕೆತ್ತಿದ. ಒಳಗಡೆ ಒಂದು ಸಣ್ಣ ಡಬ್ಬಿ ಇತ್ತು. ಅದನ್ನು ತೆಗೆದು ನೋಡಿದರೆ ಬೀಗದ ಕೈ!.

ಬೀಗದ ಕೈ ಕೆಳಗಡೆ ಅರ್ಧ ಗೆಜ್ಜಲು ಹಿಡಿದು ಜೀರ್ಣವಾಗಿದ್ದ ಒಂದು ಪತ್ರ ಇತ್ತು. ರಂಗಣ್ಣ ತೆಗೆದು ನೋಡಿದ. ಅದರಲ್ಲಿ ಆಸ್ತಿಯ ವಿವರಗಳು ಬರೆದಿದ್ದವು. ಮಲ್ಲಮ್ಮನಿಗೆ ಓದಿ ಹೇಳಿದ. ಮಲ್ಲಮ್ಮ ಉಬ್ಬಿಹೋದಳು.

ಇಬ್ಬರೂ ಸೇರಿ ನೆಲಮಾಳಿಗೆಯ ಬೀಗವನ್ನು ತೆಗೆದರು. ಗೌಡರ ವಂಶದವರೆಲ್ಲ ಸಂಪಾದಿಸಿದ್ದ ನಾಣ್ಯರಾಶಿ ಅಲ್ಲಿತ್ತು. ನಾಣ್ಯಕ್ಕಿಂತಲೂ ಬೆಲೆ ಬಾಳುವ ಬಂಗಾರದ ಗಟ್ಟಿಗಳಿದ್ದವು.

ಎಲ್ಲವನ್ನೂ ರಂಗಣ್ಣ ಸಣ್ಣ ಸಣ್ಣ ಪೆಟ್ಟಿಗೆಗಳಲ್ಲಿ ತುಂಬಿದ. ಅವನು ಬಹಳ ಆಯಾಸಗೊಂಡಿದ್ದ.

ಮಲ್ಲಮ್ಮ ರುಚಿ ರುಚಿಯಾದ ತಿಂಡಿಗಳನ್ನು ತಂದಿಟ್ಟಳು.

ರಂಗಣ್ಣ ಮೊದಲು ಮಲ್ಲಿಮ್ಮನ ಬಾಯಿಗೆ ತುರುಕಿದ. ಮಲ್ಲಮ್ಮನೂ ರಂಗಣ್ಣನ ಬಾಯಿಗೆ ತುರುಕಲು ಹೊರಟಾಗ ಅವಳ ಕೈ ಬೆರಳನ್ನು ರಂಗಣ್ಣ ಮೆಲ್ಲಗೆ ಕಚ್ಚಿದ. 'ತುಂಬಾ ನೋವಾದಂತೆ ಮಲ್ಲಮ್ಮ ನಟಿಸಿದಳು.

ಕೈಯನ್ನು ವಾಸಿಮಾಡುವ ನೆಪದಿಂದ ರಂಗಣ್ಣ ಹತ್ತಿರ ಸರಿದ. ಮಲ್ಲಮ್ಮನಿಗೆ ಅದೇ ಬೇಕಾಗಿತ್ತು. ಇಬ್ಬರೂ ಸರಸವಾಡಲು ಶುರು ಮಾಡಿದರು.

"ಇವತ್ತು, ನೋಡು, ನೀನು ಸರಿಯಾದ ಶ್ರೀಮಂತ ಹುಡುಗನ ಹೆಂಡತಿ...." ಎಂದನು ರಂಗಣ್ಣ.

"ಏನು, ಬರಿಯ ಉಪಚಾರದ ಮಾತೇ ಆಡುತ್ತಿ. ಇದನ್ನೆಲ್ಲಾ ಈಗ ಏನು ಮಾಡುವುದು ?" ಎಂದು ಮಲ್ಲಮ್ಮ ರಂಗಣ್ಣನನ್ನು ಎಚ್ಚರಿಸಿದಳು.

"ಆಗಲಿ; ಗೌಡರು ಬರುವುದರೊಳಗೆ ಇವೆಲ್ಲಾ ದೊಡ್ಡೂರಿನಲ್ಲಿರುತ್ತೆ. ಯಾಕೆ ಹೆದರುವೆ ?" ಎಂದು ರಂಗಣ್ಣ ಯಾರ ಭಯವೂ ಇಲ್ಲದೆ ಎದ್ದು ನಿಂತಿದ್ದ ಮಲ್ಲಮ್ಮನನ್ನು ಹಿಂದಿನಿಂದೆಳೆದು ಉದ್ರೇಕಿಸಿದ. ಮಲ್ಲಮ್ಮ ಅದೇ ರಭಸದಿಂದ ರಂಗಣ್ಣನ ಎದೆಯ ಮೇಲೆ ಬಿದ್ದಳು.

ತಕ್ಷಣ ಮುಂದಿನ ಬಾಗಿಲು 'ಫಟಾರ್' ಎಂದು ಕೆಳಕ್ಕೆ ಬಿತ್ತು. ನೆಲವೇ ನಡುಗಿದಂತಾಯಿತು.

"ವಂಶದ ಹೆಸರನ್ನೇ ಹಾಳುಮಾಡಿದ ರಾಕ್ಷಸಿ! ಇನ್ನು ಒಂದು ಕ್ಷಣವೂ ನಿಲ್ಲದೆ ಗಂಟು ಮೂಟೆ ಕಟ್ಟು ನಿನ್ನಂಥ ನೀಚಳನ್ನು ಮದುವೆಯಾದದ್ದು ನನ್ನ ತಪ್ಪು.

ಗೌಡರ ಹೆಂಡತಿಯಾಗಿ ಮತ್ತೊಬ್ಬನನ್ನು ಕಂಡು ಬಾಯಿಬಿಡುವ ನೀನು ಸೂಳೆಯಲ್ಲದೆ ಮತ್ತಾರು !?...." ಎಂದು ಗೌಡರು ಮಲ್ಲಮ್ಮನ ಕೆನ್ನೆಗೆ ಬಿಗಿಯಲು ಕೈಯೆತ್ತಿದರು.

ಗೌಡರನ್ನು ಕಂಡ ತಕ್ಷಣವೇ ಮಲ್ಲಮ್ಮನ ಮನಸ್ಸು ಝುಗ್ಗೆಂದಿತು. ದೇಹ ನಡುಗತೊಡಗಿತು.

ಎರಡು ಮೂರು ದಿನಾಗಳಾಗುತ್ತೆಂದು ಹೇಳಿದ ಗೌಡರು ಮಾರನೆಯ ರಾತ್ರಿಯೇ ಬಂದುಬಿಟ್ಟಿದ್ದರು. ಗೌಡರಿಗೂ ಅಮಲ್ದಾರರಿಗೂ ಪರಸ್ಪರ ವಿಶ್ವಾಸವಿದ್ದ ಕಾರಣ ಗೌಡರ ಕೆಲಸ ಯಾವ ತಕರಾರೂ ಇಲ್ಲದೆ ಬೇಗ ಮುಗಿದಿತ್ತು. ಅವರ ಜೊತೆಯಲ್ಲಿ ಶಿವಣ್ಣನೂ ಬಂದಿದ್ದನು.

ತನ್ನ ಮಗ ಗೌಡರ ಹೆಂಡತಿಯೊಡನಿದ್ದುದನ್ನು ಕಂಡು ಶಿವಣ್ಣನಿಗೆ ಎರಡು ರೀತಿಯಲ್ಲೂ ಹೆದರಿಕೆಯಾಯಿತು. ಒಂದು ತನ್ನ ಮಗನ ಮೇಲ್ವಿಚಾರಣೆಯಲ್ಲಿ ಗೌಡರ ಮನೆ ಹಾಳಾದದ್ದು. ಇನ್ನೊಂದು ತನ್ನ ಜೀವನಕ್ಕೆ ಸಂಚುಕಾರ ಬರುವ ಪ್ರಸಂಗ ಬರಬಹುದೆಂಬ ಕಳವಳ.

ಗೌಡರ ಮೇಲೆತ್ತ ಕೈ ಮಲ್ಲಮ್ಮನಿಗೆ ತಾಗದಂತೆ ರಂಗಣ್ಣ ಮಲ್ಲಮ್ಮ ನನ್ನು ಹಿಂದಕ್ಕೆ ತಳ್ಳಿದ. ತಕ್ಷಣ ಗೌಡರ ಕೈ ಕಬ್ಬಿಣದ ಪೆಟ್ಟಿಗೆಗೆ ತಾಕಿತು.

ಶಿವಣ್ಣ ಪೆಟ್ಟಿಗೆಯನ್ನು ತೆಗೆದು ನೋಡಿದ. ಚಲ್ಲಾಪಿಲ್ಲಿಯಾಗಿದ್ದ ಸಾಮಾನುಗಳನ್ನು ನೋಡಿ ಗೌಡರು ತಕ್ಷಣ ಮೂರ್ಛಿತರಾದರು.

ಇದೇ ಸಮಯ ಕಾಯುತ್ತಿದ್ದ ರಂಗಣ್ಣ ವೈದ್ಯರನ್ನು ಕರೆಯುವ ನೆಪದಲ್ಲಿ ಗಾಡಿ ಹತ್ತಿದ. ಕಣ್ಣು ನೋಟದಿಂದಲೇ ಅರ್ಥಮಾಡಿಕೊಂಡ ಮಲ್ಲಮ್ಮ ತಾನೂ ಓಡಿಬಂದಳು. ರಂಗಣ್ಣ ಅವಳೆರಡು ಕೈಗಳನ್ನೂ ಮೇಲಕ್ಕೆತ್ತಿ ಕೂರಿಸಿದ. ಕುದುರೆ ವೇಗವಾಗಿ ಓಡತೊಡಗಿತು....

ಇತ್ತ ಶಿವಣ್ಣ ಗೌಡರ ಸ್ಥಿತಿನೋಡಿ ಹೆದರಿದ. ಮೂರ್ಛೆ ಬಿದ್ದ ಗೌಡರು ಮತ್ತೆ ಪ್ರಜ್ಞೆ ಹೊಂದಲಿಲ್ಲ. ತಮ್ಮಲ್ಲಿ ತಾವೇ ಅಸಂಬದ್ಧವಾಗಿ ಮಾತನಾಡಿಕೊಳ್ಳುತ್ತಿದ್ದರು.

ದಿನೇ ದಿನೇ ಗೌಡರ ಸ್ಥಿತಿ ಚಿಂತಾಜನಕವಾಯಿತು. ಜ್ವರ ಹೆಚ್ಚುತಿತ್ತು. ವೈದ್ಯರು ಕೂಡ ಹೆದರಿದರು.

ರಾತ್ರಿಯ ವೇಳೆ ಗೌಡರು ಶಿವಣ್ಣನನ್ನು ಕರೆದು, "ಅಯ್ಯೋ, ನನ್ನ ಬೀಗದ ಕೈ ಕೊಡಿಸು. ಅಪ್ಪ ತಾತ ಮುತ್ತಜ್ಜರಿಗೆಲ್ಲಾ ಅನ್ಯಾಯ ಮಾಡಿದೆನಲ್ಲಾ!" ಎಂದು ಕೂಗುತ್ತಿದ್ದರು.

ತನ್ನ ಮಗನ ಅಪರಾಧವನ್ನು ಕಣ್ಣಾರೆ ಕಂಡ ಶಿವಣ್ಣ ತುಂಬ ದುಃಖಿಸಿದ. ಗೌಡರ ಸ್ಥಿತಿ ಕಂಡು ತಾನೂ ಮಗುವಿನಂತೆ ಅತ್ತ.

ಕೆಲವುದಿನಗಳ ನಂತರ ರಂಗಣ್ಣ ಮಲ್ಲಮ್ಮನನ್ನು ಹಾರಿಸಿಕೊಂಡು ದೊಡ್ಡೂರು ಸೇರಿದ ಸಮಾಚಾರ ಶಿವಣ್ಣನಿಗೂ ಮುಟ್ಟಿತು. ಇನ್ನು ತಾನೇಕೆ ಜೀವಿಸಬೇಕೆಂದು ಶಿವಣ್ಣ ಕೆರೆಯ ಕಡೆ ನಡೆದ.

"ಏಕೆ? ಎಲ್ಲಿಗೆ ಹೋಗುವೆ? ಮಗ ಕಳ್ಳನೆಂದು ಹೆದರುವೆಯಾ? ಇನ್ನೇನು, ಗೌಡರು ಸಾಯುವುದರಲ್ಲಿದ್ದಾರೆ!

ರಂಗಣ್ಣ ನೆಲಮಾಳಿಗೆಯ ಆಸ್ತಿಯನ್ನೆಲ್ಲಾ ಪೂರ್ತಿ ಸಾಗಿಸಿಲ್ಲ. ಉಳಿದಿರುವುದನ್ನು ನೀನೇ ತೆಗೆದುಕೊ ಆಮೇಲೆ ನೀನೇ ಹಳ್ಳಿಯ ನಾಯಕನಾಗುವಿ. ಆ ಸುಖವನ್ನು ಬಿಟ್ಟು ಸುಮ್ಮನೆ ದುಃಖವನ್ನೇಕರ ಸುವೆ ?...." ಎಂದು ಶಿವಣ್ಣನ ಮನಸ್ಸೊಂದು ಹೇಳಿತು.

ಆದರೆ ಅದಕ್ಕಿಂತ ಬಲವಾದ ಮತ್ತೊಂದು ಮನಸ್ಸು, "ಎಲೋ, ನಾನು ಸುಖದ ಹಾದಿ ಹಿಡಿಯಬೇಕೇ ? ಗೌಡರೇ ಮುಟ್ಟದ ಕಾಸನ್ನು ನಾನು ಮುಟ್ಟಬೇಕೇ ? ಇದು ಎಂದಿಗೂ ಸಲ್ಲದು. ಉಂಡ ಮನೆಗೆರಡು ಬಗೆಯುವುದು ಬೇಡ...." ಎಂದು ಎಚ್ಚರಿಸಿತು. ತಕ್ಷಣ ಶಿವಣ್ಣ ಹಿಂತಿರುಗಿದನು.

ಗೌಡರು ಇನ್ನೇನು ಮೃತ್ಯು ಶಯ್ಯೆಯ ಮೇಲಿದ್ದಾಗ ಶಿವಣ್ಣ ಬಂದ.

"ಅಯ್ಯೋ, ಶಿವಣ್ಣಾ, ನನ್ನ ಬೀಗದ ಕೈ ಯಾರು ಕದ್ದರು ? ನಿನ್ನ ಮಗನೇ ? ನಿನ್ನ ಮಗ ಆ ಕೆಲಸ ಮಾಡಿದನೇ ?

ಇಲ್ಲ; ಮಲ್ಲಿಯೇ ಕದ್ದು ಕೊಟ್ಟಿರಬೇಕು. ಹೋಗಲಿ ಬಿಡು ; ಇಬ್ಬರು ಕಳ್ಳರು. ನಿನ್ನ ಬೀಗದ ಕೈಯನ್ನೇ ಕೊಡು...." ಎನ್ನುತ್ತಾ ಗೌಡರು ಜ್ಞಾನವಿಲ್ಲದ ಮಾತುಗಳನ್ನಾಡುತ್ತಿದ್ದರೂ ಅದರಲ್ಲಿ ಅರ್ಥವಿದ್ದಿತು.

'ಬೀಗದ ಕೈ' 'ಬೀಗದ ಕೈ' ಎನ್ನುತ್ತಿದ್ದರೇ ಹೊರತು ಮಲ್ಲಿಯ ವಿಷಯವಾಗಿ ಒಂದು ತಾತ್ಸಾರದ ಮಾತೂ ಆಡುತ್ತಿರಲಿಲ್ಲ. ತಮ್ಮ ವಂಶದವರೆಲ್ಲ ಜೋಪಾನವಾಗಿಟ್ಟುಕೊಂಡಿದ್ದ ನೆಲಮಾಳಿಗೆ ತಮ್ಮ ಕಾಲದಲ್ಲಿ ಹೀಗಾಯಿತೇ ಎಂಬುವ ಚಿಂತೆಯೊಂದೇ ಗೌಡರಲ್ಲಿದ್ದಂತೆ ಕಂಡಿತು. ಶ್ವಾಸ ಜೋರಾಗಿ ಎಳೆಯಲಾರಂಭಿಸಿತು. ಆಗಲೂ ಕೂಡ ಗೌಡರು, "ಶಿವಣ್ಣಾ , ಬೀಗದ ಕೈ ಕೊಡು. ಸ್ವರ್ಗದ ಬಾಗಿಲು ತೆಗೆಯಬೇಕು...." ಎಂದು ಗಟ್ಟಿಯಾಗಿ ಕೂಗುತ್ತ ಮೇಲಕ್ಕೆದ್ದು ತೊಪ್ಪನೆ ಕೆಳಕ್ಕೆ ಬಿದ್ದರು.

ಗೌಡರ ಜೀವ ಹಾರಿಹೋಯಿತು. ಶಿವಣ್ಣ ಹುಚ್ಚನಂತೆ ಅತ್ತ. ಕಡೆಗೆ ಅವನೇ ನಿಂತು ಎಲ್ಲ ಅಂತ್ಯ ಕಾರ್ಯಗಳನ್ನೂ ಮುಗಿಸಿದ.

ಅಂದಿನಿಂದ ಹಳ್ಳಿಯ ಕಳೆ ಕುಂದಿತು. ಔದಾರ್ಯಕ್ಕೆ ಹೆಸರಾಗಿದ್ದ ಹಳ್ಳಿ ಹೆಸರಿಲ್ಲದಂತಾಯಿತು. ಹಿಂದಿನ ವರ್ಷ ಶಿವಣ್ಣನೂ ತೀರಿ ಹೋದ. ಕೇಳುವವರಿಲ್ಲದೆ ಹಳ್ಳಿ ಪಾಳು ಬಿದ್ದಿತು.

ನಾನು ಮೊದಲಿನಿಂದಲೂ ಗೌಡರ ಜಮೀನಿನ ಮೇಲ್ವಿಚಾರಕನಾಗಿದ್ದೆ. ಅವರ ಭೂಮಿಯಲ್ಲಿಯೇ ನಾನು ಹುಟ್ಟಿ ಬೆಳೆದೆ. ಬೇಕಾದ ಹಾಗೆ ಗೌಡರು ನನಗೆ ಸಹಾಯ ನೀಡುತ್ತಿದ್ದರು. ಸ್ವಲ್ಪ ಓದು ಬರಹ ಕಲಿತಿದ್ದ ನನ್ನನ್ನು ಗೌಡರು ವಿಶ್ವಾಸದಿಂದ ಕಾಣುತ್ತಿದ್ದರು. ಅಂಥವರನ್ನು ಕಳೆದುಕೊಂಡು ನಿರ್ಭಾಗ್ಯನಾಗಿದ್ದೇನೆ.

ಈಗ ಹಳ್ಳಿಯಲ್ಲಿರುವವನು ನಾನೊಬ್ಬನೇ ಹಳ್ಳಿಯ ಕಥೆಯನ್ನು ನಿಮ್ಮಂಥವರಿಗೆ ತಿಳಿಸಲು ಉಳಿದಿದ್ದೇನೆಯೊ ಏನೊ. ಅಂತೂ ಮೊದಲ ಬಾರಿ ಕಥೆ ಹೇಳಿದ್ದು ನಿಮ್ಮ ಬಳಿಯಲ್ಲಿಯೇ...." ಎಂದು ಬೈರಪ್ಪ ತನ್ನ ಹಳ್ಳಿ ಹಾಳಾದ ರೀತಿಯನ್ನು ಎಳೆ ಎಳೆಯಾಗಿ ಬಿಡಿಸಿ ಹೇಳಿದ.

ಬೈರಪ್ಪ ಹೇಳಿದ ಕಥೆ ವಿಚಿತ್ರವಾಗಿತ್ತು. ರಂಗಣ್ಣ ಮಲ್ಲಮ್ಮರ ಸರಸ ವಿರಸಗಳನ್ನು ತಾನೇ ಎದುರಿಗೆ ಕಂಡಂತೆ ಹೇಳಿದ್ದ. ಅವರ ಏಕಾಂತದ ಸಂಭಾಷಣೆಗಳನ್ನು ಬೈರಪ್ಪ ವರ್ಣಿಸಿದಾಗಲಂತೂ ನನಗೆ ಆಶ್ಚರ್ಯವಾಗಿತ್ತು. ಆದರೂ ಬೈರಪ್ಪ ಕಥೆಯನ್ನು ನಮ್ರತೆಯಿಂದ ನಿರೂಪಿಸಿದ್ದ. ತನ್ನ ಹಳ್ಳಿ ಹಾಳಾದ ಬಗ್ಗೆ ಬೈರಪ್ಪನಿಗೆ ತುಂಬ ಅನುಕಂಪನೆ ಇತ್ತು. ಅದರ ಒತ್ತಡದಿಂದಲೇ ಅವನು ಕಥೆಯನ್ನು ಬಿಡಿಸಿ ಬಿಡಿಸಿ ಹೇಳಿದ್ದ. ಕೆಲವು ವೇಳೆ ಅವನು ಘಟನೆಗಳನ್ನು ದೊಡ್ಡದಾಗಿ ಮಾಡಿ ಹೇಳಿರಬಹುದು. ಅದೂ ಅಲ್ಲದೆ ಬೈರಪ್ಪ ಸ್ವಲ್ಪ ಓದು ಬರಹ ಕಲಿತವನಂತೆ ಕಾಣುತ್ತಿದ್ದ. ಆದರೆ ಯಾವ ಕಪಟ ಪ್ರವೃತ್ತಿಯೂ ಅವನ ಮುಖಭಾವದಲ್ಲಿರಲಿಲ್ಲ. ಅವನು ಗೌಡರಲ್ಲಿಟ್ಟಿದ್ದ ಅಚಲ ನಿಷ್ಠೆ ಮರ್ಮಭೇಧಕವಾಗಿತ್ತು. ಎಷ್ಟಾದರೂ ಬೈರಪ್ಪ ಹಳ್ಳಿಯವನು.

ನನ್ನಲ್ಲಿ ನಾನೇ ಯೋಚಿಸಿದೆ. ಅಂತೂ ಗೌಡರು ಬೀಗದ ಕೈಗೆ ಕೊಟ್ಟ ಪ್ರಾಮುಖ್ಯತೆ ಒಮ್ಮೆ ತಮಾಷೆಯಾಗಿ ಕಾಣಬಹುದು: ಆದರೆ ಅದರಿಂದ ಅವರನ್ನು ಜಿಪುಣರೆನ್ನಬಹುದೇ?

ಅವರಿದ್ದಾಗ ಅವರಂಥ ಉದಾರಿಗಳು ಇಡೀ ಹಳ್ಳಿಯಲ್ಲೇ ಯಾರೂ ಇರಲಿಲ್ಲವೆಂದು ಬೈರಪ್ಪ ಹೇಳಿದನಲ್ಲ!

ವಂಶೋದ್ಧಾರಕ್ಕಾಗಿ ಮೂರು ಮದುವೆ ಮಾಡಿಕೊಂಡರೂ ಅದು ಸಾಧ್ಯವಾಗದಿದ್ದಾಗ ಮಲ್ಲಿಯ ಮೇಲೆ ಮರುಕಪಟ್ಟ ಗೌಡರು ಭಾವ ಜೀವಿಯಲ್ಲವೇ?

ಮಲ್ಲಮ್ಮ ರಂಗನೊಡನೆ ಓಡಿಹೋದಮೇಲೂ ತಮ್ಮನ್ನು ಮರೆತು ತಮ್ಮ ವಂಶ ಹಾಳಾಯಿತಲ್ಲ ಎಂದು ಸೊರಗಿ ಮೃತಪಟ್ಟ ಗೌಡರು ಸದ್ಗೃಹಸ್ಥರಲ್ಲವೇ?

ಪಟ್ಟಣದಲ್ಲಿ ಓದಿದವನೆಂದು ರಂಗಣ್ಣನಿಗೆ ಮರ್ಯಾದೆ ಕೊಟ್ಟ ಹಳ್ಳಿಯವರು ದಡ್ಡರೇ?

ಅಥವಾ ಹಳ್ಳಿಯವರಿಗೇ ಮಂಕು ಹಿಡಿಸಿ ಗೌಡರ ಹಣವನ್ನು ದೋಚಿದ ರಂಗಣ್ಣ ದಡ್ಡನೇ?

ಅಂದಮೇಲೆ ಹಳ್ಳಿಯ ಸಂಸ್ಕಾರ ಒಳ್ಳೆಯದೋ? ಪಟ್ಟಣದ ಸಂಸ್ಕಾರ ಒಳ್ಳೆಯದೋ?....

ಇವೇ ಮೊದಲಾದ ಭಾವನೆಗಳು ನನ್ನ ತಲೆಯಲ್ಲಿ ಸುಳಿದವು. ಹಳ್ಳಿ ಪಟ್ಟಣಗಳ ಯಾವ ಸಂಸ್ಕಾರವನ್ನೂ ಪೂರ್ತಿ ತಿಳಿಯದ ನಾನು ಉತ್ತರ ಹೇಳದಾದೆ.

ಅಂತೂ ಪಟ್ಟಣದ ಕೆಟ್ಟರೀತಿಯನ್ನೇ ಮಾತ್ರ ಅನುಸರಿಸಿ ಹಳ್ಳಿಯವರ ಮೇಲೆ ಮಂಕು ಬೂದಿ ಚೆಲ್ಲಿದ ರಂಗಣ್ಣನನ್ನು ಒಪ್ಪಲು ಹಿಂಜರಿದೆ.

ಎಷ್ಟೋ ಹಳ್ಳಿಗಳ ಸಂಸ್ಕೃತಿಗಳು ನೆಲಮಾಳಿಗೆಗಳಲ್ಲೇ ಅಡಗಿರಬಹುದು! ಅವು ತಮ್ಮ ಬಾಗಿಲುಗಳಿಗೆ ಬಲವಾದ ಬೀಗಗಳನ್ನು ಹಾಕಿಕೊಂಡಿವೆ. ಅದನ್ನು ತೆಗೆಯುವುದು ಸಂಶೋಧಕನ ಕರ್ತವ್ಯ.

ಅದಕ್ಕಾಗಿ ಬೀಗದ ಕೈಗಳು ಬೇಕು. ಆದರೆ ಆ ಬೀಗದ ಕೈಗಳು ರಂಗಣ್ಣನಂಥವರಿಗೆ ಸಿಕ್ಕಿದರೆ ಹಳ್ಳಿ ಉದ್ಧಾರವಾಗುವುದರಲ್ಲಿ ಅನುಮಾನವೇ ಸರಿ ಎಂದು ನನ್ನ ಮನಸ್ಸಿನ ತರ್ಕಕ್ಕೆ ನಾನೇ ಉತ್ತರ ಕೊಟ್ಟೆ.

ಬೈರಪ್ಪ ಹೇಳಿದ ರೀತಿಯಲ್ಲಿ ಮಲ್ಲಮ್ಮನ ಚಿತ್ರವನ್ನು ನೆನೆಸಿ ಕೊಂಡೆ. ಅದರ ಜೊತೆಗೆ ನಾನು ಕಂಡ ಆಶಾ, ನಿರ್ಮಲೆಯರ ಚಿತ್ರವೂ ಕಣ್ಮುಂದೆ ನಿಂತಂತಾಯಿತು. ಆ ಮೂರು ವ್ಯಕ್ತಿಗಳಲ್ಲಿ ಏನಾದರೂ ತಾರತಮ್ಯವಿದೆಯೇ ಎಂದು ಯೋಚಿಸಿದೆ.

ಆಶಾ ನಿರಾಶ್ರಿತಳಾಗಿ ಬಂದವಳು ಮಹಮದನ ಆಶ್ರಯವನ್ನು ಬಯಸಿದಳು. ಆದರೆ ಮಹಮದನಿಗಿಂತಲೂ ಹೆಚ್ಚಿನ ಸ್ಥಾನಮಾನಗಳನ್ನು ಹೊಂದಿದ್ದ ಗಂಡಸರನ್ನು ಕಂಡಮೇಲೆ ಆಶಾನ ದೃಷ್ಟಿ ಸ್ವಲ್ಪ ಚಂಚಲ ವಾಯಿತು. ತನ್ನ ಮನಸ್ಸನ್ನು ತಾನೇ ಹಿಡಿದು ನಿಲ್ಲಿಸಲು ಅಸಮರ್ಥ ಳಾದಳು.

ನಿರ್ಮಲೆಯು ಕೂಡ ನಾಟಕಕ್ಕೆ ಸೇರಿದಾಗ ರಮೇಶರ ಅತ್ಯಂತ ನಿಸ್ವಾರ್ಥ ಸೇವಕಿಯಾಗಿದ್ದಿರಬೇಕು. ಆ ಸಮಯದಲ್ಲೇ ಗುರುಮುಷ್ಟಿ ಯಲ್ಲಿದ್ದ ಅತ್ಯಮೋಘ ಕಲೆಯನ್ನು ಕಲಿತಿರಬೇಕು. ಆದರೆ ರಮೇಶರು ಎಲ್ಲೋ ಹೊರಟುಹೋದರೆಂಬ ಸುದ್ದಿ ತಿಳಿದಾಗ ರಮೇಶರು ಸತ್ತೇ ಹೋಗಿರಬಹುದೆಂದು ಇತರರೊಡನೆ ನಿರ್ಮಲೆಯೂ ನಿರ್ಧರಿಸಿದಳು. ತಕ್ಷಣ ಸಿನಿಮಾ ಪ್ರಪಂಚಕ್ಕಿಳಿದಳು. ಅಲ್ಲಿ ತನ್ನ ವಯೋಧರ್ಮಕ್ಕನು ಗುಣವಾಗಿ ಹೃದಯದ ಒತ್ತಡವನ್ನು ಪೂರೈಸಿಕೊಳ್ಳಲು ಹವಣಿಸಿದಳು. ಹಾಹಾಕಾರದಿಂದ ಹೃದಯ ಬಡೆದುಕೊಳ್ಳುತ್ತಿದ್ದ ಯುವಕರ ಮಧ್ಯದಲ್ಲಿ ನಿರ್ಮಲೆ ತನ್ನದೇ ಆದ ಸ್ಥಾನವನ್ನು ಗಳಿಸಿಕೊಂಡಳು.

ಹಾಗೆಯೆ ಮಲ್ಲಮ್ಮನೂ ಕೂಡ ಗೌಡರನ್ನು ಇಷ್ಟವಿಲ್ಲದೆಯೇ ಮದುವೆಯಾಗಿರಬೇಕು. ಗೌಡರಿಂದ ಯಾವ ಸುಖವೂ ತನಗೆ ಸಿಗದಿ ದ್ದಾಗ ಯುವಕ ರಂಗಣ್ಣನನ್ನು ಪ್ರೀತಿಸಿದಳು. ಗೌಡರು ಮಲ್ಲಮ್ಮನನ್ನು ಅತಿ ವಿಶ್ವಾಸದಿಂದ ಕಾಣುತ್ತಿದ್ದರೂ ಆ ತೆರನಾದದ್ದು ಮಲ್ಲಮ್ಮನಿಗೆ ಬೇಡ ವಾಗಿತ್ತು. ಅದಕ್ಕಾಗಿಯೆ ರಂಗನ ಕಡೆ ತನ್ನ ದೃಷ್ಟಿಯನ್ನು ಹೊರಡಿಸಿ ದಳು.

ಹಾಗೆ ನೋಡಿದಲ್ಲಿ ಅಥವಾ ಯೋಚಿಸಿದಲ್ಲಿ ಆಶಾ, ನಿರ್ಮಲೆ ಮತ್ತು ಮಲ್ಲಮ್ಮ ಈ ಮೂವರೂ ತಮ್ಮ ತಮ್ಮ ಆಶೋತ್ತರಗಳನ್ನು ದೊರ

ಕಿಸಿಕೊಳ್ಳಲು ಚಂಚಲತೆಯನ್ನು ತೋರಿಸಿದ್ದಾರೆ. ಮೂವರೂ ಜೀವನ ದಲ್ಲಿ ಬೇರೆಬೇರೆ ರೀತಿಯ ಸ್ಥಾನಮಾನಗಳನ್ನು ಹೊಂದಿದ್ದರೂ ಹೃದಯ ಒತ್ತಡ ಒಂದೇ ಸಮನಾಗಿದೆ. ಎಷ್ಟಾದರೂ ಮೂವರೂ ಸ್ತ್ರೀಯರಲ್ಲವೇ!

ಹಾಗೆಂದು ಆಶಾ, ನಿರ್ಮಲೆ, ಮಲ್ಲಮ್ಮರನ್ನು ಬಯ್ಯುವುದು ಒಳ್ಳೆ ಯದೇ ?

ಇಲ್ಲ, ಆಶಾ ಎಷ್ಟು ಒಳ್ಳೆಯವಳಾಗಿದ್ದಳು! ಪಾಪ; ಮಹಮದನು ಸತ್ತಾಗ ಎಂಥ ಪ್ರತಿಜ್ಞೆ ಮಾಡಿದಳು! ಕಡೆಯ ತನಕ ಶಿಬಿರಕ್ಕಾಗಿ ದುಡಿದು ಅದರಿಂದಲೇ ಆಕಸ್ಮಿಕ ಮರಣ ಹೊಂದಿದ ಆಶಾ ಪುಟವಿಟ್ಟ ಚಿನ್ನವಲ್ಲವೇ!

ಹಾಗಾದರೆ ನಿರ್ಮಲೆ ?

ಅಂದು ಹುಚ್ಚನೇ ರಮೇಶರೆಂದು ತಿಳಿದಾಗ ನಿರ್ಮಲೆಯ ಮುಖ ಎಷ್ಟು ನೀಲಿಯಾಗಿಹೋಯಿತು! ತಾನು ಮಾಡಿದ ಕೆಲಸಕ್ಕೆ ತಾನೇ ಬೇಸರಿಕೆ ಪಟ್ಟಂತೆ ಅವಳ ಮುಖ ಮಾರ್ಪಡಲಿಲ್ಲವೇ! ಸೇಠರಂಥವರು ನಿರ್ಮಲೆಯ ರೂಪು ಲಾವಣ್ಯಕ್ಕೆ ಮನಸೋತು ಸತ್ಕಾರಕೂಟವೇರ್ಪಡಿಸಿ ದರೆ, ಅದು ನಿರ್ಮಲೆಯ ತಪ್ಪೇ ?

ಹಾಗಾದರೆ ಮಲ್ಲಮ್ಮ ?

ಅವಳು ರಂಗನೊಡನೆ ಸುಖ ಕಾಣಲು ಬಯಸಿದ್ದೇ ತಪ್ಪೇ? ತನಗೇ ತಿಳಿಯದ ರೀತಿಯಲ್ಲಿ ಮಲ್ಲಮ್ಮ ಗೌಡರನ್ನು ಮದುವೆಯಾಗಿರ ಬಹುದು. ಅದಕ್ಕೆ ಸರಿಯಾಗಿ ಗೌಡರು ಹೆಚ್ಚಿನ ಉದ್ವೇಗವಿಲ್ಲದೆ ಮಲ್ಲಮ್ಮನನ್ನು ಕೈಹಿಡಿದಿದ್ದರು. ಆ ಇಳಿವಯಸ್ಸಿನಲ್ಲಿ ತಮ್ಮ ವಂಶೋ ದ್ಧಾರವಾಗಬೇಕೆಂಬುದೇ ಗೌಡರ ಹೆಬ್ಬಯಕೆಯಾಗಿತ್ತು. ಅದಕ್ಕೆ ಮಲ್ಲಮ್ಮ ಸಾಧನಳಾಗಬಹುದೆಂದು ಗೌಡರು ಊಹಿಸಿದ್ದರು.

ಆದ್ದರಿಂದಲೇ ಗೌಡರ ವಿಶಾಲವಾದ ಮನೆಯಲ್ಲಿ ಮಲ್ಲಮ್ಮನ ಮನೋಭಾವಕ್ಕೆ ಸರಿಯಾದ ಮನೆ ಸಿಕ್ಕಲಿಲ್ಲ! ಮಲ್ಲಮ್ಮನ ಪ್ರೇಮಪೂರಿತ ವಿಹಂಗಮದೃಷ್ಟಿ ಗೌಡರಿಗೆ ಅಷ್ಟಾಗಿ ರುಚಿಸದಿದ್ದಲ್ಲಿ ಆಶ್ಚರ್ಯವೇನು?

ಅಂತೆಯೆ ಮಲ್ಲಮ್ಮ ಸಂದೇಹಕ್ಕೆ ಸಿಲುಕಿಕೊಂಡು ಗೂಡು ಬಿಟ್ಟ ಹಕ್ಕಿ ಯಂತೆ ಹಾರಾಡುತ್ತಿದ್ದಾಗ ಫಳಕ್ಕನೆ ರಂಗಣ್ಣ ಹಿಡಿದುಕೊಂಡರೆ, ಅದು ಯಾರ ತಪ್ಪು ?

ಅಂದು ರಂಗಣ್ಣನೊಡನೆ ಸುಖನಿಮಿಷ ಕಳೆಯುತ್ತಿದ್ದಾಗ ಇದ್ದಕ್ಕಿ ದ್ದಂತೆ ಗೌಡರು ಬಂದದ್ದನ್ನು ನೋಡಿ ಮಲ್ಲಮ್ಮ ದೇಹದಾದ್ಯಂತ ನಡುಗ ಲಿಲ್ಲವೇ! ಹಾಗಿರುವಲ್ಲಿ ಮಲ್ಲಮ್ಮನನ್ನು ಸ್ವಭಾವತಃ ಕೆಟ್ಟವಳೆಂದು ಹೇಳಲು ಹೇಗೆ ಸಾಧ್ಯ ?

ಒಮ್ಮೆ ಕೆಟ್ಟವರಾಗಿ ಕಂಡವರು ಮತ್ತೆ ಒಳ್ಳೆಯವರಾಗಿ ಕಂಡರು. ಇದಕ್ಕೆ ಕಾರಣವೇನು ?

ಅದು ಹೆಂಗಸರನ್ನು ನಾವು ನೋಡುವ ದೃಷ್ಟಿಯಲ್ಲಿದೆ. ಯಾವುದೋ ನಿಮಿತ್ತ ಮಾಡಿಕೊಂಡು ಗಂಡಸರು ಹೆಂಗಸರನ್ನು ಬಯ್ಯುವುದು ತಪ್ಪು. ಕ್ಷಣಕಾಲ ಅವರನ್ನು ಕಂಡು ಅವರ ಗುಣವನ್ನೇ ನಿರ್ಧರಿಸಿಬಿಡುವುದು ತುಂಬ ಅಪಾಯಕರ ಯಾವುದೋ ದುರ್ಬಲ ಮನಸ್ಸಿನಲ್ಲಿ ಮಾಡಿದ ಕಾರ್ಯವನ್ನು ಹೆಂಗಸು ಎಂದಾದರೂ ಒಂದು ದಿನ ನೆನೆಸಿಕೊಳ್ಳುವಳು. ಅಗ ಅವಳು ಪಡುವ ಪಶ್ಚಾತ್ತಾಪ ವರ್ಣನಾತೀತ.

ಅದೇ ರೀತಿಯಲ್ಲಿ ಆಶಾ, ನಿರ್ಮಲೆ ಮಲ್ಲಮ್ಮರೂ ಕೇವಲ ಚಿಕ್ಕ ವಯಸ್ಸಿನಲ್ಲೇ ದುರ್ಬಲ ಮನಸ್ಸಿನ ಪ್ರಭಾವಕ್ಕೊಳಗಾದರು

ನನ್ನ ಬಳಿಯಲ್ಲಿ ಆಶಾ ತನ್ನ ಹಿಂದಿನ ಕಾರ್ಯಕ್ಕೆ ಪಶ್ಚಾತ್ತಾಪ ಪಟ್ಟದ್ದು ಇಂದೇ ನಡೆದಂತಿದೆ.

ಹಾಗೆಯೆ ನಿರ್ಮಲೆಯ ಮುಖಭಾವದಿಂದಲೇ ಅವಳ ಪಶ್ಚಾತ್ತಾಪ ವನ್ನು ಅಂದು ಸಭೆಯಲ್ಲಿ ಕಣ್ಣಾರೆ ಕಂಡಿದ್ದೇನೆ.

ಮಲ್ಲಮ್ಮನೂ ತನ್ನಿಂದ ಒಂದು ಹಳ್ಳಿಯೇ ಹಾಳಾದದ್ದನ್ನು ನೆನೆಸಿ ಮುಂದೆ ಪಶ್ಚಾತ್ತಾಪ ಪಡಬಹುದು....

ಹೀಗೆ ಯೋಚಿಸುತ್ತಿರಲು ಬೈರಪ್ಪ ನನ್ನನ್ನು ಎಚ್ಚರಿಸಿದ. ನಿದ್ದೆ ಯಿಂದ ಎದ್ದಂತಾಯಿತು.

ತಕ್ಷಣ, "ಏನು ಬೈರಪ್ಪ, ಎದುರಿಗೆ ಕಾಣಿಸುತ್ತಿರುವ ಹಳ್ಳಿಯ ಮನೆಗಳು ಎಷ್ಟು ಸೊಗಸಾಗಿವೆ!" ಎಂದೆ.

"ಹೌದು ಸ್ವಾಮಿ, ಉಂಡು ತೇಗಿದ ಮನೆಗಳು ಇನ್ನೂ ಆ ಛಾಯೆಯನ್ನು ಬಿಟ್ಟಿಲ್ಲ. ಮನೆಯವನಿಲ್ಲದಿದ್ದರೂ ಅವನ ಔದಾರ್ಯ ವನ್ನು ಎತ್ತಿ ಹಿಡಿಯುತ್ತಿವೆ" ಎಂದನು ಬೈರಪ್ಪ.

"ಬೈರಪ್ಪ, ನಾನು ನಿನ್ನ ಹಳ್ಳಿಯಂಥ ನೂರಾರು ಹಳ್ಳಿಗಳನ್ನು ನೋಡಲು ದೊಡ್ಡ ಪ್ರಯಾಣ ಹೊರಟಿದ್ದೇನೆ.

ಈಗ ನಿನಗೆ ಹೇಗಿದ್ದರೂ ಹಳ್ಳಿಯಲ್ಲಿ ಯಾರೂ ಇಲ್ಲ. ನನ್ನೊಡನೆ ಬಂದುಬಿಡಬಹುದಲ್ಲ" ಎಂದು ನಾನು ಬೈರಪ್ಪನನ್ನು ಕರೆದೆ.

"ಇಲ್ಲ ಸ್ವಾಮಿ, ಹಳ್ಳಿಯವರು ಯಾರಿಲ್ಲದಿದ್ದರೂ ಅವರು ತುಳಿದ ನೆಲ ಇಲ್ಲವೇ? ಇದೇ ನೆಲದಲ್ಲಿ ಹುಟ್ಟಿದ ನಾನು ಇಲ್ಲೇ ಸಮಾಧಿಯಾಗು ತ್ತೇನೆ. ಗೌಡರ ಹೆಸರು ಹೇಳಿಕೊಂಡು ಇಲ್ಲೇ ಬಿದ್ದು ನರಳಾಡುತ್ತೇನೆ. ಉಸಿರು ಇರುವ ತನಕ ಹಳ್ಳಿಯ ಮನೆಗಳ ಮುಂದೆ ನಿಂತು ಅವರವರ ಹೆಸರನ್ನು ಜ್ಞಾಪಿಸಿಕೊಳ್ಳುತ್ತೇನೆ. ನಮ್ಮೂರಿನಲ್ಲಿ ಪ್ರತಿಯೊಬ್ಬರೂ ನನ್ನನ್ನು ಕಂಡಿದ್ದರು ಅಂಥಾದ್ದರಲ್ಲಿ ಈ ಹಳ್ಳಿಯನ್ನು ಬಿಟ್ಟು ಹೇಗೆ ಬರಲಿ?" ಎಂದು ಬೈರಪ್ಪ ಕೋಲನ್ನೂರಿಕೊಂಡು ಮೇಲೆದ್ದನು. ಭುಜಕ್ಕೆ ಕಂಬಳಿಯನ್ನು ಸರಿಯಾಗಿ ಹಾಕಿಕೊಂಡನು.

ಮತ್ತೆ ಬೈರಪ್ಪ ಇದ್ದಕ್ಕಿದ್ದಂತೆ ನಕ್ಕನು.

"ಏನು ಬೈರಪ್ಪ, ಇಂಥ ಬೀಡು ಜಾಗದಲ್ಲೇ ಇರಲು ನಿರ್ಧರಿಸಿ ನಗುತ್ತಿರುವೆಯಲ್ಲ!" ಎಂದೆ.

"ಅದಕ್ಕಲ್ಲ ಸ್ವಾಮಿ, ಅಕಸ್ಮಾತ್ ನಿಮ್ಮನ್ನು ಕಂಡದ್ದು ನನಗೆ ಎಷ್ಟು ಪ್ರಯೋಜನವಾಯಿತು! ನಮ್ಮ ಹಳ್ಳಿಯ ಕಥೆಯನ್ನು ನಿಮಗೆ ಹೇಳಿದ್ದರಿಂದ ನನ್ನ ಮನಸ್ಸಿನ ಭಾರ ಎಷ್ಟೋ ಕಡಿಮೆಯಾಗಿದೆ" ಎಂದನು ಬೈರಪ್ಪ.

ಸ್ವಲ್ಪ ದೂರ ಬೈರಪ್ಪ ನನ್ನೊಡನೆ ಬಂದು ಮತ್ತೆ ಹಳ್ಳಿಗೆ ಹಿಂತಿರು ಗಿದ. ಆಗ ಬೈರಪ್ಪ ನನಗೆ ಸಾಷ್ಟಾಂಗ ನಮಸ್ಕಾರ ಮಾಡಿ ಕೈ ಮುಗಿದು ಕೊಂಡೇ ನಿಂತಿದ್ದ. ನಾನು ಹೋಗುತ್ತಿದ್ದ ದಾರಿಯನ್ನೇ ನೋಡುತ್ತ ಕಾಣುವ ತನಕ ಅಲ್ಲಿದ್ದು ಹಿಂತಿರುಗಿದ.

ಸರಳ ಜೀವಿ ಬೈರಪ್ಪ ನನಗೆ ಹಳ್ಳಿಯೊಂದರ ಪೂರ್ಣ ಪರಿಚಯ ಮಾಡಿಸಿದ್ದ. ಅವನ ಹಳ್ಳಿಯ ಪ್ರೇಮ ನನ್ನನ್ನು ಆಶ್ಚರ್ಯಗೊಳಿಸಿತ್ತು. ಕೇಳುವವರಿಲ್ಲದಿದ್ದರೂ ಸ್ವಾಮಿನಿಷ್ಠೆಯನ್ನು ಹೊಂದಿದ್ದ ಬೈರಪ್ಪ ಎಲ್ಲ ದೇಶಸೇವಕರನ್ನೂ ಮೀರಿಸಿದ್ದ. ಬೈರಪ್ಪ ತಾನೊಬ್ಬನೇ ಈಗ ಏನು ಮಾಡುತ್ತಿದ್ದಾನೋ ಎಂದು ಕಣ್ಣಲ್ಲಿ ನೀರು ಹಾಕಿಕೊಂಡೆ.

ಬೈರಪ್ಪನಂಥ ನಿಜವಾದ ಮಣ್ಣಿನ ಮಕ್ಕಳು ಭಾರತದಲ್ಲಿ ಎಷ್ಟು ಜನ ಇದ್ದಾರೋ ?

ಭಾರತ ಹಳ್ಳಿಯ ದೇಶ. ಪಟ್ಟಣದವನು ನವೀನರೀತಿಯಲ್ಲಿ ಬದುಕಬೇಕಾದರೆ ಹಳ್ಳಿಯವನ ನೆರವು ಬೇಕು. ಅಷ್ಟರಲ್ಲೇ ಪಟ್ಟಣದ ವನು ಸುಮ್ಮನಾದರೆ ಮೇಲು. ಆದರೆ ಈಗ ಅವನು ಹಳ್ಳಿಯವರ ಮನ ಸ್ಸನ್ನು ಕಲಕುತ್ತಿದ್ದಾನೆ. ತಾನು ಹುಟ್ಟಿ ಬೆಳೆದ ಮಣ್ಣಿಗೇ ಅಂಟಿಕೊಂಡಿ ರುವ ಬೈರಪ್ಪನಂಥವರನ್ನು ಬಹು ಪ್ರಯಾಸದಿಂದಲಾದರೂ ಎಳೆದು ಕೊಂಡು ಬರುವ ಕಾಲ ಪ್ರಾಪ್ತವಾಗಿದೆ. ಅದಕ್ಕೆ ಸಾಕ್ಷಿಯಾಗಿ ರಂಗಣ್ಣ ನಂಥವರು ಹುಟ್ಟಿಕೊಂಡಿಲ್ಲವೇ! ಅವನ ಹಾಗೆ ಹಳ್ಳಿಯಲ್ಲಿ ಹುಟ್ಟಿದರೂ ಪಟ್ಟಣಗಳ ಕೃತಕ ಸೌರಭಕ್ಕೆ ಮನಸೋತು ಮಣ್ಣಿನ ವಾಸನೆಯನ್ನು ಮರೆತ ಹಳ್ಳಿಯುವರೇ ಎಷ್ಟು ಜನ ಇದ್ದಾರೋ! ಹಾಗಿರುವಲ್ಲಿ ಹಳ್ಳಿ ಯಿಂದಲೇ ಕಟ್ಟಲ್ಪಟ್ಟಿರುವ ಭಾರತ ಮುಂದೆ ಬರುವ ದಾರಿ ಹೇಗೆ ?

ಈ ತೆರನಾದ ಯೋಚನೆ ಮಾಡುತ್ತ ಒಬ್ಬಂಟಿಗನಾಗಿ ಬಹುದೂರ ನಡೆದುಬಿಟ್ಟೆ. ಎದುರಿಗೆ ಒಂದು ಜನರ ಗುಂಪನ್ನು ಕಂಡಾಗಲೇ ನನಗೆ ಎಚ್ಚರವಾಗಿದ್ದು.

ಆ ಗುಂಪಿನಲ್ಲಿ ನಾನಾತರದ ಜನ ಸೇರಿದ್ದರು. ಮುಂದಿದ್ದ ನಾಲ್ಕು ಜನ ಗಟ್ಟಿಯಾಗಿ ಹಾಡುತ್ತಿದ್ದರು. ಅವರ ಹಿಂದೆ ಹಾಡಿಗೆ ತಕ್ಕಂತೆ ಕೆಲವರು ನಡೆದುಕೊಂಡೇ ವಾದ್ಯ ಬಾರಿಸುತ್ತಿದ್ದರು. ಮುಂದಿನ ಜನ ಹೇಳಿದಂತೆ ಅದೇ ಹಾಡಿನ ಸಾಲುಗಳನ್ನು ಗೋಷ್ಠಿಯಲ್ಲಿ ಹಾಡಲು ನೂರಾರು ಜನ ಸುರಿಬಿಟ್ಟಿದ್ದರು. ದಾರಿಯಲ್ಲಿ ಜಾಗವಿಲ್ಲದಂತೆ ಅವರು ಆಕಾಶವನ್ನೇ ನೋಡುತ್ತ ಸಾಗುತ್ತಿದ್ದರು. ಮೈಮೇಲೆ ಹೆಚ್ಚಿನ ಬಟ್ಟೆಯನ್ನು ಹಾಕಿಕೊಂಡಿರಲಿಲ್ಲ. ಚಳಿ ಗಾಳಿಗೆ ಲೆಕ್ಕಿಸದಂತೆ ಅವರು ಪ್ರಯಾಣ ಹೊರಟಿರುವಂತೆ ಕಂಡಿತು. ಹಾಡನ್ನೇ ಹಾಡುತ್ತ ಭಾವ ಪರವಶರಾಗಿದ್ದ ಜನಕ್ಕೆ ಇಹಲೋಕದ ಜ್ಞಾನವೇ ಇದ್ದಂತಿರಲಿಲ್ಲ. ಪ್ರತಿಯೊಬ್ಬರ ಕೈಯಲ್ಲೂ ಹಣ್ಣು ಕಾಯಿಗಳಿದ್ದವು. ಹಣೆಯ ಮೇಲೆ ಎಲ್ಲರೂ ದೊಡ್ಡದಾಗಿ ತಿಲಕವಿಟ್ಟಿದ್ದರು.

ನಾನು ಗುಂಪಿದ್ದೆಡೆಗೆ ಬಂದೆ. ಅವರು ದೇವರ ನಾಮಗಳನ್ನು ಹಾಡುತ್ತಿದ್ದರು. ಅದರಿಂದ ಅದು ಭಜನೆಯ ಗೋಷ್ಠಿಯೆಂದು ತಿಳಿಯಿತು.

ಗೋಷ್ಠಿಯವರು ಮನೆಗಳ ಸಾಲನ್ನು ಹಾದುಹೋಗುತ್ತಿದ್ದರೂ ಯಾವ ಮನೆಯ ಮುಂದೂ ನಿಲ್ಲುತ್ತಿರಲಿಲ್ಲ. ಊರಾಚೆ ಎಲ್ಲಿಗೋ ಹೋಗುತ್ತಿರಬಹುದೆಂದು ಊಹಿಸಿದೆ. ಅಷ್ಟು ಭಕ್ತಿಪರವಶರಾಗಿ ನೂರಾರು ಜನ ಸೇರುವ ಸ್ಥಳ ಯಾವುದಿದೆಯೆಂದು ಆಶ್ಚರ್ಯಪಟ್ಟೆ. ಅದನ್ನು ನೋಡಲು ನನಗೂ ಆಸೆಯಾಯಿತು.

ಗುಂಪಿನ ಹಿಂದೆಯೇ ನಾನು ಕೂಡ ಪ್ರಯಾಣ ಮಾಡಿದೆ ನೂರರಲ್ಲಿ ಇನ್ನೊಬ್ಬನಾಗಿ ಯಾರಿಗೂ ತಿಳಿಯದಂತಿದ್ದೆ. ಆದರೆ ನನಗೂ ಗೋಷ್ಠಿಯವರಿಗೂ ಇದ್ದ ವ್ಯತ್ಯಾಸವೆಂದರೆ ಬಟ್ಟೆಯಲ್ಲಿ ಮಾತ್ರ. ಗೋಷ್ಠಿಯವರು ಶುಚಿಯಾದ ಮಡಿ ವಸ್ತ್ರಗಳನ್ನು ಧರಿಸಿದ್ದರು. ನನ್ನ ಮಾಸಿದ ಬಟ್ಟೆಯನ್ನು ನೋಡಿ ನನಗೇ ನಾಚಿಕೆಯಾಯಿತು.

ಗೋಷ್ಠಿ ಊರಾಚೆಯ ಜಮೀನಿನ ಬಳಿ ಬಂತು. ಅಲ್ಲಿ ಒಂದು ಗುಡಿಸಲ ಬಳಿ ನಿಂತಿತು.

ಗುಡಿಸಿಲ ಬಳಿ ಜಟೆಯನ್ನು ಬಿಟ್ಟು ಒಬ್ಬಾತ ಕುಳಿತಿದ್ದ. ಮುಖ ಕಂಗೊಳಿಸುತ್ತಿತ್ತು. ಮಧ್ಯವಯಃಸ್ಸಿನವನಂತೆ ಕಂಡಿತು. ಆತ ಕುಳಿತಿದ್ದ ಭಂಗಿಯನ್ನು ನೋಡಿದರೆ ಯೋಗಾಭ್ಯಾಸ ಮಾಡಿದವನಂತಿತ್ತು. ಉಟ್ಟಿದ್ದ ಕಾವಿ ಬಟ್ಟೆ ಆತನ ಬಿಳಿಯ ದೇಹಕ್ಕೆ ಹೊಂದಿಕೆಯಾಗಿತ್ತು ಕಣ್ಣಿನ ದೃಷ್ಟಿ ವಿಶಾಲವಾಗಿತ್ತು. ಇಡೀ ಪ್ರಪಂಚವನ್ನೇ ಎದುರಿಸಬಲ್ಲ ಜೆಟ್ಟಿಯಂಥ ಮೈಕಟ್ಟು ಆತ ಸಂಪಾದಿಸಿಕೊಂಡಿದ್ದ. ಆ ತೆರನಾದ ವ್ಯಕ್ತಿಯನ್ನು ನಾನು ಹಿಂದೆಂದೂ ಕಂಡಿರಲಿಲ್ಲ.

ಗೋಷ್ಠಿಯ ಜನ ಆತನ ಸುತ್ತ ಕುಳಿತರು. ಎಲ್ಲರೂ ಸ್ವಾಮಿಗಳಿಗೆ ನಮಸ್ಕರಿಸಿ ತಮ್ಮ ತಮ್ಮ ಕುಂದುಃಕೊರತೆಗಳನ್ನು ಹೇಳಿಕೊಂಡರು. ಸ್ವಾಮಿಗಳು ಎಲ್ಲರಿಗೂ ಕೊಡುತ್ತಿದ್ದ ಸೂಕ್ತ ಉತ್ತರವನ್ನು ಕಂಡ ನನಗೆ ಅವರ ಅನುಭವ ಎಷ್ಟು ವಿಶಾಲವಾದುದೆಂದು ತಿಳಿಯಿತು.

ತಕ್ಷಣ ಸ್ವಾಮಿಗಳು ಗೋಷ್ಠಿಯವರನ್ನೆಲ್ಲ ಉದ್ದೇಶಿಸಿ, "ನೀವು ಬರುವಾಗ ಒಂದು ದೊಡ್ಡ ತಪ್ಪನ್ನು ಮಾಡಿರುವಿರಿ. ಅದು ನಿಮಗೆ ತಿಳಿದಿದೆಯೇ ?" ಎಂದರು.

"ನಾವು ಕಂಡ ಹಾಗೆ ಯಾವ ತಪ್ಪನ್ನೂ ಮಾಡಿಲ್ಲವೆಂದು ತಿಳಿದಿದ್ದೇವೆ" ಎಂದು ಗೋಷ್ಠಿಯ ಮುಖಂಡ ಹೇಳಿದ.

"ಮತ್ತೊಮ್ಮೆ ಯೋಚಿಸಿ ನೋಡಿ" ಎಂದರು ಸ್ವಾಮಿಗಳು.

ಗೋಷ್ಠಿಯ ಜನ ತಮ್ಮ ತಮ್ಮಲ್ಲೇ ವಿಚಾರಿಸಿಕೊಂಡರು. ಬಟ್ಟೆ ಬರೆಗಳನ್ನು ನೋಡಿಕೊಂಡರು. ಅದರ ಮೇಲೆ ಯಾವ ಮೈಲಿಗೆಯ ಪ್ರಸಂಗವೂ ಬರುವಂತಿರಲಿಲ್ಲ. ಎಲ್ಲರೂ ಹಣೆಯನ್ನು ಮುಟ್ಟಿ ನೋಡಿ ತಿಲಕ ಸರಿಯಾಗಿದೆಯೆಂದುಕೊಂಡರು. ಒಬ್ಬಾತನಂತೂ ಜೇಬಿನಿಂದ ಸಣ್ಣ ಕನ್ನಡಿ ತೆಗೆದು ಮುಖವನ್ನು ನೋಡಿಕೊಳ್ಳುತ್ತಿದ್ದನು. ಮತ್ತೊಬ್ಬ ಮೇಲುವಸ್ತ್ರವನ್ನು ಸರಿಯಾಗಿ ಹೊದ್ದುಕೊಂಡನು. ಇನ್ನೊಬ್ಬ ಸಡಿಲವಾಗಿದ್ದ ಪಂಚೆಯನ್ನು ಬಿಗಿದು ಕಟ್ಟಿದನು. ಅಂತೂ ಎಲ್ಲರೂ ತಮ್ಮಲ್ಲಿ ಯಾವ ತಪ್ಪೂ ಇರಲಾರದೆಂದು ತೀರ್ಮಾನಿಸಿಕೊಂಡರು.

"ನಮಗೆ ಯಾವುದೂ ಹೊಳೆಯದು; ತಾವೇ ಅಪ್ಪಣೆ ಕೊಡಿಸ ಬೇಕು" ಎಂದು ಒಬ್ಬ ಧೈರ್ಯ ಮಾಡಿ ಸ್ವಾಮಿಗಳೆದುರಿಗೆ ಮಾತನಾಡಿದ.

"ನೀವು ಬರುವಾಗ ನಿಮ್ಮನ್ನೇ ಹಿಂಬಾಲಿಸಿ ಬಂದ ಅವನನ್ನು ಇಲ್ಲಿ ಗೇಕೆ ಕರೆತರಲಿಲ್ಲ?" ಎಂದು ಸ್ವಾಮಿಗಳು ನನ್ನ ಕಡೆ ಕೈ ತೋರಿಸಿದರು.

"ಕ್ಷಮಿಸಬೇಕು. ಬಂದ ಆತುರದಲ್ಲಿ ಮರೆತುಬಿಟ್ಟೆವು. ಈಗ ಕರೆಯುತ್ತೇನೆ. ಆದರೆ ಅವನುಟ್ಟಿರುವ ಬಟ್ಟೆ ಬಹಳ ಮಾಸಿಹೋಗಿದೆ" ಎಂದು ಗೋಷ್ಠಿಯ ಮುಖಂಡ ಅನುಮಾನಿಸಿದ.

"ಅದೆಲ್ಲ ನಿಮಗೇಕೆ? ಕಶ್ಮಲದಿಂದ ತುಂಬಿರುವ ಚರ್ಮದ ಮೇಲೆ ಬಟ್ಟೆ ಯಾವುದಿದ್ದರೇನು? ಹೇಳಿದಷ್ಟು ಕೆಲಸ ಮಾಡಿ" ಎಂದು ಸ್ವಾಮಿ ಗಳು ದಿಟ್ಟತನದಿಂದ ಮಾತನಾಡಿದಾಗ ಗೋಷ್ಠಿಯ ಮುಖಂಡ ಮೇಲೆದ್ದು ಕುಳಿತಿದ್ದವರ ಮಧ್ಯದಲ್ಲಿ ಜಾಗ ಬಿಡಿಸಿಕೊಂಡು ನನ್ನ ಬಳಿ ಬಂದ.

ನಾನು ಸ್ವಾಮಿಗಳೆದುರಿಗೆ ಬಂದು ನಿಂತೆ. ಅವರು ನನ್ನ ಮೇಲೆ ತೋರಿದ ಕನಿಕರ ಭಾವವನ್ನು ಕಂಡು ನನಗೆ ತುಂಬ ಸಂತೋಷವಾ ಯಿತು. ತಕ್ಷಣ ಅವರಲ್ಲಿ ಭಕ್ತಿಭಾವ ಮೂಡಿತು. ಸ್ವಾಮಿಗಳಿಗೆ ನಮ ಸ್ಕರಿಸಿದೆ.

ಇದ್ದಕ್ಕಿದ್ದಂತೆ ಸ್ವಾಮಿಗಳ ವಿಶಾಲವಾದ ಕಣ್ಣುಗಳು ನನ್ನ ಕಡೆ ತಿರುಗಿದವು. ಅವು ವಿಶ್ವಾಸದಿಂದ ತುಂಬಿದ್ದವು. ನನ್ನ ಕುಲಗೋತ್ರ ಗಳನ್ನು ಸ್ವಾಮಿಗಳು ವಿಶದವಾಗಿ ವಿಚಾರಿಸಿದರು. ನಾನು ಪಟ್ಟ ಕಷ್ಟ ಜೀವನಕ್ಕೆ ಸ್ವಾಮಿಗಳು ಅನುತಾಪ ಸೂಚಿಸಿದರು.

ನನ್ನ ವಿಷಯದಲ್ಲೇ ಗಂಟೆಗಟ್ಟಲೆ ಚರ್ಚಿಸುತ್ತಿದ್ದ ಸ್ವಾಮಿಗಳನ್ನು ಕಂಡು ಗೋಷ್ಠಿಯವರಿಗೆ ಸಹಿಸಲಾಗಲಿಲ್ಲ. ಸ್ವಾಮಿಗಳ ಗಮನವನ್ನು ಸೆಳೆಯಲು ಹಣ್ಣು ಕಾಯಿಗಳನ್ನು ಅವರ ಮುಂದಿಡಲು ಪ್ರಯತ್ನ ಪಟ್ಟರು. ಆದರೆ ಸ್ವಾಮಿಗಳ ದೃಷ್ಟಿ ಚಂಚಲವಾಗಲಿಲ್ಲ.

ಮತ್ತೆ ನನ್ನೊಬ್ಬನನ್ನೇ ನೋಡಿಕೊಂಡು ಉಪದೇಶ ಮಾಡಲು ಶುರು ಮಾಡಿದರು ಇದನ್ನು ಕಂಡ ಗೋಷ್ಠಿಯವರು ಬೇಸರಪಟ್ಟು

ಒಬ್ಬೊಬ್ಬರಾಗಿ ಏಳಲು ಪ್ರಯತ್ನಪಟ್ಟರು. ತಾವಿಟ್ಟಿದ್ದ ಹಣ್ಣು ಕಾಯಿ ಗಳನ್ನೂ ಮೆಲ್ಲಗೆ ಹಿಂದಕ್ಕೆ ಸರಿಸಿಕೊಂಡರು. ಕಡೆಗೆ ಸ್ವಾಮಿಗಳೊಡನೆ ನಾನೊಬ್ಬನೇ ಉಳಿದೆ.

ಅಂದು ನಾನು ಕಳೆದ ರಸನಿಮಿಷವನ್ನು ಜೀವನದಲ್ಲಿ ಮರೆಯು ವಂತಿಲ್ಲ. ಜೀವನದಲ್ಲಿ ನಿರಾಶನಾಗಿದ್ದ ನನಗೆ ಭಾರತೀಯ ಸಂಸ್ಕೃತಿಯ ಪ್ರತೀಕದಂತಿದ್ದ ಸ್ವಾಮಿಗಳು ಹೊಸ ಬೆಳಕು ಚೆಲ್ಲಿ ಆಶಾಪೂರಿತನನ್ನಾಗಿ ಮಾಡಿದರು. ನನ್ನ ಪ್ರಶ್ನೆಗೆ ತಕ್ಕ ಉತ್ತರವನ್ನು ದೊರಕಿಸಿಕೊಟ್ಟರು.

ಆದರೂ ನನಗೊಂದು ಸಂಶಯವಿದ್ದೇ ಇದ್ದಿತು. ಆ ಸಂಶಯ ವನ್ನು ಪರಿಹರಿಸಲು ಸ್ವಾಮಿಗಳೇ ಸಮರ್ಥರೆಂದು ತಿಳಿದು ಅವರನ್ನು ಪ್ರಶ್ನಿಸಿದೆ.

"ಸ್ವಾಮಿ, ತಮ್ಮಂಥವರು ಭಾರತದಲ್ಲಿದ್ದರೂ ಐಕಮತ್ಯವಿಲ್ಲದಿರಲು ಕಾರಣವೇನು? ಎಲ್ಲೆಲ್ಲಿ ನೋಡಿದರೂ ಕಲಹವೇ ಕಾಣುತ್ತಿದೆಯಲ್ಲ! ಕ್ಷಣ ಮಾತ್ರದಲ್ಲಿ ನಂಬಿ ಕ್ಷಣದಲ್ಲೇ ಕೈಬಿಡುವ ಜನ ಹೆಚ್ಚುತ್ತಿರಲು ಏನು ಕಾರಣ? ಧರ್ಮವೊಂದರಿಂದಲೇ ಐಕಮತ್ಯವನ್ನು ಸಾಧಿಸಬೇಕೆಂದು ಭಾಷಣ ಮಾಡುವವರು ತಮ್ಮ ತಮ್ಮಲ್ಲಿಯೆ ಏಕೆ ಕಚ್ಚಾಟವಾಡುತ್ತಿ ದ್ದಾರೆ?

ನಿಮ್ಮಂತೆ ಕಾವಿ ಹಾಕಿದ ಎಷ್ಟೋ ಜನರನ್ನು ಹಿಂದೆ ನೋಡಿದ್ದೆ. ಆದರೆ ನಿಮ್ಮ ಮುಖದ ಕಾಂತಿಯನ್ನು ಹಿಂದೆಲ್ಲೂ ಕಂಡಿಲ್ಲ. ಅದರಿಂದ ನೀವೇ ನನ್ನ ಪ್ರಶ್ನೆಯನ್ನು ಬಗೆಹರಿಸಬೇಕು" ಎಂದು ಕೇಳಿದೆ.

"ನೀನು ಕೇಳಿದ ಪ್ರಶ್ನೆ ಸಹಜವಾದುದು. ಇಂದು ಭಾರತದ ಪರಿಸ್ಥಿತಿ ತೀರ ಹದಗೆಟ್ಟಿದೆ.

ಅದಕ್ಕೆ ಭಾರತೀಯರು ತಮ್ಮ ಧರ್ಮವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದಿರುವುದೇ ಕಾರಣ. ವೇದಿಕೆಯ ಮೇಲೆ ನಿಂತು ಮನ ಬಂದಂತೆ ಧರ್ಮದ ಮೇಲೆ ವ್ಯಾಖ್ಯಾನ ಮಾಡುತ್ತಾ ಸ್ವಾರ್ಥ ಸಾಧನೆ ಯನ್ನು ಸಾಧಿಸುತ್ತಿರುವವರು ಭಾರತದಲ್ಲಿ ಬಹಳವಾಗಿ ಹೆಚ್ಚುತ್ತಿದ್ದಾರೆ.

ಅಂತೆಯೆ ಧರ್ಮಸ್ವರೂಪವನ್ನು ಆಳವಾಗಿ ಅಭ್ಯಾಸಮಾಡುವವರು ತೀರ ವಿರಳರಾಗಿದ್ದಾರೆ.

ಹಗುರವಾಗಿ ಮಾತನಾಡುವವರನ್ನೇ ಜನ ದೊಡ್ಡ ಪಂಡಿತರನ್ನಾಗಿ ಗಣಿಸಿದೆ. ಅಂಥವರು ಜಾಸ್ತಿಯಾಗಿರುವುದರಿಂದಲೇ ಭಾರತದಲ್ಲಿಂದು ಐಕಮತ್ಯವಿಲ್ಲದಿರುವುದು. ಜೊತೆಗೆ ಧರ್ಮ ಸಾಮ್ರಾಜ್ಯದಲ್ಲಿ ರಾಜಕೀಯ ವಿಷ ಬೆರೆಯುತ್ತಿದೆ.

ಆದರಿಂದಲೇ ಜನಗಳಲ್ಲಿ ಪರಸ್ಪರ ನಂಬಿಕೆ ಮಾಯವಾಗಿಹೋಗಿದೆ. ಧರ್ಮಶಾಸ್ತ್ರದ ನಾಲ್ಕು ಮಾತು ಮುಖಂಡರ ಬಾಯಿಂದ ಕೇಳ ಬರುತ್ತಿದ್ದರೂ ಅದು ಒಬ್ಬ ಸುಂದರ ಯುವತಿಯನ್ನೇ ನಿಮಿತ್ತಮಾಡಿಕೊಂಡು ದೇವತೆಯನ್ನು ಹೊಗಳಿದಂತೆ! ಅಂದರೆ ಇಂದು ನಡೆಯುತ್ತಿರುವುದು ಧರ್ಮಾಚರಣೆಯಲ್ಲ; ಧರ್ಮದ ವ್ಯಭಿಚಾರ. ತಮ್ಮ ತಮ್ಮ ಕಶ್ಮಲಗಳನ್ನು ಹೋಗಲಾಡಿಸಿಕೊಳ್ಳದೆ ಮತ್ತೊಬ್ಬರಿಗೆ ಉಪದೇಶಮಾಡಲು ಹೊರಟ ಜನ ಏನನ್ನು ತಾನೆ ಸಾಧಿಸಿಯಾರು?...." ಎಂದು ಸ್ವಾಮಿಗಳು ನಿರ್ದಾಕ್ಷಿಣ್ಯವಾಗಿ ಮಾತನಾಡಲಾರಂಭಿಸಿದರು.

ಅವರ ಪ್ರತಿಯೊಂದು ವಾಕ್ಯವೂ ಸುಲಲಿತವಾಗಿ ಸಾಗುತ್ತಿತ್ತು. ತಮ್ಮದೇ ಆದ ರೀತಿಯಲ್ಲಿ ಭಾರತದ ಸ್ಥಿತಿ ಗತಿಗಳಿಗೆ ಸೂಕ್ತ ಸಲಹೆಗಳನ್ನು ನೀಡುತ್ತಿದ್ದರು. ಸ್ವಾಮಿಗಳಂಥವರು ಇಂದಿನ ನ್ಯಾಯಾಲಯದ ನ್ಯಾಯಾಧಿಪತಿಗಳಾದರೆ ಎಷ್ಟೋ ಮಹತ್ಕಾರ್ಯ ನಡೆಸಬಹುದೆಂದುಕೊಂಡೆ. ಆದರೆ ನವೀನ ಯುಗದಲ್ಲಿ ಯಾವ ಹವ್ಯಾಸಕ್ಕೂ ಕೈ ಹಚ್ಚದೆ ಯಾವುದೋ ಮೂಲೆಯಲ್ಲಿ ಒಬ್ಬಂಟಿಗರಾಗಿ ಕುಳಿತಿರುವ ಸ್ವಾಮಿಗಳಿಗೆ ಸ್ಥಾನ ಮಾನ ಹೇಗೆ ತಾನೆ ದೊರಕೀತು!

ಅಂದರೆ ಈ ಇಪ್ಪತ್ತನೆಯ ಶತಮಾನದಲ್ಲಿ ಸ್ವಾಮಿಗಳು ಹಿಂದುಳಿದವರೇ? ಎಂದು ಸಂದೇಹಪಟ್ಟೆ. ಅವರನ್ನೇ ಕೇಳಿದರಾಯಿತೆಂದು ಧೈರ್ಯ ಮಾಡಿದೆ.

"ಸ್ವಾಮಿ, ಕಾಲ ಬದಲಾಯಿಸಿದಂತೆ ಧರ್ಮವೂ ಬದಲಾಯಿಸ ಬೇಕೆಂದು ಹೇಳುತ್ತಾರಲ್ಲ, ಅದು ಸರಿಯಾದ ಹೇಳಿಕೆಯೇ ?

ಮತ್ತೆ ಕೆಲವರು ಹಿಂದಿನ ಧರ್ಮವನ್ನು ಹೀಯಾಳಿಸಿ ಒಂದು ಹೊಸ ಮತವನ್ನೇ ಸ್ಥಾಪಿಸಲು ಹೊರಟಿರುವುದು ಒಳ್ಳೆಯದೇ ?

ಇನ್ನು ಕೆಲವರು ಹಿಂದಿನ ಕರ್ಮಾಚರಣೆಯನ್ನು ಖಂಡಿಸಿ ಅದರ ಬದಲು ದೇಶಸೇವೆ ಮಾಡಬೇಕೆನ್ನುತ್ತಿರುವುದು ಕಾಲೋಚಿತವಾಗಿ ದೆಯೇ ?...." ಎಂದು ಕೇಳಿಯೇ ಬಿಟ್ಟೆ.

"ನೀನು ಕೇಳುತ್ತಿರುವ ಪ್ರಶ್ನೆ ಕಾಲೋಚಿತವಾಗಿದೆ. ಪ್ರತಿಯೊಬ್ಬ ಭಾರತೀಯನೂ ಈ ವಿಷಯಗಳನ್ನು ಪ್ರಶ್ನೆಯಾಕಾರದಲ್ಲಿ ಕಂಡರೆ ಎಷ್ಟೋ ಕೆಲಸ ಮಾಡಬಹುದು. ಆದರೆ ಇಂದಿನ ಮಾನವ ಪ್ರಶ್ನೆ ಯಾವುದು, ಉತ್ತರ ಯಾವುದು ಎಂಬುದನ್ನು ತಿಳಿಯುವುದಕ್ಕೇ ಅಸಮರ್ಥನಾಗಿ ದ್ದಾನೆ.

ಇಂದಿನ ಯುಗವನ್ನು ಜನ ನವೀನಯುಗವೆಂದು ಕರೆಯುತ್ತಿರು ವುದು ನಿಜ. ಆದರೆ ಹಿಂದಿನವರಿಗೂ ಒಂದು ನವೀನಯುಗವಿದ್ದಿತೆಂಬು ದನ್ನು ಮರೆಯಬಾರದು. ಪ್ರತಿಯೊಬ್ಬನೂ ತನ್ನ ಹಿಂದಿನ ಜನಾಂಗ ಕ್ಕಿಂತ ತಾನು ಮುಂದಿನವನೆಂದು ತಿಳಿದುಕೊಳ್ಳುವುದು ಸ್ವಾಭಾವಿಕ. ಆದ್ದರಿಂದ ನವೀನ ಯುಗವೆಂಬ ಭಾವನೆ ಒಂದು ಕಾಲದವರಿಗೆ ಮಾತ್ರ ಮೀಸಲಾಗಿಲ್ಲ. ಆದರೆ ಆ ನಿಶ್ಚಯವನ್ನು ಇಂದಿನವನು ಒಪ್ಪದೆ ಇಡೀ ದೇಶಕ್ಕೇ ಅನಿಷ್ಟ ಹರಡಲು ಮುನ್ನುಗ್ಗುತ್ತಿದ್ದಾನೆ.

ಹಾಗೆ ನೋಡಿದಲ್ಲಿ ಭಾರತೀಯ ದರ್ಶನಗಳು ಆಯಾಯ ಕಾಲದ ಬೆಳವಣಿಗೆಯನ್ನು ಸೊಗಸಾಗಿ ವಿವರಿಸಿದೆ ಮತ್ತು ಮುಂದಾಲೋಚನೆ ಯಿಂದ ಮುಂದೆ ಆಗಬಹುದಾದ ತತ್ವನಿರ್ಣಯಗಳನ್ನೂ ಸೂಕ್ಷ್ಮವಾಗಿ ಆಗಲೇ ಸಿದ್ಧಪಡಿಸಿದೆ. ಈಗ ನಾವು ಹೊಸದಾಗಿ ನಮ್ಮದೇ ಆದ ಮತ ವನ್ನು ಸ್ಥಾಪಿಸಲು ಹೊರಟರೂ ಅದು ಹಿಂದಿನ ನಿರ್ಣಯದ ಯಾವುದೋ ರೂಪಾಂತರವಾಗಿದ್ದರೆ ಆಶ್ಚರ್ಯವೇನಿಲ್ಲ. ಆದರೆ ಹೊಸ ಭಾವನೆಗಳನ್ನು

ಬಿತ್ತುವುದರಲ್ಲಿ ಯಾವ ತಪ್ಪೂ ಇಲ್ಲ. ಅದಕ್ಕೆ ಯಾವತ್ತೂ ಭಾರತೀಯ ತತ್ವ ಶಾಸ್ತ್ರಜ್ಞರು ಅಡ್ಡಿ ಬರುವುದಿಲ್ಲ.

ಅಂದರೆ ಹೊಸ ಮತವನ್ನು ಸ್ಥಾಪಿಸುವುದರ ಉದ್ದೇಶವೇನು ?

ಹಿಂದೆ ಆ ರೀತಿಯ ಮತ ಇರಲಿಲ್ಲವೆಂದು ತಾನೇ ? ಅದಕ್ಕಾಗಿ ಯಾದರೂ ಹಿಂದಿನ ವಿಚಾರವನ್ನು ತಿಳಿಯಬೇಕಾದ ದು ನಮ್ಮ ಕರ್ತವ್ಯ ವಲ್ಲವೇ ?

ಆದ್ದರಿಂದ ಪ್ರತಿಯೊಬ್ಬ ಸ್ವತಂತ್ರ ವಿಚಾರಕರ್ತನೂ ಹಿಂದಿನ ಪ್ರಮೇಯಗಳನ್ನು ವಿಮರ್ಶಾತ್ಮಕವಾಗಿ ತಿಳಿಯುವುದು ಅತ್ಯಗತ್ಯ. ಹಿಂದಿನ ಪ್ರಮೇಯಗಳನ್ನು ಒಪ್ಪಲಿ ಒಪ್ಪದಿರಲಿ ಅದು ಬೇರೆಯ ಮಾತು. ಆದರೆ ಒಂದು ಹೊಸ ಯುಗವನ್ನು ಸ್ಥಾಪಿಸಲು ಹೊರಟವನು ಹಿಂದಿನ ಯುಗವನ್ನೂ ವಿಶದವಾಗಿ ನೋಡುವುದಕ್ಕೆ ಹಿಂಜರಿಯಬಾರದು.

ಸಿದ್ಧಾಂತ ಮಾಡುವುದು ಸುಲಭವಲ್ಲ. ಕೇವಲ ಒಂದು ಅಧಿಕಾರ ದಲ್ಲಿರುವವರು ತಮ್ಮ ದರ್ಪಬಲದಿಂದ ಸಭೆಯಲ್ಲಿ ಮಂಡಿಸಿಬಿಟ್ಟರೆ ಆ ವಿಷಯ ಸಿದ್ಧಾಂತವಾಗಲಾರದು. ಯಾವ ಸಂಕುಚಿತ ದೃಷ್ಟಿಯನ್ನೂ ಇಟ್ಟುಕೊಳ್ಳದೆ ವಿಶದವಾಗಿ ಪೂರ್ವಪಕ್ಷವನ್ನು ಪರ್ಯಾಲೋಚಿಸುವುದು ಸಿದ್ಧಾಂತ ಮಾಡುವವನ ಆದ್ಯಕರ್ತವ್ಯ. ಆ ರೀತಿಯ ಮನೋಭಾವ ವನ್ನು ಹೊಂದಿರುವವರು ಈಗ ಎಲ್ಲಿ ಸಿಕ್ಕಾರು ? ರಾಜಕೀಯ ಕೈ ಚಳಕ ದಿಂದ ಅತ್ತಿಂದಿತ್ತ ತೂರಾಡುತ್ತಿರುವ ವ್ಯಕ್ತಿಗಳಲ್ಲಿ ಆ ವಿಶಾಲ ಮನೋ ಭಾವನೆ ಹೇಗೆ ತಾನೆ ಬೆಳೆದೀತು ?

ಅದರಿಂದಲೇ ಜನ ಯಾವ ಸಂಸ್ಥೆಯನ್ನು ಕಟ್ಟಲೂ ಅಸಮರ್ಥ ರಾಗಿದ್ದಾರೆ. ಇಂದು ಒಂದು ಸಂಸ್ಥೆ ಯಲ್ಲಿದ್ದವನು ನಾಳೆ ಇದ್ದಕ್ಕಿದ್ದಂತೆ ವಿರುದ್ಧ ಸಂಸ್ಥೆಯ ಪ್ರಮುಖ ಸದಸ್ಯನಾಗಿಬಿಡುತ್ತಾನೆ. ಗಾಳಿ ಬಂದಂತೆ ತೂರಲು ಪ್ರಯತ್ನಿಸುತ್ತಾನೆ. ಯಾರದೋ ಮೇಲಿನ ಅಭಿಮಾನದಿಂದ ಸ್ವತಂತ್ರ ವ್ಯಕ್ತಿತ್ವವನ್ನು ಕಳೆದುಕೊಳ್ಳುತ್ತಾನೆ. ಆ ಅಭಿಮಾನವಿರುವ ತನಕ ಅವನಿಗೆ ಆ ಸಂಸ್ಥೆಯಲ್ಲಿ ಶ್ರದ್ಧೆಯಿರುತ್ತದೆ. ಅದು ಹೋದ ತಕ್ಷಣ ದ್ವೇಷ ಕಾರುತ್ತ ಗಲಾಟೆಯೆಬ್ಬಿಸಲು ಶುರು ಮಾಡುತ್ತಾನೆ. ಅದಕ್ಕಾಗಿಯೆ

ಇಂದು ಭಾರತದಲ್ಲಿ ಶಾಂತಿ ಇಲ್ಲ" ಎಂದು ಸ್ವಾಮಿಗಳು ಆಳವಾದ ಅನು
ಭವದಿಂದ ಭಾವನೆಗಳನ್ನು ಹೊರತರುತ್ತಿದ್ದರು.

ಅವರ ಮಾತನ್ನು ಕೇಳುತ್ತಿದ್ದ ನನ್ನಲ್ಲೂ ವಿದ್ಯುತ್ಸಂಚಾರವಾ
ದಂತಿತ್ತು. ಎದುರಿಗೆ ಕುಳಿತಿದ್ದ ಸ್ವಾಮಿಗಳ ಸುತ್ತ ಏನೋ ಪ್ರತಿಭೆಯ
ಪ್ರದೀಪ ಸುತ್ತುತ್ತಿದ್ದಂತೆ ಭಾಸವಾಯಿತು.

"ಹಾಗಾದರೆ ಭಾರತದಲ್ಲಿ ಐಕಮತ್ಯವಿಲ್ಲದಿರಲು ಮುಖ್ಯಕಾರಣ
ಯಾವುದು? ಕೆಲವರು ಭಾರತದಲ್ಲಿರುವ ನೂರಾರು ವಿರುದ್ಧ ಮತಗಳೇ
ಕಾರಣವೆಂದು ಹೇಳುತ್ತಾರಲ್ಲ? ಮತಾಂತರದವರನ್ನು ದೂಷಿಸುವುದ
ರಿಂದಲೇ ಭಾರತ ಇನ್ನೂ ಹಿಂದುಳಿದಿದೆಯೆಂದು ಪ್ರಚಾರ ಮಾಡುತ್ತಿ
ರುವರಲ್ಲ" ಎಂದು ನನ್ನ ಸಂದೇಹವನ್ನು ಸ್ವಾಮಿಗಳ ಮುಂದಿಟ್ಟೆ

"ಭಾರತದಲ್ಲಿ ನೂರಾರು ಮತಗಳಿರುವುದು ನಿಜ. ಪ್ರತಿಯೊಂದು
ಮತವೂ ಬೇರೆ ಬೇರೆ ರೀತಿಯಲ್ಲಿ ತನ್ನ ಹಿರಿಮೆಯನ್ನು ಸಾಧಿಸಿಕೊಂಡಿದೆ.
ಆದರೆ ಅದರ ಉದ್ದೇಶ ಮತ ಮತಾಂತರದವರು ಕಚ್ಚಾಟವಾಡಬೇಕೆಂಬು
ದಲ್ಲ. ಹಾಗೆ ಕಚ್ಚಾಟವಾಡಿದರೆ ಅದು ಕೀಳುಮಟ್ಟದ ಹವ್ಯಾಸವನ್ನು
ತೋರಿಸುತ್ತದೆಯೇ ಹೊರತು ಶಾಸ್ತ್ರಜ್ಞಾನ ಗಂಭೀರತೆಗೆ ನಿದರ್ಶನವಾಗ
ಲಾರದು. ಪ್ರಕೃತಿಯನ್ನು ನಾನಾಮುಖಗಳಿಂದ ಕಾಣಬಯಸುವುದು
ಸ್ವಭಾವಸಿದ್ಧವಾಗಿದೆಯೆಂದು ದೊಡ್ಡವರು ಹೇಳುತ್ತಾರೆ. ಅಂತೆಯೆ
ಒಗಟರಂತೆ ಹೊಡೆದಾಟವಾಡುವುದು ಅವರಿಗೆ ಸಲ್ಲದು.

ರಾಷ್ಟ್ರೀಯ ಐಕಮತ್ಯವಿಲ್ಲದಿರುವುದಕ್ಕೆ ಭಾರತದಲ್ಲಿನ ವಿವಿಧ ಮತ
ಗಳು ಕಾರಣವಲ್ಲ. ಪ್ರಪಂಚಕ್ಕೆಲ್ಲ ಒಂದು ಮತವನ್ನೇರ್ಪಡಿಸಲು
ಸಾಧ್ಯವೇ ಇಲ್ಲ. ನಮ್ಮ ನಿಮ್ಮ ಜೀವನ ಹೇಗೆ ಒಂದೇ ರೀತಿಯಲ್ಲಿ
ನಡೆಯಲಸಾಧ್ಯವೋ ಅದೇ ರೀತಿ ನಮ್ಮಿಬ್ಬರ ಭಾವನೆಯಲ್ಲೂ ಏಕ
ಮುಖತೆ ಇರಲಾರದು. ಒಬ್ಬೊಬ್ಬನು ಒಂದೊಂದು ರೀತಿ ಸುಖವನ್ನು
ಬಯಸುತ್ತಾನೆ. ಅದಕ್ಕಾಗಿ ಅನೇಕ ದಾರಿಗಳನ್ನು ಹುಡುಕುತ್ತಾನೆ
ಆ ಪರದಾಟದಲ್ಲಿ ಮನುಷ್ಯನನ್ನು ಎಚ್ಚರಿಸಿ ಸರಿಯಾದ ದಾರಿಯಲ್ಲಿ

ಕರೆತರಲು ಮತಗಳು ಹುಟ್ಟಿಕೊಂಡಿವೆ. ಎಲ್ಲ ಮತಗಳೂ ಆಯಾಯ ಕಾಲಕ್ಕೆ ತಕ್ಕಂತೆ ಉದ್ಭವಿಸಿ ಲೋಕಹಿತಕ್ಕಾಗಿ ಶ್ರಮಿಸಿರುವುದರಲ್ಲಿ ಸಂದೇಹವಿಲ್ಲ.

ಸಾಮಾನ್ಯಗುಣಗಳಾದ ಸತ್ಯ, ದಯೆ, ಶೌಚ ಮೊದಲಾದುವು ಎಲ್ಲ ಮತಗಳಲ್ಲೂ ಅಡಕವಾಗಿದೆ. ಹಾಗೆ ನೋಡಿದಲ್ಲಿ ಭಾರತೀಯ ದರ್ಶನಗಳು ಜೀವನದ ಏರಿಳಿತಗಳಲ್ಲಿ ಸಮಾಧಾನ ನೀಡುವ ಸಾಧನಗಳಾಗಿವೆ.

ಪ್ರತ್ಯಕ್ಷವೊಂದೇ ಪ್ರಮಾಣವೆಂದು ಸಾರಿ ಜಗತ್ತಿನ ಆಗುಹೋಗುಗಳಿಗೆ ಅದರ ಸ್ವಭಾವವೇ ಕಾರಣವೆಂದು ಹೇಳಿದ ಚಾರ್ವಾಕಮತ ಸಾಮಾನ್ಯರಿಗೆ ಹಿಡಿಸುವುದರಲ್ಲಿ ಆಶ್ಚರ್ಯವೇನಿಲ್ಲ. ಹೆಸರಿಗೆ ತಕ್ಕಂತೆ ಚಾರ್ವಾಕನು ಆ ಕಾಲದಲ್ಲಿ ಲೋಕಾಯತನಾದನು. ಇಂದು ಕೂಡ ಸ್ವಭಾವದಿಂದಲೇ ಜಗತ್ತು ನಡೆಯುತ್ತಿದೆ ಎಂದು ತಿಳಿದು ನಮ್ಮ ನಮ್ಮ ಜೀವನದ ಸುಖದುಃಖಗಳಲ್ಲಿ ನಾವಾಗಿಯೇ ತಾಳ್ಮೆಯನ್ನು ಹೊಂದಲು ಚಾರ್ವಾಕಮತ ಸಹಕಾರಿಯಾಗಿದೆ.

ನಮ್ಮ ಜೀವನದಲ್ಲಿ ಒಂದೊಂದು ವೇಳೆ ಬಹಳ ಬೇಸರವಾಗಬಹುದು. ಅದರಿಂದ ಆಶಾಭಂಗವೊದಗುವ ಪ್ರಸಂಗವೂ ಬರಬಹುದು. ಆಗ ಎಲ್ಲವೂ ಕ್ಷಣಿಕವೆಂಬ ಬೌದ್ಧವಾದವನ್ನರಿತು ವೈರಾಗ್ಯಭಾವ ತಾಳಿದರೆ ನಮ್ಮ ಜೀವನ ಸುಗಮವಾಗುವುದು.

ನಮ್ಮ ಅನುಭವಕ್ಕೆ ನಿಲುಕಿದ ಒಂದು ವಸ್ತು ಸತ್ಯವಾಗಿ ಕಾಣಬಹುದು. ಮತ್ತೊಂದು ರೀತಿಯಲ್ಲಿ ಅಸತ್ಯವಾಗಿಯೂ ಕಾಣಬಹುದು. ಆದ್ದರಿಂದ ವಿಚಾರ ಮಾಡಲು ಹೊರಟರೆ ಎಲ್ಲ ವಸ್ತುವೂ ಅನೇಕ ಪ್ರಕಾರವುಳ್ಳುದೆಂದು ತಿಳಿಯಬರುತ್ತೆ. ಅದನ್ನೇ ಜೈನವಾದವು ಹೇಳುವುದು.

ಎಲ್ಲಕ್ಕಿಂತಲೂ ಜ್ಞಾನಕ್ಕೆ ಪ್ರಾಧಾನ್ಯತೆಯನ್ನು ಕೊಟ್ಟ ವಿಜ್ಞಾನವಾದ ಮನುಷ್ಯನು ಯಥಾರ್ಥಜ್ಞಾನವನ್ನು ಸಂಪಾದಿಸಲು ಸಹಕಾರಿ.

ಎಲ್ಲ ವಿಕಾರಗಳೂ ಪ್ರಕೃತಿಗೇ ಹೊರತು ಪುರುಷನಿಗಲ್ಲ ಎಂಬ ಸಾಂಖ್ಯವಾದ ಆತ್ಮನ ಶುದ್ಧಸ್ವರೂಪವನ್ನು ಎತ್ತಿಹಿಡಿಯುತ್ತದೆ.

ಮನುಷ್ಯನು ವಿಹಿತ ಕರ್ಮವನ್ನಾಚರಿಸಬೇಕೆಂದೂ, ಎಲ್ಲಕ್ಕೂ ಕರ್ಮವೇ ನಿಯಾಮಕವೆಂಬ ಮೀಮಾಂಸಕರ ವಾದ ಮನುಷ್ಯನನ್ನು ಜಡತ್ವ ಬಿಡುವಂತೆ ಪ್ರೇರೇಪಿಸುತ್ತದೆ.

ಪ್ರಪಂಚ ಮಿಥ್ಯೆ, ಬ್ರಹ್ಮ ಮಾತ್ರ ಸತ್ಯ ಎಂಬ ಅದ್ವೈತವಾದ, ಬ್ರಹ್ಮ ಜಗತ್ತಿನ ಉಪಾದಾನಕಾರಣನೆಂಬ ವಿಶಿಷ್ಟಾದ್ವೈತವಾದ, ಬ್ರಹ್ಮ ಪ್ರಪಂಚದಿಂದ ಭಿನ್ನ ಎಂಬ ದ್ವೈತವಾದ–ಎಲ್ಲವೂ ಮೇಲ್ಮಟ್ಟದ ಮಾನವ ನಿಗೆ ವಿಚಾರಪ್ರಚೋದಕವಾಗಿದೆಯೆಂದರೆ ಅತಿಶಯೋಕ್ತಿಯಲ್ಲ. ಎಲ್ಲ ದರ್ಶನಕಾರರೂ ಅನುಭವ ಪಾಂಡಿತ್ಯಗಳನ್ನು ಗಳಿಸಿಕೊಂಡು ಅತಿವಿನಯ ದಿಂದ ಚರ್ಚಿಸಲು ಹೊರಟಿದ್ದಾರೆ. ಅಂಥವರಿಗೆ ಆವಾಸಸ್ಥಾನವಾಗಿದ್ದ ಭಾರತ ಇಂದು ಕೀಳುಭಾವನೆಯಲ್ಲೇ ಸದಾ ನಿರತರಾಗಿರುವ ಜನಕ್ಕೆ ಮನೆ ಮಾಡಿಕೊಟ್ಟಿದೆ'' ಎಂದು ಸ್ವಾಮಿಗಳು ಕೆಚ್ಚಿದೆಯಿಂದ ಮಾತನಾಡಿ ದರು.

"ಸ್ವಾಮಿಗಳೇ, ನಿಮ್ಮಂಥವರು ಹೊರಕ್ಕೆ ಬಂದು ಜನಗಳಿಗೆ ತತ್ತ್ವೋಪದೇಶ ಮಾಡಬೇಕು. ಹಾಗಿಲ್ಲದಿದ್ದರೆ ಯಾವುದೋ ಮೂಲೆ ಯಲ್ಲಡಗಿರುವ ನಿಮ್ಮ ಪಾಂಡಿತ್ಯ ಹೇಗೆ ತಾನೆ ಇತರರಿಗೆ ತಿಳಿಯಬೇಕು?" ಎಂದು ನಾನು ಸ್ವಾಮಿಗಳನ್ನು ಕೇಳಿದೆ.

"ವೇದಿಕೆಯ ಮೇಲೆ ನಿಂತು ಪ್ರಚಾರ ಮಾಡುವವರ ಸ್ವಭಾವ ಜನಕ್ಕೆ ಈಗಾಗಲೇ ತಿಳಿದಿದೆ. ಅಂದ ಮೇಲೆ ತತ್ತ್ವೋಪದೇಶ ಮಾಡು ವವರು ಆ ಮಾರ್ಗ ಹುಡುಕುವುದು ಒಳ್ಳೆಯದಲ್ಲ.

ಭಾರತೀಯ ಸಂಸ್ಕೃತಿಯನ್ನು ಹೊರಗಿನಿಂದ ಹೇಳಿಕೊಡಬೇಕಾದ ಪ್ರಮೇಯವಿಲ್ಲ. ಅದು ಸರ್ವಜನರ ಹೃದಯದಲ್ಲೇ ಅಡಕವಾಗಿದೆ. ಆದ್ದರಿಂದ ತಮ್ಮ ತಮ್ಮ ಹೃದಯವನ್ನೇ ತುಡುಕಿ ನೋಡಬೇಕಾದುದು ಅವರ ಕರ್ತವ್ಯ. ಹಾಗಾದ ಮೇಲೆಯೆ ಭಾರತಕ್ಕೆ ಶಾಂತಿ; ಇಲ್ಲದಿದ್ದರೆ ಬರಿಯ ಮಾತಃಗಾರರಿಂದ ಭಾರತ ಹಾಳಾಗಿ ಹೋದೀತು.

ಭಾರತದ ಸಂಸ್ಕೃತಿ ಇಂದಿನಿಂದ ಬೆಳೆದು ಬಂದುದಲ್ಲ. ಅದು ಸನಾತನವಾದದ್ದು. ಆದರಿಂದಲೇ ಕೆಲವು ವೇಳೆ ಇಳಿಮುಖವಾಗಿ ಕಂಡರೂ ಮತ್ತೆ ಶಾಂತಿವಾಹಕವಾಗಿ ಬರುವುದರಲ್ಲಿ ಸಂಶಯವಿಲ್ಲ. ಸ್ವಲ್ಪ ವರ್ಷಗಳಲ್ಲೇ ಭಾರತ ವಿಶ್ವಶಾಂತಿ ದೂತನೆಂದು ಹೆಸರು ಪಡೆಯುವ ಕಾಲ ಬರುತ್ತದೆ.

ನಾನು ಇಲ್ಲಿಂದಲೇ ಶಾಂತಿಗಾಗಿ ಶ್ರಮಿಸುತ್ತೇನೆ. ಹಿಂದಿನ ಕಾಲ ದಲ್ಲಿ ಕಾಡಿನಲ್ಲೇ ವಾಸಿಸುತ್ತಿದ್ದ ಋಷಿಗಳು ತಮ್ಮ ಬುದ್ಧಿಬಲದಿಂದ ಇಡೀ ರಾಜ್ಯಭಾರಕ್ರಮದ ಮೇಲೆ ಉತ್ತಮ ಸಲಹೆಗಳನ್ನು ನೀಡುತ್ತಿದ್ದರಂತೆ!" ಎಂದು ಸ್ವಾಮಿಗಳು ಜಾಗ ಬಿಟ್ಟು ಕದಲಲಿಲ್ಲ.

"ಹಾಗಾದರೆ ನಾನೂ ನಿಮ್ಮ ಬಳಿಯಲ್ಲಿಯೇ ಇದ್ದುಬಿಡುತ್ತೇನೆ" ಎಂದು ನಾನು ಸ್ವಾಮಿಗಳ ಸನ್ನಿಧಿಯಲ್ಲೇ ಕಾಲ ಕಳೆದುಬಿಡೋಣವೆಂದು ನಿರ್ಧರಿಸಿದೆ.

"ಇಲ್ಲ ; ಅದು ಮಾತ್ರ ಆಗದು. ನಾನು ಮಾಡುವ ಕೆಲಸವನ್ನು ನೀನು ಮಾಡಲಾಗದು.

ನಿನ್ನ ಕಾರ್ಯಕ್ಷೇತ್ರ ಬೇರೆಯ ಕಡೆ ಇದೆ. ಅಲ್ಲಿ ಹೋಗಿ ನಮ್ಮ ಸಂಸ್ಕೃತಿಗನುಗುಣವಾಗಿ ದುಡಿಯಬೇಕಾದುದು ನಿನ್ನ ಕರ್ತವ್ಯ. ಹಾಗೆ ಪ್ರತಿಯೊಬ್ಬರೂ ತಮ್ಮ ತಮ್ಮ ಕಾರ್ಯಕ್ಷೇತ್ರಗಳನ್ನು ಪರಿಶುದ್ಧಗೊಳಿ ಸುತ್ತಾ ಹೊರಟರೆ ಭಾರತ ವೈಭವಯುತವಾಗುವುದರಲ್ಲಿ ಸಂಶಯವಿಲ್ಲ" ಎಂದು ಸ್ವಾಮಿಗಳು ನನ್ನನ್ನು ಮುಂದೆ ಮುಂದೆ ಪ್ರಯಾಣ ಮಾಡಲು ಹುರಿದುಂಬಿಸಿದರು.

ಸ್ವಾಮಿಗಳಿಗೆ ನಮಸ್ಕರಿಸಿ ಪ್ರಯಾಣಕ್ಕೆ ಸಿದ್ಧನಾದೆ. ಸ್ವಾಮಿಗಳು ಮನಃಪೂರ್ವಕವಾಗಿ ಆಶೀರ್ವದಿಸಿದರು. ಆಗಲೇ ನನ್ನಲ್ಲಿ ವೈರಾಗ್ಯದ ಛಾಯೆ ಮೂಡಿತ್ತು. ಆದರೆ ಆ ವೈರಾಗ್ಯ ಜೀವನದ ಅನುಭವದಿಂದ ಬಂದ ನಿಶ್ಚಯವಾಗಿತ್ತು. ಅಂದಮೇಲೆ ಮುಂದೆ ಹೆಣ್ಣು ಹೊನ್ನುಗಳ ಮಧ್ಯೆ ಸಿಕ್ಕಿಕೊಳ್ಳಬೇಕಾದ ಪ್ರಮೇಯವಿರಲಿಲ್ಲ. ಆದರೂ ನನಗೆ ವಿಚಿತ್ರತರ

ಭಾವನೆಗಳನ್ನು ಪರಿಚಯ ಮಾಡಿಸಿದ, ನನ್ನ ಜೀವನದಲ್ಲಿ ಭೇಟಿ ಯಾದ ವ್ಯಕ್ತಿಗಳನ್ನು ಮತ್ತೊಮ್ಮೆ ನೆನೆಸಿ ಮುಂದೆ ಹೊರಟೆ.

ಕಡೆಗೆ **ಇಲ್ಲಿಗೆ** ಬಂದೆ.

ಇದು ದೇವರಿರುವ ಗುಡಿ. ಆದರೂ ಸ್ವಾಮಿಗಳಿದ್ದ ಆ ಸ್ಥಳದಷ್ಟು ಶಾಂತಿ ಇಲ್ಲಿಲ್ಲ. ಇಷ್ಟಾಗಿ ಸ್ವಾಮಿಗಳಿದ್ದೆಡೆಯಲ್ಲಿ ಯಾವ ದೇವರೂ ಇರಲಿಲ್ಲ. ದೇವರಿದ್ದರೂ ಈ ಸ್ಥಳದಲ್ಲಿ ಮುಚ್ಚುಮರೆ ಮಾಡುವವರೇ ಜಾಸ್ತಿ ಇರಲು ಕಾರಣವೇನು? ಇಂಥ ಸ್ಥಳವನ್ನು ಗುಡಿಯೆಂದು ಕರೆಯಲು ಸಾಧ್ಯವೇ? ಈ ಸ್ಥಳದಲ್ಲಿ ದೇವರಿಲ್ಲದಿದ್ದರೂ ದೇವರಿದ್ದಾರೆಂದು ಜನ ಏಕೆ ಹೇಳುತ್ತಿದ್ದಾರೆ?

ದೇವರಿಲ್ಲದ ಈ ಸ್ಥಳವನ್ನು ಗೋರಿಯೆಂದೇ ಕರೆಯುತ್ತೇನೆ. ಈಗಾಗಲೆ ನನ್ನ ಕಥೆಯನ್ನು ಕೇಳಿದ ದೇವರು ಈ ಗುಡಿಯನ್ನು ಬಿಟ್ಟೋಡಿದ್ದಾನೆ. ಈಗಲೂ ನಡೆಯುತ್ತಿರುವ ಗಲಭೆಗಳನ್ನು ನಿಲ್ಲಿಸಲು ಹೊರಟಿದ್ದಾನೆ. ಗುಡಿಯಲ್ಲೇ ಕುಳಿತರೆ ಆ ಕೆಲಸವಾಗಲಾರದೆಂದು ಅವನೇ ತಿಳಿದಿದ್ದಾನೆ. ಅದಕ್ಕಾಗಿಯೆ ದೇವರು ದೊಡ್ಡ ಪ್ರಯಾಣವನ್ನು ಕೈಗೊಂಡಿದ್ದಾನೆ.

ಇದ್ದಕಿದ್ದಂತೆ ನನ್ನ ತಲೆ ಬಿಸಿಯಾಗುತ್ತಿದೆ.

ಆದರೆ ದೇವರ ಮುಂದೆ ಕಥೆಯನ್ನು ಶಾಂತವಾಗಿಯೇ ಹೇಳಿದ್ದೇನೆ. ಅಷ್ಟೇ ನನಗೆ ಸಂತೋಷ.

ಗುಡಿಯ ಗೋಪುರವನ್ನು ಇನ್ನೂ ಅಲಂಕರಿಸುತ್ತಿದ್ದಾರೆ.

ರಕ್ತಪಾತ ಹರಿಯುತ್ತಿರುವ ಈ ಸಮಯದಲ್ಲಿ ಇದು ಗುಡಿಯ ಗೋಪುರವಲ್ಲ — **ಗೋರಿ ಗೋಪುರ.**

ಗುಡಿಯ ಸಂಕೇತವನ್ನು ಅಳಿಸಿ ಗೋರಿಯ ಲಕ್ಷಣವನ್ನು ತೋರಿಸಲು ಈ ಗೋಪುರದ ಮೇಲೆಯೇ ರಕ್ತವನ್ನು ಅರ್ಪಿಸುತ್ತೇನೆ.

ಆಗ ಎತ್ತರದಲ್ಲಿ ನಿಂತ ಗೋಪುರವು ನನ್ನ ರಕ್ತದ ಕಲೆಯಿಂದ ಅಲಂಕೃತವಾಗಲಿ!

ಸೂರ್ಯನು ಬರುವುದರೊಳಗಾಗಿ ಆ ಕೆಲಸವನ್ನು ನೆರವೇರಿಸಬೇಕು. ಆಮೇಲೆ ಜನರು ಬಂದು ನೋಡಲಿ!

ಬಾಳಿನ ಮಂತ್ರವನ್ನು ಹೇಳಿದ್ದಾಯಿತು. ನನ್ನೊಡನಿದ್ದವರನ್ನು ಮತ್ತೊಮ್ಮೆ ನೆನೆಸಿಕೊಳ್ಳುತ್ತೇನೆ.....

ನಾಳೆಯ ದಿನ ಇಲ್ಲಿಯ ಜನ ನನ್ನನ್ನು ಗೋರಿ ಗೋಪುರವನ್ನು ಕಟ್ಟಿದ ಅದ್ವಿತೀಯ ಶಿಲ್ಪಿಯೆಂದು ತಿಳಿಯಲಿ!...." ಎಂದು ನಿರಾಶ್ರಿತನು ತನ್ನ ಮಾತುಗಳನ್ನು ಮುಗಿಸಿ ಸೊಂಟದಲ್ಲಿದ್ದ ಸಣ್ಣ ಕತ್ತಿಯನ್ನು ಹಿಡಿದೆಳೆದು ಕೈಯ್ಯನ್ನು ಕತ್ತರಿಸಿಕೊಂಡನು!

ರಕ್ತ ರಭಸದಿಂದ ಹರಿಯತೊಡಗಿತು.

ನಿರಾಶ್ರಿತನು ಉಳಿದ ಒಂದೇ ಕೈಯಿನಿಂದ ನೆಲಕ್ಕೆ ಬಿದ್ದ ರಕ್ತವನ್ನು ಬೊಗಸೆಯಲ್ಲಿ ತೆಗೆದುಕೊಂಡು ಗೋಪುರಕ್ಕೆ ಎರಚಿದನು.

ಗೋಪುರದ ಸುತ್ತಲೂ ರಕ್ತದ ಕಲೆ ಅಲಂಕರಿಸಿತು!

ನಿರಾಶ್ರಿತನು ಕೆಳಕ್ಕೆ ಬಿದ್ದನು.

ಮತ್ತೊಮ್ಮೆ, "ರಕ್ತ! ರಕ್ತ! ಜಗತ್ತೆಲ್ಲ ರಕ್ತಮಯವಾಗಿದೆಯಲ್ಲ!...." ಎಂದು ಅರಚಿದನು.

ಪ್ರಾಣ ಪಕ್ಷಿ ಹಾರಿಹೋಯಿತು.

ಅಷ್ಟು ಹೊತ್ತಿಗೆ ಸರಿಯಾಗಿ ಗೋಪುರದ ಮೇಲಿನ ರಕ್ತವನ್ನು ಪ್ರತಿಬಿಂಬಿಸುವಂತೆ ಸೂರ್ಯನೂ ಕೂಡ—ತನ್ನ ಬರುವಿಕೆಯನ್ನು ಸೂಚಿಸಲು—ಆಗಸದಲ್ಲಿ ಕೆಂಪು ಬಣ್ಣವನ್ನು ಹರಡಿದ್ದನು!......

ಇತ್ತ ನಿರಾಶ್ರಿತನನ್ನು ಹಿಡಿಯಲು ಬಂದ ಕಾವಲುಗಾರರಿಗೆ ಕಥಾ ಶೋಕದಿಂದ ಎಚ್ಚರವಾಯಿತು. ಕಥೆಯನ್ನು ಹೇಳುತ್ತಲೇ ನಿರಾಶ್ರಿತನು ಆತ್ಮಹತ್ಯೆಯನ್ನು ಮಾಡಿಕೊಳ್ಳುವನೆಂದು ಅವರು ತಿಳಿದಿರಲಿಲ್ಲ.

ತಕ್ಷಣ ತಾವು ಅಧಿಕಾರಿಯು ಹೇಳಿ ಕಳುಹಿಸಿದಂತೆ ನಡೆಯಲಾಗ ಲಿಲ್ಲವೆಂದು ಹೆದರಿದರು. ಇದಕ್ಕೆ ತಾವು ನಿರಾಶ್ರಿತನ ಕಥೆಯನ್ನು ಕೇಳುತ್ತ ಅವನನ್ನು ಮುಂದುವರಿಸಲು ಅವಕಾಶಕೊಟ್ಟಿದ್ದೇ ಕಾರಣವೆಂದು ತಿಳಿ ದರು.

ನಿರಾಶ್ರಿತನ ಕಥೆಯನ್ನು ಕೇಳಿದ ಕಾವಲುಗಾರರು ನಿಜವಾಗಿಯೂ ಮರುಕಪಟ್ಟಿದ್ದರು. ಅದನ್ನು ಮತ್ತೊಮ್ಮೆ ನೆನೆದು ಕಣ್ಣೀರು ಹಾಕಿ ದರು.

ಆದರೆ ಅಧಿಕಾರಿಯ ಅಪ್ಪಣೆಯಂತೆ ನಡೆದಿರಲಿಲ್ಲ.

ಕಾರ್ಯಸಾಧನೆ ಮಾಡದಿದ್ದರೂ ಧೈರ್ಯವಾಗಿ ಅಧಿಕಾರಿಯನ್ನು ನೋಡಲು ಕಾವಲುಗಾರರು ಹಿಂಜರಿದರು. ಇತ್ತ ತಮ್ಮ ಕೆಲಸಕ್ಕೇ ಧಕ್ಕೆ ಬರುವ ಪ್ರಸಂಗ ಒದಗಿತು.

ನಿರಾಶ್ರಿತನ ಕಥೆಯನ್ನು ಕೇಳ ಹೊರಟ ಕಾವಲುಗಾರರೂ ನಿರಾಶ್ರಿತರಾದರು!



## ಇದೇ ಲೇಖಕರ ಇತರ ಕೃತಿಗಳು

—: ಅಚ್ಚಿನಲ್ಲಿ :—

ಸಂಸ್ಕಾರ (ಬೃಹತ್ ಕಾದಂಬರಿ)

ಸ್ಮಶಾನ ರಸಿಕ (ಸಣ್ಣ ಕತೆಗಳು)

ಜಾರಿದ ಜಾರ್ಜೆಟ್ (ಪ್ರಹಸನ)

Temple Road (Short Stories)

'ಗೋರಿ-ಗೋಪುರ'ವೆಂಬ ಅತ್ಯುತ್ತಮ ವಿಚಾರಪೂರಿತ ಕಾದಂಬರಿ
ಕನ್ನಡ ಸಾಹಿತ್ಯರಂಗವನ್ನು ಪ್ರವೇಶಿಸುತ್ತಿರುವ ಶ್ರೀ ಡಿ ವಿ. ರಾಘವೇ
೧೯೩೨ ನೆ ಇಸವಿ ಜುಲೈ ೧ರಂದು ಮೈಸೂರಿನಲ್ಲಿ ಜನಿಸಿದರು.

ಚಿಕ್ಕಂದಿನಿಂದಲೂ ಸುತ್ತುಮುತ್ತಲಿನ ಆಗುಹೋಗುಗಳನ್ನು ತ
ಆದ ವಿಮರ್ಶಾತ್ಮಕ ದೃಷ್ಟಿಯಿಂದ ಅವಲೋಕಿಸಿ ಕನ್ನಡ ಸಾಹಿತ್ಯದಲ್ಲಿ ಚಿ
ಉಳಿಯಬಹುದಾದಂಥ ಸಣ್ಣಕತೆಗಳನ್ನು ರಚಿಸುತ್ತ ಬಂದಿದ್ದಾರೆ. ಇಷ್ಟರಲ್ಲೇ
ಪ್ರಕಟವಾಗಲಿವೆ.

ರಾಘವೇಂದ್ರರು ಅನೇಕ ವಿದ್ಯಾರ್ಥಿ ಸಂಘ ಸಂಸ್ಥೆಗಳಲ್ಲಿ ಕಾರ್ಯ
ಗಳಾಗಿಯೂ ಅಧ್ಯಕ್ಷರಾಗಿಯೂ ಪ್ರಮುಖಪಾತ್ರ ವಹಿಸಿ ವಿಶೇಷ ಅನುಭವ
ಕೊಂಡಿದ್ದಾರೆ. ಶ್ರೀಯುತರು ೧೯೫೨ ರಲ್ಲಿ ಬಿ.ಎಸ್‌ಸಿ ಡಿಗ್ರಿ ಪಡೆದರು.

ಶ್ರೀಯುತರ ಬರವಣಿಗೆಯಲ್ಲಿ ಸ್ವತಂತ್ರ ವಿಚಾರಧಾರೆ ನಿರಾತಂಕ
ಸಾಗುತ್ತದೆ. ಅಂತೆಯೆ ತುಂಬಿದ ಸಭೆಯಲ್ಲಿಯೂ ನಿರ್ದಾಕ್ಷಿಣ್ಯವಾಗಿ ಮಾತನಾ
ಶಕ್ತಿ ಅವರಿಗೆ ದೈವದತ್ತವಾಗಿದೆ.

ಭಾರತದಲ್ಲಿ ರೌದ್ರರೂಪ ತಾಳಿ ನಾಟ್ಯವಾಡುತ್ತಿರುವ ನೂರಾರು ಸ
ಗಳ ನಾನಾ ಮುಖಗಳನ್ನು ಆಳವಾಗಿ ಪರಿಶೀಲಿಸಿ ಕೆಚ್ಚೆದೆಯಿಂದ ನಿರೂಪಿ
ಸಾಮರ್ಥ್ಯವನ್ನು ರಾಘವೇಂದ್ರರು ಅನಾಯಾಸವಾಗಿ ಸಂಪಾದಿಸಿದ್ದಾರೆ.

ಕೇವಲ ಚಿಕ್ಕ ವಯಸ್ಸಿನಲ್ಲೇ ವಿಶಿಷ್ಟ ವರ್ಚಸ್ಸನ್ನು ಬೆಳೆಸಿರುವ ರಾಘವೆ
ರಿಂದ ಕನ್ನಡ ನುಡಿ ಇನ್ನೂ ಅನೇಕ ಅನರ್ಘ್ಯ ಉಡುಗೊರೆಗಳನ್ನು ಃ
ಬಹುದು.